ಶ್ರೀ ಗ್ರ. ಮಾಲಾ, ಆನಂದವನ ೩೩ —

# ಯೋಗಾಯೋಗ

ಅಥವಾ

## ಕಾಕತಾಲೀಯ ನ್ಯಾಯ

ಭಿ. ಪ. ಕಾಳೆ

ಭಿ. ಪ. ಕಾಳೆ,
ಶ್ರೀ ಶೇಷಾಚಲ ಗ್ರಂಥಮಾಲಾ, ಆನಂದವನ (ಅಗಡಿ)

[illegible] ೧೯೪೦

೧-೮-೦ ರೂ

# ಪ್ರಕಾಶಕರ ಎರಡು ಮಾತುಗಳು

ಇದೊಂದು ಹೊಸ ನಮೂನೆಯ ಸಾಮಾಜಿಕ ಕಾದಂಬರಿ. ಸುಪ್ರಸಿದ್ಧ ಮರಾಠೀ ಲೇಖಕರಾದ ಶ್ರೀಮಾನ್ ನ. ಚಿ. ಕೇಳಕರರ ಪುಸ್ತಕದ ಅನುವಾದವಾಗಿದೆ. ಇದು ಬರೇ ಕಥೆ-ಕಾದಂಬರಿಯಾಗಿರದೆ, ಹಲವು ಉಚ್ಚ ತತ್ತ್ವಗಳನ್ನು ಪ್ರತಿಪಾದಿಸುವ ವಿಷಯಗಳಿಂದ ತುಂಬಿದ ಪುಸ್ತಕವಾಗಿದೆ. ಇದನ್ನು ಪ್ರತ್ಯಕ್ಷ ಓದಿ ನೋಡದ ಹೊರತು ಇದರ ಗುಣಾವಗುಣಗಳು ತಿಳಿಯಲಾರವು.

ಇಂಥ ಅತ್ಯುತ್ತಮ ಪುಸ್ತಕವನ್ನು ಕನ್ನಡಕ್ಕೆ ಪರಿವರ್ತಿಸಲು ಅನುಜ್ಞೆಯನ್ನಿತ್ತದ್ದಕ್ಕಾಗಿ ನಾವು ಶ್ರೀಮಾನ್ ಕೇಳಕರರಿಗೆ ಅತ್ಯಂತ ಕೃತಜ್ಞರಾಗಿರುತ್ತೇವೆ.

ನಮ್ಮ ಕನ್ನಡ ವಾಚಕರು ಎಂದಿನಂತೆ ನಮ್ಮ ಪುಸ್ತಕಗಳಿಗೆ ಪ್ರೋತ್ಸಾಹನವೀಯುವರೆಂಬ ಭರವಸೆಯಿಂದಲೇ ಪ್ರಸ್ತುತದ ಮಹಾಯುದ್ಧದ ಮೂಲಕ ಪ್ರಿಂಟಿಂಗಿನ ಸಲಕರಣೆ-ಕಾಗದ ಮುಂತಾದವುಗಳ ಬೆಲೆಯು ಮಿತಿಮೀರಿ ಹೆಚ್ಚಿದ್ದರೂ ಕೂಡ ನಾವು ಈ ಪುಸ್ತಕವನ್ನು ಪ್ರಕಟಿಸುವ ಸಾಹಸಕ್ಕೆ ತೊಡಗಿರುವೆವು. ಕನ್ನಡಿಗರ ಉದಾರ ಆಶ್ರಯವು ವೃದ್ಧಿಂಗತವಾಗಿ ದೊರೆತರೆ, ಇಂಥ ಹಲವು ಉತ್ತಮ ಪುಸ್ತಕಗಳನ್ನು ಪ್ರಕಟಿಸಿ ಕನ್ನಡಮ್ಮನ ಅಡಿದಾವರೆಗಳಿಗೆ ಅರ್ಪಿಸುವ ಇಚ್ಛೆಯಿದೆ. ಅದನ್ನು ಶ್ರೀಸದ್ಗುರುವು ಪೂರೈಸಲಿ

ತಾ|| 15-9-40 — ಪ್ರಕಾಶಕ

# ಈ ಪುಸ್ತಕದಲ್ಲೇನಿದೆ?

# ಯೋಗಾಯೋಗ

ಅಥವಾ

## ಕಾಕತಾಲೀಯ ನ್ಯಾಯ

ಪಪಾ, ವ್ಯಾಚೆರ್ ಪ್ಲೀಜ!

(ಅಪ್ಪಾ, ಬೆಂಕಿಕಡ್ಡಿಪ್ರೊಟ್ಣ ಕೊಡುವಿರಾ?)

ಠಣ,-ಠಣ,-ಠಣ,-ಠಣ,-ಠಣ,-ಠಣ,-ಠಣ,-ಠಣ್ಣ

ಟಪ-ಟಪ-ಟಪ-ಟಪ-ಟಪ-ಟಪ-ಟಪ-ಟಪ್ಪ.

ಗಡಿಯಾರದೊಳಗಿನ ಬಟ್ಟಲ ಮೇಲೆ ಠಣ ಠಣ್ಣ ಎಂದು ಎಂಟರ ಪೆಟ್ಟು ಬೀಳಲಿಕ್ಕೂ ಚಂದೂಲಾಲನ ಕುದುರೆಯು ಟಪ ಟಪ್ಪ ಎಂಬ ಕೊನೆಯ ಎಂಟು ಹೆಜ್ಜೆಗಳು ಅಗಸಿಯೊಳಗಿನ ಫರಸುಗಲ್ಲ ಮೇಲೆ ಬಿಳಲಿಕ್ಕೂ ಗಂಟೇಬಿದ್ದಿತು!

ಈ ಯೋಗಾಯೋಗವು ವಿಚಿತ್ರವಲ್ಲವೇ? ಮತ್ತು ಲೋಕದ ಅಮರ್ಯಾದ ಜೀವನದಲ್ಲಿ ಇಂಥ ಯೋಗಾಯೋಗಗಳು ಇಲ್ಲವೆ ಕಾಕತಾಲೀಯ ನ್ಯಾಯಗಳು ಕ್ಷಣಕ್ಷಣಕ್ಕೆ ಕೂಡಿಬರುತ್ತಲೇ ಇವೆ. ಈ ಕ್ಷುಲ್ಲಕ ಸಂಗತಿಗಳನ್ನು ಈಶ್ವರೀಸಂಕೇತಗಳೆಂದು ಹೇಳುವುದರಿಂದ ಮನುಷ್ಯನಿಗೆ ತಾನೊಂದು ತತ್ವಜ್ಞಾನವನ್ನು ಪ್ರತಿಪಾದಿಸಿದೆನೆಂದೆನಿಸುತ್ತದೆ; ಆದರೆ ತನಗೆ ಸಂಬಂಧಿಸಿದ ಕ್ಷುದ್ರ ¯ˉಗತಿಗಳಲ್ಲಿ ದೇವರನ್ನು ಜಗ್ಗಿಕೊಳ್ಳುವದರಿಂದೇನಾದರೂ ಸ್ವತಃ ಮಾ ವನು ದೊಡ್ಡವನಾಗುವನೇ! ಘಟನೆಗಳ ಅನುಪ್ರಾಸ ಇಲ್ಲವೆ ಗಮಕಗ.ನ್ನು ಕೂಡಿಸುವದಕ್ಕಿಂತ ಅಥವಾ ಅವುಗಳ ಜೋಲಿಹಿಡಿಯುತ್ತ ಕೂಡ್ರುವದಕ್ಕಿಂತ ದೇವರಿಗೆ ಬೇರೆ ಎಷ್ಟೋ ಮಹತ್ವದ ಕೆಲಸಗಳಿರುತ್ತವೆಂಬದು ಖಂಡಿತವು.

ಆದರೆ ಯೋಗಾಯೋಗದ ಸಂಭಾವನೆಯು ಮಾತ್ರ ಯಾವ ಬಗೆಯ ಮನುಷ್ಯನು ಲಭಿಸುವನೋ ಅದರಂತೆಯೇ ಆಗುತ್ತಿರುತ್ತದೆ. ಯೋಗಾಯೋಗವು ಭೋಳೆಮನುಷ್ಯನಿಗೆ ಚಮತ್ಕಾರವಾಗಿಯೂ, ಅಂಜುಬುರುಕನಿಗೆ ಭೀತಿಪ್ರದವಾಗಿಯೂ, ದಿಟ್ಟನಿಗೆ ಆಹ್ವಾನವಾಗಿಯೂ, ಮುಂದರಿದು ಮಾಡುವವನಿಗೆ ಸುಮುಹೂರ್ತವಾಗಿಯೂ, ಹಿಂಜರಿಯುವವನಿಗೆ ನೆವವಾಗಿಯೂ ಮತ್ತು ವಿವೇಚಕನಿಗಂತೂ ಕೇವಲ ವಿನೋದವಾಗಿಯೂ ತೋರುತ್ತದೆ!

ಯಾವನೊಬ್ಬ ಹಳ್ಳಿಯ ಕೆಂಚನು ಬಾಯಲ್ಲಿ ನೀರು ತುಂಬಿಕೊಂಡು ನೆಲದ ಮೇಲೆ ಉಗುಳಲು, ಅದರೊಳಗಿಂದ ಒಂದಾನೊಂದು ಸುಂದರ ಚಿತ್ರಾಕೃತಿಯು ಉಂಟಾಗಬಹುದು; ಆದರೆ ಚಿತ್ರಕಲಾಪ್ರದರ್ಶನದಲ್ಲಿ ಅವನಿಗಾರಾದರೂ ಇನಾಮು ಕೊಡಬಲ್ಲರೇ?

ಎಲೈ ಯೋಗಾಯೋಗವೇ! ನೀನು ಇದುವರೆಗೆ ಈ ಲೋಕದಲ್ಲಿ ಎಷ್ಟೋ ಮಂದಿಯ ಮನಸುಗಳನ್ನು ಭ್ರಮಿಸಿಬಿಟ್ಟಿರುತ್ತೀ! ಎಷ್ಟೋ ಜನರ ಮನಸುಗಳನ್ನು ತಣಿಸಿಬಿಟ್ಟಿರುತ್ತೀ! ಕೂಟಿನಲ್ಲಿ ನಿಂತುಕೊಂಡು ಸಂಜ್ಞೆಯಿಂದ ಎಡ-ಬಲಗಳನ್ನು ತಿಳಿಸುವ ವಿದ್ಯೆಯಲ್ಲಿ ಅಜ್ಞನಾದ ಪೋಲೀಸ ಶಿಪಾಯಿಯಂತೆ ನೀನು ನಿಷ್ಕಾರಣವಾಗಿ ಎಷ್ಟೋ ವಾಹನಗಳ ವೇಗವನ್ನು ಕುಂಠಿತಗೊಳಿಸಿರುತ್ತೀ; ಮತ್ತು ತಪ್ಪಿನಿಂದ ಮುಂದೆ ಹೋಗಲು ಸೂಚಿಸಿ, ಅದೆಷ್ಟೋ ಅಪಘಾತಗಳನ್ನುಂಟು ಮಾಡಿರುತ್ತೀ; ಆದರೆ ಕೂಟಿನ ಪೋಲೀಸನು ಕೈತೋರಿಸುವ ತಪ್ಪು ಮಾಡಿದರೂ ಕೂಡ, ತೀರ ಕೊನೆಯ ಕ್ಷಣದಲ್ಲಿ ಸಹ ಅಪಘಾತ ತಡೆಯುವದು ಚಾಲಾಕ ಮತ್ತು ದಕ್ಷನಾದ ಡ್ರೈವರನಿಗೆ ಶಕ್ಯವಿರುತ್ತದೆ. ಆ ಚಾಲಾಕಿ ಮತ್ತು ದಕ್ಷತೆಗಳಿಲ್ಲದವನು ಪೋಲೀಸನಿಗೆ ಸುಮ್ಮನೆ ದೋಷ ಕೊಡುವದರಲ್ಲಿ ಅರ್ಥವಿಲ್ಲ! ಇರಲಿ. ಅಂಥದೇ ಒಂದು ಯೋಗಾಯೋಗದಿಂದ ನಮ್ಮ ಚೋದ್ಯಪುರದಲ್ಲಿ ಏನು ಘಟಿಸಿತೆಂಬುದನ್ನು ನೋಡೋಣ ನಡೆಯಿರಿ.

ಠಣ-ಠಣ-ಠಣ-ಠಣ-ಠಣ-ಠಣ-ಠಣ-ಠಣ್ಣ
ಟಪ-ಟಪ-ಟಪ-ಟಪ-ಟಪ-ಟಪ-ಟಪ-ಟಪ್ಪ

ನಂದಭುವನದ ಕಲ್ಲಕೊತ್ತಳದ ಮೇಲಿನ ಭದ್ರವಾದ ಗಡಿಯಾರದಲ್ಲಿಯ ಪಂಚಧಾತುವಿನ ಬಟ್ಟಲ ಮೇಲೆ ಯಾಂತ್ರಿಕ ಕೊಡತಿಯ ಪೆಟ್ಟುಗಳು ಬೀಳಹತ್ತಿದವೆಂದರೆ ಅರ್ಧ ಪಟ್ಟಣವೇ ಜಾಗೃತವಾಗುತ್ತಿತ್ತು; ಮತ್ತು ಚಂದೂಲಾಲನ ಆ ಕೊಬ್ಬಿದ ಕುದುರೆಯ ಖುರಪುಟಗಳ ಸಪ್ಪಳವಾದರೂ ಅಷ್ಟೇ ಗಟ್ಟಿಯಾಗಿ ಆಗುತ್ತಿತ್ತು. ಆ ಸೊಕ್ಕಿದ ಕುದುರೆಯನ್ನು ಚಂದೂಲಾಲನೇ ಹತ್ತಬೇಕು; ಇಲ್ಲವೆ ಆ ಮನೆಯ ಮುದುಕ ಸವಾರನೊಬ್ಬನು. ಅವರಿಬ್ಬರ ಮಾತನ್ನೇ ಅದು ಮನ್ನಿಸುತ್ತಿತ್ತು. ಕುದುರೆಯ ಸವಾರಿಮಾಡುವ ಬೇರೆ ಎಂಥ ನಿಪುಣ ಎದೆಗಾರನಿಗೂ ಅದನ್ನು ಹತ್ತಿ ಓಡಾಡಿಸುವ ಧೈರ್ಯವಾಗುತ್ತಿರಲಿಲ್ಲ.

ಚಂದೂಲಾಲನು ಇಂದು ಬೆಳಿಗ್ಗೆ ಆ ತನ್ನ ಕುದುರೆಯ ಮೇಲೆ ಸವಾರನಾಗಿ ತಿರುಗಾಡಲು ಹೋದವನು, ನಂದಭುವನದ ಉದ್ಯಾನದ ಬಾಗಿಲ

ವರೆಗೆ ಕುದುರೆಯನ್ನೋಡಿಸುತ್ತಲೇ ಬಂದನು; ಆದರೆ ಅಲ್ಲಿಂದ ಮುಂದೆ ಏರಿ ಹತ್ತುವದರಿಂದ, ಅಗಸಿಯುವರೆಗಿನ ದಾರಿಯಲ್ಲಿ ಆತನು ಆ ತನ್ನ ದಣಿದ ಕುದುರೆಯನ್ನು ನಡಿಗೆಯಿಂದಲೇ ಬಿಟ್ಟನು. ಆ ಕುದುರೆಗಾದರೂ ತನ್ನ ನಡಿಗೆಯ ಕಲೆಯನ್ನು ತೋರಿಸಬೇಕೆಂದೆನಿಸಿರಬೇಕು. ಅಂತೆಯೇ ಅದು ತನ್ನ ಉಕ್ಕಿನ ನಾಲುಗಳ ಹೆಜ್ಜೆಯನ್ನು ಕಲ್ಲಹಾಸಿಗೆಯ ಮೇಲೆ ದಿಮಾಕದಿಂದ ಅಪ್ಪಳಿಸುತ್ತ ನಡೆದಿತ್ತು. ಆದರ ಆ ಖುರಪುಟಗಳ ಸಪ್ಪಳವು ಒಳ್ಳೇ ಬಿಗಿಯಾಗಿ ಬಿಗಿದ ಮದ್ದಲಿಯ ಮೇಲೆ ಒಳ್ಳೇ ನುರಿತ ಮದ್ದಲಿಕಾರನು ಡೌಲಿನಿಂದ ಛಾಪುಹಾಕುತ್ತಿರುವಂತೆ ಕೇಳಿಸುತ್ತಿತ್ತು.

ಯೋಗಾಯೋಗದ ವೈಚಿತ್ರ್ಯದಿಂದ ಅಲ್ಲಿಯ ದೊಡ್ಡ ಗಡಿಯಾರದ ಎಂಟು ಗಂಟೆಯ ಎಂಟು ಪೆಟ್ಟುಗಳೂ ಆ ಸೊಕ್ಕಿದ ಕುದುರೆಯ ಖುರಪುಟಗಳ ಕೊನೆಯ ಎಂಟು ಹೆಜ್ಜೆಗಳೂ ಒಮ್ಮೆಲೆ ಬಿದ್ದವು. ಕೂಡಲೆ ಅದರ ಮೇಲಿನ ಸವಾರನು ಅಗಸಿಯೊಳಗೆ ಇಳಿದು ನಿಂತುಕೊಂಡನು.

ಚಂದೂಲಾಲನು ಕುದುರೆಯ ಬೆನ್ನ ಮೇಲಿಂದ ಡೌಲಿನಿಂದ ಹಾರಿಕೊಂಡನು; ಮತ್ತು ಆ ಕೊಬ್ಬಿದ ಕುದುರೆಯ ಎದುರಿಗೆ ಹೋಗಿ ಅದರ ಗೋಣ ಮೇಲೆ ಪ್ರೇಮದಿಂದ ಚಪ್ಪರಿಸಿದನು. ಅದು ಗಟ್ಟಿಯಾಗಿ ಖೇಕರಿಸಿ, ಬಾಯೊಳಗಿನ ಬುರುಗನ್ನು ಚಿಮ್ಮಿ ಆ ಶಾಬಾಸಿಕೆಯ ಸ್ವೀಕಾರ ಮಾಡಿತು. ಆ ಕುದುರೆ ಮತ್ತು ಆ ಸ್ವಾರ ಇವರಿಬ್ಬರಿಗೂ ಅಂದಿನ ಆ ಪರ್ಯಟನದ ಮಟ್ಟಿಗೆ ಕೃತಕೃತ್ಯರಾದೆವೆಂದೆನಿಸಿರಬಹುದು.

ಕುದುರೇ ಚಾಕರಿಯುವನು ಕುದುರೆಯನ್ನು ಹಿಡಕೊಂಡು ಹೋದ ಬಳಿಕ ಚಂದೂಲಾಲನು ತನ್ನ ಬೂಟುಗಳನ್ನಪ್ಪಳಿಸುತ್ತಲೆ ಪಡಸಾಲೆಯ ಪಾವಟಿಗೆಗಳನ್ನೇರಿದನು. ಆ ಮೆಟ್ಟಿಲುಗಳು ಮುಗಿದೊಡನೆಯೇ ನಂದನ ಭುವನದ ಪಡಸಾಲೆಯು ಹತ್ತುವದು ಅದು ಹದಿನೆಂಟು ಫೂಟ ಅಗಲ, ಐವತ್ತು ಫೂಟ ಉದ್ದ ಇಷ್ಟು ಪ್ರಶಸ್ತವಾಗಿದ್ದು, ಅದಕ್ಕೆಲ್ಲ ನುಣುಪಾದ ಫರಸುಗಲ್ಲಿನ ಹಾಸಿಗೆಯಿದ್ದಿತು. ಪಡಸಾಲೆಯ ತುದಿಗೆ ಕಬ್ಬಿಣದ ಸುಂದರವಾದ ಕಟಾಂಜನವಿದ್ದಿತು. ಎರಡೂ ತುದಿಗೆ ಗೋಡೆಯಲ್ಲಿ ಮಾಡಿದ ವರ್ತುಲಾಕಾರದ ಕಮಾನುಗಳಿದ್ದು, ಅವುಗಳಿಲ್ಲೊಂದೊಂದು ಶೋಭಿವಂತ ಕೋಚವೆದ್ದಿತು. ಪಡಸಾಲೆಯ ನಟ್ಟನಡುವೆ ಇಬ್ಬರು ಪ್ರಶಸ್ತಾಗಿ ಮಲಗಬಹುದಾದಂತಹ ತೂಗಮಣೆಯಿದ್ದು, ಅದು ಹಿತ್ತಾಳಿಯ ಸಲಾಕಿಗಳಿಂದ ಮೇಲಿನ ಶಿಲೀಪಾಟಿನಲ್ಲಿ ತೂಗಕಟ್ಟಲ್ಪಟ್ಟಿತ್ತು.

ಚಂದೂಲಾಲನು ಎಲ್ಲಕ್ಕೂ ಮೊದಲು ಆ ತೂಗಮಣೆಯ ಮೇಲೆ ಕುಳಿ

ಕಿದ್ದ ತನ್ನ ತಂದೆಗೆ ಭೆಟ್ಟಿಯಾದನು.

ಅವನ ತಂದೆಯಾದ ಸರ ಗಂಗಾರಾಮ ವರ್ಮರ ನಿತ್ಯಕ್ರಮವೇನಂದರೆ, ಬೆಳಗಿನ ಸರಾಸರಿ ಎಂಟುಗಂಟೆಯ ಹೊತ್ತಿಗೆ ಅವರು ಆ ತೂಗಮಣೆಯ ಮೇಲೆ ಬಂದು ಕೂಡ್ರುತ್ತಿದ್ದರು. ಅಡಿಗೆಯವನು ಎದುರಿಗಿರಿಸಿದ್ದ ಒಂದು ಎತ್ತರವಾದ ಚೌರಂಗದ ಮೇಲೆ ಚಹದ ಪಾತ್ರೆಗಳನ್ನು ಮೊದಲು ತಂದಿಡುವನು. ಬಳಿಕ ಸರ ಸಾಹೇಬರ ಪತ್ನಿಯು ಬಂದು ಕುರ್ಚಿಯ ಮೇಲೆ ಕುಳಿತು ಅದನ್ನು ಅವರಿಗೆ ಸುರುವಿ ಕೊಡಬೇಕು; ತಾನು ತಕ್ಕೊಳ್ಳಬೇಕು. ಬಳಿಕ ಉಭಯತರೂ ನಿಧಾನವಾಗಿ ಹರಟೆ ಹೊಡೆಯುತ್ತ ಹಾಸ್ಯ ವಿನೋದಗೆಯ್ಯುತ್ತ ಚಹಾಪಾನ ಮಾಡಬೇಕು. ಅದರಂತೆ ಇಂದೂ ಆ ವಿಧಿಯನ್ನು ಮುಗಿಸಿ, ಸರ ಸಾಹೇಬರು ತಮ್ಮ ಕೈಯೊಳಗಿನ ಕಪ್ಪನ್ನು ಕೆಳಗಿಡುತ್ತಿರಲು ಅವರಿಗೆ ಮೆ-ಟ್ಟಿಲುಗಳನ್ನೇರಿ ಬರುತ್ತಿದ್ದ ಚಂದೂಲಾಲನ ರಮ್ಯಮೂರ್ತಿಯು ಕಾಣಿಸಿತು.

ಚಿರಂಜೀವನ ಆ ಸುಂದರ ಮೂರ್ತಿಯನ್ನು ಕಂಡು ಆತನ ಹಿರಿಯರಿಗೆ ಧನ್ಯತೆಯೇಕೆನಿಸಬಾರದು? ಇಪ್ಪತ್ನಾಲ್ಕರ ಹರೆಯದ ಪ್ರಾಯ. ಎತ್ತರವೂ ತೆಳ್ಳಗೂ ಆದ ದೇಹಯಷ್ಟಿ ದಣುವಿನಿಂದ ಹಣೆಯ ಮೇಲೆ ಬೆವರು ಬಂದಿದೆ. ಆತನ ಕೆಂಪಾದ ಗಲ್ಲಗಳ ಮೇಲೆ ಗುಲಾಬೀ ಹೊಳಪು ಹೊಳೆಯುತ್ತಲಿದೆ. ಬೆಳಿಗ್ಗೇ ಮುಖಕ್ಷೌರ ಮಾಡಿಕೊಂಡ ಮೂಲಕ ಮುಖವು ಥಳಥಳವೆಂದು ಮಿನುಗುತ್ತಿದೆ. ಟೊಂಕದ ಕೆಳಗೆ ಅರ್ಧಚೆಣ್ಣವಿದ್ದು, ಅದರ ಮೇಲೆ ಬಿಗಿದ ನಡಕಟ್ಟಿದೆ. ಕಾಲಲ್ಲಿ ಒಳ್ಳೇ ಹದಗೊಳಿಸಿದ ತೆಳುವು ಜಿಗಟು ಚರ್ಮದಿಂದ ಮಾಡಿದ ಚಡಾವುಗಳು. ಮೈಯಲ್ಲಿ ಎದೆ ಕಾಣುವಂತಹ ಮಬ್ಬು ಹಸರು ಬಣ್ಣದ ಉಣ್ಣೆಯ ಶಾರ್ಟಕೋಟು ಇದ್ದು, ಅದರ ಮೇಲ್ಗಿಸೆಯಲ್ಲಿ ಹೊರಗೆ ಇಣುಕುತ್ತಿದ್ದ ಗುಲಾಬೀ ಬಣ್ಣದ ರೇಶ್ಮಿ ಕರವಸ್ತ್ರವಿತ್ತು.

ಚಂದೂಲಾಲನು ಅಲ್ಲಿಗೆ ಬಂದ ಕೂಡಲೆ ತಂದೆ ಮಕ್ಕಳು ನಗೆಮೊಗದಿಂದ ಪರಸ್ಪರರನ್ನು ನೋಡಿದರು. ಬಳಿಕ ಸರ ಗಂಗಾರಾಮರು "ಚಂದೂ, ಕುದುರೇ ಸವಾರಿಯು ಚನ್ನಾಗಾಯಿತಷ್ಟೇ? ಇಂದಿನ ನುರಿಚಳಿಯು ಕುದುರೇ ಸವಾರಿಗೆ ಹಿತಕರವಾಗಿಯೇ ಪರಿಣಮಿಸಿರಬಹುದಲ್ಲವೇ? ನಿನ್ನ ಕುದುರೆಯು ಇದುವರೆಗೆ ಬಹುತರವಾಗಿ ಗೂಟಕ್ಕೇ ಬಿಗಿಯಲ್ಪಟ್ಟಿತ್ತು. ಅದರಿಂದ ಇಂದು ಅದು ಏನಾದರೂ ಮಕರಾಟಿಕೆ ಮಾಡಿತೇನು?" ಎಂದು ಒಳ್ಳೇ ಆಸ್ಥೆಯಿಂದ ವಿಚಾರಿಸಿದರು.

ಮಗನು ತನ್ನ ಎರಡೂ ಕೈಗಳನ್ನು ಟೊಂಕದ ಮೇಲಿರಿಸಿಕೊಂಡು. ಹುಬ್ಬುಗಳನ್ನು ಕೊಂಚವೇ ಮೇಲೇರಿಸುತ್ತ ಒಳ್ಳೇ ಠೀವಿಯಿಂದ:—"ಅಪ್ಪಾ,

ಅದು ಬೇಕಾದಷ್ಟು ಮಕರಾಟಿಕೆ ಮಾಡೀತು; ಆದರೆ ತನ್ನ ಬೆನ್ನ ಮೇಲೆ ಯಾರಿರುವರೆಂಬದನ್ನು ಅದು ಚೆನ್ನಾಗಿ ಗುರ್ತಿಸುತ್ತಿದೆ.'' ಎಂದು ಹೇಳಿದನು.

"ಇನ್ನು ದಿನವಹಿ ನಿಮ್ಮಿಬ್ಬರ ಭೆಟ್ಟಿಯೂ ಆಗಿಯೇ ಆಗುವುದೆನ್ನು! ಅಸಿಸ್ಟಂಟ ಕಲೆಕ್ಟರರಿಗೆ ವರ್ಷದೊಳಗಿನ ಎಂಟು ತಿಂಗಳುಗಳನ್ನು ಸಂಚಾರದಲ್ಲಿ ಕಳೆಯಬೇಕಾಗುತ್ತದೆಯಲ್ಲವೆ ಚಂದೂ? ಅದರಿಂದ ಕುದುರೆಯ ಹಾಗು ಅದರ ಸ್ವಾರನ ಹೀಗೆ ಇಬ್ಬರ ಬಯಕೆಯೂ ಪೂರೈಸೀತು."

''ನಮ್ಮ ಚಂದೂ ಅಸಿಸ್ಟಂಟ ಕಲೆಕ್ಟರನೇ? ಮತ್ತು ಈತನು ಹಾಗೆಂದಾದನವ್ವಾ! ಅಂದರೆ ಈತನು 'ಐಸಿಎಸ' ಪರೀಕ್ಷೆ ಪಾಸಾದ ತಂತಿ ಇಷ್ಟರಲ್ಲೇ ಬಂದೀತೇನು?'' ಹೀಗೆಂದು ಮಾಸಾಹೇಬರು ತಮ್ಮ ಗದ್ದದ ಮೇಲೆ ಕೈಯಿಟ್ಟುಕೊಂಡು ಅಚ್ಚರಿಯಿಂದ ಕೇಳಿದರು. ಚಂದೂನ ಆಯ್. ಸಿ. ಎಸ್. ಪರೀಕ್ಷೆ ಪಾಸಾದ ತಂತಿ ಬರಬೇಕೆಂಬ ಇಚ್ಛೆಯು ಅವರಿಗಾದರೂ ಇದ್ದೇ ಇತ್ತು; ಆದರೆ ಅವರ ಸ್ವಭಾವವು ಮಾತ್ರ ಮುಂಜಾಗ್ರತೆಯದಾಗಿತ್ತು.

''ಚಂದೂ, ನಿನ್ನ ತಾಯಿ ಎಂಥ ಹುಚ್ಚಳಪ್ಪಾ! ಎಲೇ, ತಂತಿ ಬಂದನಂತರ ಅದು ಗುಪ್ತವಾಗಿರಬಲ್ಲದೇ? ಆದರೆ ಆ ತಂತಿಯ ಬಗ್ಗೆ ಅನುಮಾನವೇಕೆ? ಇಂದಿಲ್ಲದಿದ್ದರೆ ನಾಳೆಯಾದರೂ ಬಂದೇ ಬರುವದು; ಹಾಗು ನಮ್ಮ ಚಂದೂ ಅಸಿಸ್ಟಂಟ ಕಲೆಕ್ಟರ ಆಗಿಯೇ ಆಗುವನು! ಮತ್ತು ಇವನನ್ನು ದ್ವೇಶಿಸಿಯೇ ಆ ಎಂಟು ತಿಂಗಳ ಸಂಚಾರದ ಮಾತನ್ನು ನಾನಾಡಿದ್ದು. ತಿಳಿಯಿತೇ ಮಾಸಾಹೇಬ! ಇದರಲ್ಲೇನು ಅಂಥ ಅಚ್ಚರಿಯಿದೆ?''

ಚಂದೂಲಾಲನ ಅಭಿಪ್ರಾಯವಾದರೂ ತನ್ನ ತಂದೆಯಂತೆಯೇ ಇದ್ದಿತು; ಆದರೆ ... ಆತನು ಹೆಚ್ಚಿಗೇನೂ ಮಾತಾಡಲಿಲ್ಲ; ಸುಮ್ಮನೆ ಇದ್ದನು. ಇಷ್ಟರಲ್ಲಿ ಆತನಿಗೆ ಸಿಗರೇಟು ಸೇದುವ ಚಟವಾಯಿತು. ಕೂಡಲೆ ಆತನು ಆ ತೂಗುಮಣೆಯ ಮೇಲೆ ತಂದೆಗೆ ಹೊಂದಿ ಕುಳಿತಕೊಂಡನು. ಕಿಸೆಯೊಳಗಿಂದ ಸಿಗರೇಟು ತೆಗೆದು, ಬೆಂಕಿಕಡ್ಡಿಪೊಟ್ಣವನ್ನು ಹುಡುಕಿದನು. ಅದು ಸಿಗದಾಗಲು," ಪಪ್ಪಾ, ಮ್ಯಾಚೆಸ್ ಪ್ಲೀಜ?" (ಅಪ್ಪಾ, ಕಡ್ಡಿಪೊಟ್ಣವನ್ನು ಇತ್ತ ಚೆಲ್ಲುವಿರಾ?) ಎಂದನು.

ಸರ ಗಂಗಾರಾಮರು ತಮ್ಮ ಜೇಬಿನೊಳಗಿನ ಪೊಟ್ಣವನ್ನು ತೆಗೆದು, ಒಂದು ಕಡ್ಡಿಯನ್ನು ಕೆರೆದು ಮಗನ ಬಾಯೊಳಗಿನ ಸಿಗರೇಟಿಗೆ ಹಿಡಿದರು. ಚಂದೂಲಾಲನು ಅದರಿಂದ ಸಿಗರೇಟ ಹೊತ್ತಿಸಿಕೊಂಡು ಸೇದಿ ಶಿಲೇಪಾಟಿನ ಕಡೆಗೆ ಗೋಣುತಿರುವಿ, ಲೀಲೆಯಿಂದ ಬಾಯೊಳಗಿನ ಹೊಗೆಯನ್ನು ಬಿಟ್ಟನು.

ಇದನ್ನು ಕಂಡು ಮಾಸಾಹೇಬರು ಆಶ್ಚರ್ಯಚಕಿತರಾದರು. ಅವರಿಗೆ

ಬಾಲು ಕೆಡಕೆನಿಸಿತು. ತೀರ ನಾಚಿಗೊಂಡರು. ಆಗ ಅವರು:—'ಚಂದೂ, ನಾನಿದೇನನ್ನು ನೋಡುತ್ತಿರುವೆನಪ್ಪಾ! ಎಲೋ, ಹಿರಿಯ-ಕಿರಿಯರ ಸಂಬಂಧವೇನಾದರೂ ಇರಬೇಡವೇ? ಜನಲಜ್ಜೆಯನ್ನಾದರೂ ಧರಿಸಲಾಗದೇ? ನಾಳೆ ನೀನು ಐಸಿಎಸ್ ಆಗುವವನಿದ್ದರೂ ಅಥವಾ ಯಾವನೊಬ್ಬ ದೊಡ್ಡ ಗವರ್ನರನಾದರೂ ಏನಾಯಿತು? ಹಿರಿಯರ ಜೊತೆಗೆ ತೊಡೆಯಾನಿಸಿಕೊಂಡು ಕುಳಿತು ಬೀಡಿ ಸೇದುವುದು ನಿನಗೊಪ್ಪುವುದೇ? ಅಲ್ಲದೆ ಮತ್ತೆ ಇವರ ಪೊಟ್ಟವನ್ನೇ ಕೇಳುತ್ತಿರುವೆ! ಮತ್ತು ಇವರಾದರೂ ಅದಾವ ಎಗ್ಗನ್ನೂ ಹಿಡಿಯದೆ, ತಾವೇ ತಮ್ಮ ಕೈಯಿಂದ ಕಡ್ಡಿ ಕೊರೆದು ನಿನ್ನ ಬೀಡಿ ಹೊತ್ತಿಸಿಕೊಡುತ್ತಾರೆ! ಇದೆಲ್ಲ ಹುಡುಗಾಟಕೆಗೆ ಏನೆನಬೇಕೋ ತಿಳಿಯದಾಗಿದೆ. ಈ ನಿಮ್ಮ ಹುಡುಗಾಟವನ್ನು ಬೇರೆಯವರು ಕಂಡರೆ ಏನಂದಾರು?'

ತಂದೆ-ಮಕ್ಕಳಿಬ್ಬರೂ ಗಟ್ಟಿಯಾಗಿ ನಕ್ಕರು. ಈ ಮಠ್ಠ ಸನಾತನೀ ಹಿಂದೂ ಸ್ತ್ರೀಯಳ ಬುರುಸುಗಟ್ಟಿದ ಅಭಿಪ್ರಾಯವು ಎಷ್ಟು ಅಪರಿಪಕ್ವವಾಗಿದೆಯಲ್ಲ! ಎಂದು ಅವರ ನಗೆಯು ಅರ್ಥವಾಗುತ್ತಿತ್ತು.

ಮಾಸಾಹೇಬರು ಸ್ವಂತದ ಧೂಮ್ರಪಾನದ ವಿಷಯವಾಗಿ ಅಂದದ್ದಕ್ಕೆ ಚಂದೂಲಾಲನಿಗೆ ವಿಶೇಷ ನಿಷೇಧವೆನಿಸಲಿಲ್ಲ; ಆದರೆ ಅವನು ಅದಕ್ಕಾಗಿ ಆತ್ಮಸಮರ್ಥನ ಮಾಡಿಕೊಳ್ಳಲಿಕ್ಕೂ ಮುಂದುವರಿಯಲಿಲ್ಲ. ಆತನ ತಂದೆಯೇ ಅವನಿಗೆ ಸಹಾಯಕನಾದನು.

"ಎಲೇ, ಚಂದೂನ ಕೂಡ ನಿನ್ನನ್ನೂ ವಿಲಾಯತಿಗಿರಲಿಕ್ಕೆ ಕಳಿಸಬೇಕೆಂದಿದ್ದಾಗ ನೀನೇಕೆ ಹೋಗಲಿಲ್ಲ? ಹೋಗಿದ್ದರೆ ವಿಲಾಯತಿಯಲ್ಲಿ ತಂದೆ ಮಕ್ಕಳ ಸ್ನೇಹಸಂಬಂಧವು ಎಷ್ಟು ಉದಾರವಾಗಿರುತ್ತದೆ, ಪರಸ್ಪರರ ನಡವಳಿಕೆಯಲ್ಲಿ ಸ್ವಾತಂತ್ರ್ಯಕ್ಕೆ ಎಷ್ಟು ವಿಶಾಲವಾದ ಇಂಬಿರುತ್ತದೆ ಮುಂತಾದ್ದೆಲ್ಲ ನಿನಗ ತಿಳಿಯುತ್ತಿತ್ತು. ಸಿಗರೇಟು ಸೇದುವುದೇ ಇಷ್ಟು ಮಹತ್ತರ ಪಾಪವೆಂದಾಗಲಿ ಇಲ್ಲವೆ ವ್ಯಸನವೆಂದೆಣಿಸಿದರೆ, ನಾನಂತೂ ದಿನಾಲು ಚಿರೂಟ ಸೇದುತ್ತಿದ್ದು, ಅದರ ನಿಂದೆಯನ್ನು ನೀನು ಇದುವರೆಗೂ ಅದೇಕೆ ಮಾಡಿಲ್ಲ? ಗಂಡ-ಹೆಂಡಿರು ಸಮಾನಸ್ಕಂದರ ಹಾಗೆ ನಡೆಯುವಂತೆ, ವಯಸ್ಸಿಗೆ ಬಂದಿರುವ ಚಂದೂಲಾಲನಂತಹ ಮೂಡ-ಮುಟ್ಟುಹತ್ತಿದ್ದ ಮಕ್ಕಳೂ ನಡೆಯಬೇಕು. ಆತನು ನನ್ನನ್ನು ಕದ್ದು ಚಿರೂಟ ಸೇದಿದರೂ ಅದರ ವಾಸನೆ ಬಂದೇ ಬರುವದಲ್ಲ! ಅಂದ ಬಳಿಕ ನನ್ನ ಸಮಕ್ಷ ಸಿಗರೇಟು ಸೇದಿದರೆ ಅದಕ್ಕೂ ವಿಹಿತವಲ್ಲವೇ? ಈತನ ವಯಸ್ಸಿನ ವಿಲಾಯತಿಯೊಳಗಿನ ಯಾವ ಹುಡುಗರೂ ಸಿಗರೇಟು ಸೇದದಿರುವದಿಲ್ಲ."

"ಸೇದುತ್ತಿರಬಹುದು; ಆದರೆ ಅವರು ಹೀಗೆ ಕೇವಲ ತಂದೆಯ ತೊಡೆಗೆ ತೊಡೆಯಾನಿಸಿ ಕುಳಿತು, ಅಲ್ಲದೆ ತಂದೆಗೇ ಕಡ್ಡಿ ಕೊರೆದು ಹಿಡಿಯುಲಿಕ್ಕೆ ಹೇಳಿ ಸೇದುತ್ತಿರಬಹುದೆಂಬದನ್ನು ನಾನು ವಿಲಾಯತಿಗೆ ಹೋಗಿ ನೋಡಿರದಿದ್ದರೂ ನನಗಂತೂ ಸಟಿಯೆಂದು ತೋರುವದಿಲ್ಲ. ಚಂದೂ, ಈ ಪ್ರಶ್ನೆಯ ಉತ್ತರವನ್ನು ನೀನೇ ಹೇಳು ನೋಡೋಣ. ನಿನ್ನಿಂದಲೇ ಇದರ ನಿರ್ಣಯವಾಗಲಿ."

ಚಂದೂಲಾಲನು ಏನು ಠರಾವು ಹೇಳಬಹುದೆಂಬದನ್ನು ವಾಚಕರು ತಿಳಿದಿರಬಹುದು; ಆದರೆ ಅಲ್ಲಿಯ ವರೆಗೆ ಆ ಪ್ರಕರಣವನ್ನು ಜಿಗಿಯಗೊಡದೆ, ನಕ್ಕು ಆತನು—'ಅವ್ವಾ! ನನಗೆ ನಿನ್ನ ಮಾನವನ್ನಂತೂ ಕಾಯಗೊಡು. ಅಪ್ಪ ಅನ್ನುವುದೇನೂ ಸುಳ್ಳಲ್ಲ; ಮತ್ತು ನೀನನ್ನುವುದೂ ನಿಜವಿದೆ.'

ತಾತ್ಪರ್ಯವೇನಂದರೆ, ಆ ಮಾತು ಬೆಳಿಸುವ ಇಚ್ಛೆಯು ಚಂದೂಲಾಲನಿಗಿರಲಿಲ್ಲ. ಆತನಿಗೆ ತನ್ನ ತಾಯಿಯ ವಿಷಯದಲ್ಲಿ ಪ್ರೇಮ ಮತ್ತು ಆದರಗಳಿದ್ದವು. ಆಕೆಯ ತಪ್ಪುತಿಳುವಳಿಕೆಯಾಗಿದ್ದರೂ ಅದನ್ನು ಕೂಡಲೆ ತಿಳಿಸಿ, ಅವಳನ್ನು ಅಪಮಾನಗೊಳಿಸುವದು ಅವನಿಗೆ ಸೇರುತ್ತಿರಲಿಲ್ಲ; ಅಂತೆಯೇ ಆತನು ಸುಧಾರಿಸಿಕೊಂಡನು. ಕೆಲಕ್ಷಣಗಳ ಮೇಲೆ 'ವೆಲ್! ಅಚ್ಛಾ!' ಎಂದಂದು, ಆತನು ಎದ್ದನು; ಹಾಗು ಕೈಯೊಳಗಿನ ಕೊರೆಚುಟ್ಟವನ್ನು ಅಂಗಳದಲ್ಲಿ ಚೆಲ್ಲಿಕೊಟ್ಟು, ನೆಟ್ಟಗೆ ಅಟ್ಟದ ಹಾದಿಹಿಡಿದನು.

ಮಗನು ಈಗ ಸಮೀಪವಿರದ್ದರಿಂದ ಆ ದಂಪತಿಗಳು ನಿರಾತಂಕವಾಗಿ ಮಾತಾಡಹತ್ತಿದರು; ಆದರೆ ಸಮಂಜಸರಾದ ಮಾಸಾಹೇಬರು ಆ ವಾದವನ್ನು ಮರೆಯಿ[illegible]ಲಿಕ್ಕೆಂದು ತಮ್ಮಿಬ್ಬರಿಗೂ ಪ್ರಿಯಕರವಾದ ಬೇರೆ ವಿಷಯವನ್ನೇ ಎತ್ತಿ[illegible]ರು.

"ಚಂದೂನ ಪರೀಕ್ಷೆ ಪಾಸಾದ ತಂತಿ ಬಂದಂತೆ ತಾವು ಆಗಲೆ ನುಡಿದದ್ದರಿಂದಲೇ ಕೇಳುವೆನು. ನಿಜವಾಗಿಯೂ ಆ ತಂತಿ ಬಂದಿತೇನು? ಈತನ ಆ ಪರೀಕ್ಷೆಯೊಮ್ಮೆ ಪಾಸಾಗಲಿ; ಅಂದರೆ ನಾನು ನನ್ನ ಹರಕೆ ಮುಟ್ಟಿಸುವ ಸಿದ್ಧತೆಗೆ ತೊಡಗುವೆನು; ಮತ್ತು ಈತನು ಪಾಸಾದ ಕೂಡಲೆ ಇವನು ಒಮ್ಮೆಲೆ ನೌಕರಿಗೆ ಹಾಜರಾಗಬೇಕಾಗುವದಲ್ಲವೆ? ಇನ್ನು ನೌಕರಿಯೆಂದರೆ, ಕೇವಲ ಪಾರತಂತ್ರ್ಯ! ಎಲ್ಲಿ ನೇಮಿಸುವರೋ ಅಲ್ಲಿಗೆ ಹೋಗಲೇಬೇಕು; ಆದರೆ ಎಲ್ಲಿಯಾದರೂ ನೇಮಿಸಲೊಲ್ಲರೇಕೆ, ಭೂಮಿಯ ಮೇಲೆಯೇ ನೇಮಿಸುವರಷ್ಟೆ?" ತಿಳುವಳಿಕೆಯುಳ್ಳವರು ತಮ್ಮ ಶಂಕೆಗಳ ಸಮಾಧಾನವನ್ನು ಶಕ್ಯವಾದಷ್ಟು ತಾವೇ ಮಾಡಿಕೊಳ್ಳುತ್ತಾರೆ.

"ನೀನು ಆತನೊಡನಿರಲಿಕ್ಕೆ ಹೋಗುವೆಯೋ ಹೇಗೆ? ಆತನ ಸಂಸಾರ ಹೂಡಿಕೊಡಲಿಕ್ಕೆ!" ಹೀಗೆಂದು ಗಂಡನು ಕೇಳಿದನು.

"ಅಹುದು. ನಾನು ಹೋಗಲೇ ಬೇಕು. ಮಗನ ಪ್ರಾರಂಭದ ಸಂಸಾರ ಹೂಡಿಕೊಡುವುದು ತಾಯಿಯ ಕರ್ತವ್ಯವೇ ಅಲ್ಲವೆ? ಆದರೆ ಗೊತ್ತಾದ ಮೇರೆಗೆ ಇವನ ಲಗ್ನಮಾಡಿ ಬಿಟ್ಟೆವೆಂದರೆ, ಈತನ ಸಂಸಾರ ಸಾಗಹಚ್ಚುವ ನನ್ನ ಕೆಲಸವು ಎಷ್ಟೋ ಸುಲಭವಾದೀತು. ಈತನ ನಿಶ್ಚಿತ ವಧುವು-ರಾವಬಹದ್ದೂರ ಶಾಮುಲಾಲರ ಮಗಳಾದ ಶರಯೂ-ದಡ್ಡಳಿಲ್ಲ; ಆದರೆ ಅವಳು ಎಷ್ಟೇ ಚಾಣಾಕ್ಷಳಿದ್ದರೂ ನಾನಂತೂ ಮೊದಲನೇ ಸಲ ಅವರೊಡನೆ ಹೋಗುವವಳೇ! ನಾನು ಹೋಗದ ಹೊರತು ಸಾಗಲಿಕ್ಕಿಲ್ಲ; ಆದರೆ ತಮ್ಮ ಬೇತು ಏನಿದೆ?"

"ಎಲೆ, ಆಯ್. ಸಿ. ಎಸ್. ಹುಡುಗನು ನೌಕರಿಗೆ ಹೊರಟಾಗ ಅವನೊಡನೆ ಅವನ ತಾಯಿಯು ಹೊರಟರೆ ಒಂದುವೇಳೆ ಒಪ್ಪೀತು; ಯಾಕಂದರೆ ಅದರಿಂದ ನೋಡುವವರಿಗೇನೂ ವಿಶೇಷವೆನಿಸಲಿಕ್ಕಿಲ್ಲ; ಆದರೆ ತಂದೆಯು ಗಮನವು ಮಾತ್ರ ಒಪ್ಪಲಿಕ್ಕಿಲ್ಲ; ಕಾರಣವೇನೆಂದು ಕೇಳುವೆಯಾ? ಅದು ಹೀಗಿದೆ: ಚಂದೂ ಅಸಿಸ್ಟಂಟ ಕಲೆಕ್ಟರನೆಂದು ಆತನ ಸ್ವಂತದ ಸರಂಜಾಮು, ಸಿದ್ಧತೆ ಇವುಗಳಿರತಕ್ಕವೇ; ಆದರೆ ಮಾಸಾಹೇಬ, ನನಗೂ ನನ್ನ ಸ್ವಂತ ವಿಷಯಕವಾದ ಮನ್ನಣೆಯು ಸರ್ಕಾರ ದರ್ಬಾರಗಳಲ್ಲಿ ಚೆನ್ನಾಗಿದೆ ನನಗೆ 'ಸರ' ಎಂಬ ಪದವಿಯಿದೆ. ನನ್ನದಾದರೂ ಸರಂಜಾಮು, ಸಿದ್ಧತೆಗಳಿರತಕ್ಕವುಗಳೇ! ನಿನ್ನ ಚಂದೂ ಆಯ್. ಸಿ. ಎಸ್. ಆಗಿದ್ದರೆ, ನಾನು ಆಯ್. ಸಿ. ಎಸ್. ನ ತಂದೆಯಾಗಿದ್ದೇನೆ! ಹೌದಲ್ಲೇ ಮಾಸಾಹೇಬ?"

ಸರ ಗಂಗಾರಾಮರು ಖೊಳ್ಳೆಂದು ನಕ್ಕರು. ತಾವು ಒಳ್ಳೇ ಸುಭಾಷಿತ ನಿರ್ಮಿಸಿದೆವು, ಮರ್ಮವರಿತು ಮಾತಾಡಿದೆವು ಎಂದು ಅವರಿಗನಿಸಿತು; ಆದರೆ ಆ ಸುಭಾಷಿತದೊಳಗಿಂದ ಆತ್ಮಪ್ರೌಢಿಯ ಯಾವ ಧ್ವನಿಯು ಹೊರಟಿತ್ತೋ, ಇದು ಅವರಿಗೆ ಆ ಸುಭಾಷಿತ ವಾಙ್ಮಯಕ್ಕಿಂತಲೂ ಹೆಚ್ಚು ಪ್ರಿಯವಾಗಿದ್ದಿತು.

"ಮಾಸಾಹೇಬ, ಒಂದು ಒರೆಯಲ್ಲಿ ಎರಡು ಕತ್ತಿಗಳು ಇರುವುದೆಂತು? ಚಂದೂ ನಾಳೆ ಅಸಿಸ್ಟಂಟ ಕಲೆಕ್ಟರನೇ ಏಕೆ, ಕಲೆಕ್ಟರ-ಕಮಿಶನರ ಕೂಡ ಆಗತಕ್ಕವನು! ಅವನು ಈಗಿನಿಂದಲೇ ಒಳ್ಳೇ ಠೀವಿಯಿಂದ ಸ್ವಾತಂತ್ರ್ಯದಿಂದ ಇರಲಿಕ್ಕೆ ಕಲಿಯತೊಡಗಬೇಕು" ಎಂದು ಸರ ಸಾಹೇಬರು ಅನ್ನಲು,

"ಒಂದು ವೇಳೆ ಅವನ ತಂದೆಯವರು ಆತನು ಬಳಿಯಲ್ಲಿದ್ದರೆ ಅವನ ಠೀವಿಗೇನು ಕುಂದುಂಟಾಗುವುದು?"

"ಕುಂದುಂಟಾಗದೇನು? ಅವನು ತನ್ನ ಕೋಚದ ಮೇಲೆ ಅಡ್ಡಾಗಿದ್ದರೆ, ನಾನು ಎದುರಿಗೆ ಹೋದ ಕೂಡಲೆ ಮರ್ಯಾದೆಗಾಗಿ ಆತನು ಎದ್ದು ಕೂಡ್ರಬೇಕಾದೀತು; ಮತ್ತು ಅವನು ಹಾಗೆ ಮಾಡಿದ್ದನ್ನು ಜನರು ಕಂಡರೆ, ಆತನ ಸಾಹೇಬೀವೃತ್ತಿಯ ಸಾಹೇಬತ್ವವೆಲ್ಲುಳಿಯಿತು? ಎಲೆ, ಆಯ್. ಸಿ. ಎಸ್. ಅಂದರೆ, ಲೋಕದಲ್ಲಿ ತನ್ನಂತೆ ಯಾರೂ ಇಲ್ಲೆಂಬ ಭಾವನೆಯಿಂದ ಆತನು ಯಾರನ್ನೂ ಲೆಕ್ಕಿಸದಂತೆ ವರ್ತಿಸಬೇಕಾಗುತ್ತದೆ; ಮತ್ತು ನೀನು ಇಂಥ ಅಡಮುಟ್ಟ ಹೆಂಗಸು. ಸಿಟ್ಟಾಗಬೇಡ ಮಾಸಾಹೇಬ! ಚಂದೂ ಬೀಡಿಸೇದುವಾಗ ನನ್ನನ್ನು ನಾಲ್ಕುಜನರೆದುರು ಕಂಡರೆ, ಕೂಡಲೆ ಆತನು ಅದನ್ನು ಚೆಲ್ಲಿಕೊಟ್ಟು, ನಾಚನಗೆಯಬೇಕೆಂದು ನೀನನ್ನುವವಳು! ಇದರಿಂದ ಆತನ ಪ್ರತಿಷ್ಠೆಯು ಹೇಗುಳಿಯಬೇಕು? ನಾನು ಆಗಲೆ ಆತನ ಸಿಗರೇಟಿಗೆ ನನ್ನ ಜೇಬಿನೊಳಗಿನ ಕಡ್ಡಿಕೊರೆದು ಹೊತ್ತಿಸಿಕೊಟ್ಟನೇಕೆಂಬುದರ ಮರ್ಮವು ನಿನಗೀಗ ತಿಳಿಯಿತೇ? ಇದರಂತೆಯೇ ಇನ್ನೊಂದು ಮಾತು: ನಾಳೆ ಅವನ ಲಗ್ನವಾಗಿ ಆತನ ಹೆಂಡತಿ ಅವನೊಡನೆ ಹೋದಳೆಂದರೆ, ಅವರಿಬ್ಬರೂ ಕೈಯಲ್ಲಿ ಕೈಯಿಕ್ಕಿ ತಿರುಗಾಡತಕ್ಕವರು. ನಡುನಡುವೆ ಒಬ್ಬರ ಹೆಗಲಮೇಲೊಬ್ಬರು ತಮ್ಮ ಗೋಣು ಕೂಡ ಇರಿಸುವವರು. ನಾವಾಗಾದರೂ ಅವರ ಮನೆ-ಮಠಗಳಲ್ಲಿದ್ದರೆ ಅವರಿಗೆ ಆ ಬಗ್ಗೆ ಸಂಕೋಚವೇ ಇಲ್ಲವೇ? ಅಂತೆಯೇ ಚಂದೂ ನೌಕರಿಗೆ ಹೊರಟನೆಂದರೆ, ನೀನು ಅವನಲ್ಲಿಗೆ ಇರಲಿಕ್ಕಾಗಿ ಹೋಗಕೂಡದೆಂದು ನನ್ನ ಮತವಿದೆ; ಮತ್ತು ನೀನು ಎಂದಾದರೊಮ್ಮೆ ಹೋದರೂ ನಾನಂತೂ ನಿನ್ನೊಡನೆ ಅಲ್ಲಿಗೆ ಬರಲಾರೆನು. ಆತನ ಪ್ರಥಮ ಸಂಸಾರ ಸಾಗಹಚ್ಚುವದಕ್ಕೆಂದು ನೀನು ಆತನೊಡನೆ ಹೋಗದಿರುವುದೇ ವಿಹಿತವು! ಮಾನ-ಮರ್ಯಾದೆಗಳ ವಿಷಯಕವಾದ ನಿನ್ನ ದೃಷ್ಟಿಯು ನನಗಿಂತಲೂ ತೀಕ್ಷ್ಣವಿದೆ. ಅಪಮಾನವಾಗತಕ್ಕಂಥ ಸಂಕಟದಲ್ಲಿ ಮೊದಲು ತನ್ನನ್ನು ಕೆಡವಿಕೊಂಡು, ಬಳಿಕ ಅಪಮಾನವಾಯಿತೆಂದು ಸಿಟ್ಟಾಗುವದು ಎಲ್ಲಿಯ ನ್ಯಾಯ? ನಿನಗೆ ಹೇಳಿಕೊಟ್ಟವರಾರು ಇಂಥ ಈ ದ್ರಾವಿಡೀ ಪ್ರಾಣಾಯಾಮವನ್ನು?"

"ಅದೇನೂ ಇಲ್ಲ. ನಾನು ಚಂದೂನೊಡನೆ ಹೋಗುವವಳೇ. ಅಂದರೆ ನನ್ನ ಮಾನ ಹೇಗೆ ಕಾಯಬೇಕೆಂಬುದಾದರೂ ಆತನಿಗೆ ತಿಳಿದೀತು. ನೀವು ಆಗಲೆ ನೋಡಲಿಲ್ಲವೆ?"

"ಹೋಗು-ಹೋಗು. ನಿನ್ನಿಷ್ಟದಂತೆ ಮಾಡು; ಆದರೆ ನನ್ನ ದೃಷ್ಟಿಯಿಂದ ಏನು ತೋಚಿತೋ, ನಾನದನ್ನು ಹೇಳಿದನಿಷ್ಟೆ. ನಿನ್ನ ಅಂಬೋಣವಾದರೂ ನಿಜವೇ ಇದೆ. ಒಂದು ವೇಳೆ ಚಂದುವು ಅಪಮಾನಗೊಳಿಸಿ

ದರೂ ನೀನು ಅದನ್ನು ಸಹಿಸಿಯೂ ಸಹಿಸಿಕೊಳ್ಳಬಹುದು; ಆದರೆ ಗಂಡಸರಿಗದು ಶಕ್ಯವಾಗಲಾರದು."

"ಸರಿ-ಸರಿ; ಆದರೆ ಮಗನು ಅಪಮಾನಗೊಳಿಸತಕ್ಕಂಥ ಎಲ್ಲ ಸಂಗತಿಗಳನ್ನು ದೂರದೃಷ್ಟಿಯಿಂದ ಮೊದಲೇ ಊಹಿಸಿ, ಅವನಿಗೆ ಅವನ್ನೆಲ್ಲ ಮಾಫಿ ಮಾಡುವ ಶಿಕ್ಷಣ ಕೊಟ್ಟುಬಿಟ್ಟರೆ, ಆ ಮೇಲೇಕಾಗುತ್ತದೆ ಆ ತಂದೆಯ-ಪುರುಷನ ಅಪಮಾನ? ನೀವು ಕಡ್ಡಿಕೊರೆದು ಅವನ ಬೀಡಿ ಹೊತ್ತಿಸಿಕೊಟ್ಟದ್ದು ಆ ಶಿಕ್ಷಣದೊಳಗಿನದೇ ಒಂದು ಪಾಠವಾಗಿರಬೇಕು. ಇನ್ನು ಮುಂದೆ ನಿಮ್ಮೊಡನೆ ಅವನ ಕೈಗೂ ಒಂದು ಗ್ಲಾಸ ಕೊಟ್ಟು, ನಿಮ್ಮ ಬಳಿಯಲ್ಲಿ ಕೂಡ್ರಿಸಿಕೊಂಡು, ಅವನಿಗೂ ನೀವು ಕುಡಿಯುವಂತಹ ಕೆನ್ನೀರನ್ನು ಕುಡಿಯಹಚ್ಚಿರಿ; ಆದರೆ ಸದ್ಯಕ್ಕೆ ಆ ಮಾತೇಕೆ? ಮೊದಲು ಅವನ ಪರೀಕ್ಷೆಯಂತೂ ಪಾಸಾಗಲಿ. ಬಳಿಕ ನೋಡೋಣ."

ಗಂಡ-ಹೆಂಡಿರ ವಾದ ಮುಗಿಯಿತು. ಗಂಗಾರಾಮರು ಚಿರೂಟ ಹಚ್ಚಿ ನಗೆಚೇಷ್ಟೆಗಾಗಿ:—"ಏನೇ, ತಂಬಾಕ ಸೇದಕೂಡದೆಂದು ನೀನು ನನಗೆ ಹೇಳದಿರುವದೊಂದು ಭಾಗ್ಯವೇ ಅನ್ನಬೇಕಲ್ಲವೆ?" ಎಂದೆನ್ನಲು,

"ಛೇ! ಛೇ! ನಾನು ಬೇಕಾದಷ್ಟು ಹೇಳೇನು; ಆದರೆ ಮಾಡಿಕೊಂಡ ಮಡದಿಯ ಮಾತು ಕೇಳಿದರೆ ಗಂಡನ ಗಂಡಸುತನವೆಲ್ಲುಳಿಯುವುದು? ನೀವಾದರೂ ಈ ಮನೆಯ ಐಸಿಎಸ್‌ರೇ ಆಗಿಲ್ಲವೆ? ನೀವು ನನಗೆ ಅಂಜಿ ನಡೆಯುತ್ತೀರೆಂಬದು ಜನರಿಗೆ ತೋರಿದರೆ, ಆ ಮೇಲೆ ನಿಮ್ಮ ಮರ್ಯಾದೆ ಹೇಗುಳಿಯುವದು? ಆದರೆ ನಾಳೆ ನಾನೇ ಚಿರೂಟ ಸೇದ ಹತ್ತಿದರೆ ಮಾತ್ರ ನೀವು ಏನಂದಿರೋ ಅದಾರು ಬಲ್ಲರು?" ಮಾಸಾಹೇಬರು ನಕ್ಕರು.

ಸರ ಸಾಹೇಬರಿಗೆ ಈ ಮಾರ್ಮಿಕ ವಿನೋದವು ರುಚಿಸಿತು. ಅವರು ಅದರ ಮರು ಮುಯ್ಯ ಮಾಡಲೆಂದು ತಮ್ಮ ಬಾಯೊಳಗಿನ ಚಿರೂಟ ತೆಗೆದು ಅದನ್ನು ಮಾಸಾಹೇಬರೆದುರು ಹಿಡಿದು "ನಿನ್ನ ಚಿರೂಟ ಸೇದುವುದಕ್ಕೆ ನಾನೇನೆಂಬೆಂಬದನ್ನು ತಿಳಿಯಲು ದೂರವೇಕೆ ಹೋಗಬೇಕು? ಮದುವೆಯಲ್ಲಿ ನಾವು ಒಬ್ಬರೊಬ್ಬರ ಎಲೆಯಲ್ಲಿಯ ಎಂಜಲವನ್ನು ತಿಂದೆವಲ್ಲವೆ? ಅದರಂತೆಯೇ ಈಗ ಈ ಚಿರೂಟ ಸೇದೋಣ, ಎಂದರಾಯಿತು. ನಮ್ಮ ಮದುವೆಯ ಬೆಳ್ಳಿಹಬ್ಬವು ಸಮೀಪಿಸಿತಲ್ಲವೇ?

'ಇಶ್ಶ! ಇದೇನು ಹುಡುಗಾಟ!' ಎಂದು ಸಿಟ್ಟಿನಿಂದ ಅಂದು, ಮಾಸಾಹೇಬರು ಮನೆಯೊಳಗೆ ನಡೆದರು.

---

ಸರ ಗಂಗಾರಾಮ ಆ್ಯಂಡ ಕೋ

ಸರ ಗಂಗಾರಾಮರು ಸಾಗರ ಪ್ರಾಂತದೊಳಗಿನ ಒಬ್ಬ ದೊಡ್ಡ ಜಮೀನದಾರರು. ಕೆಲ ಜಮೀನದಾರಿಕೆಯು ಹಿರಿಯರಿಂದ ಸಂಪಾದಿಸಿದ್ದು, ಕೆಲವು ಇವರ ಸ್ವಂತ ಸಂಪಾದನೆಯದು. ಅದರಿಂದ ವರ್ಷಕ್ಕೆ ಖರ್ಚು ಕಳೆದು ತೀರ ಕಡಿಮೆಯೆಂದರೂ ಐವತ್ತು ಸಾವಿರ ಆದಾಯವಾಗುತ್ತಿತ್ತು. ಜೋದ್ಯಪುರದೊಳಗಿನ ಅವರ ವಾಡೆಯು ಹಳೆ ಮತ್ತು ಹೊಸ ಎರಡೂ ಬಗೆಯದಾಗಿತ್ತು. ಹಿಮ್ಮಗ್ಗಲು ಅಗಸೆಯಂಥ ಹೆಬ್ಬಾಗಿಲು, ಕೋಟೆಯ ಗೋಡೆ, ಕೊತ್ತಳಗಳದ್ದರೆ; ಮುಮ್ಮಗ್ಗಲು ಕಲಾಕೋವಿದರಿಂದ ಕೆತ್ತಿದ್ದ ಕಂಬಗಳು, ಶೋಭಾಯಮಾನವಾದ ಕಮಾನುಗಳು, ಪ್ರಶಸ್ತಾದ ಹಾಲ್ ಇವುಗಳಿದ್ದವಲ್ಲದೆ, ಹೊಸ ಪದ್ಧತಿಯ ಎತ್ತರವಾದ ಕೊತ್ತಳದ ಮೇಲೆ ಇಡೀ ಊರಿಗೆ ಕಾಣಿಸಬಹುದಾದಂತಹ ದೊಡ್ಡ ಗಡಿಯಾರ, ಮುಮ್ಮಗ್ಗಲಿನ ವಿಲಾಯತೀ ಪದ್ಧತಿಯ ಅಚ್ಚುಕಟ್ಟಾದ ಉಪವನ ಮುಂತಾದವುಗಳಿದ್ದವು. ಹಿತ್ತಲಕಡೆಗೆ ಕಪ್ಪಲಿಯ ನೀರಿನಿಂದ ಬೆಳೆಯುವ ಕಾಯಿಪಲ್ಲೆಯ ಕೈದೋಟವೂ ಇತ್ತು.

ಸರ ಸಾಹೇಬರ ಶಿಕ್ಷಣವು ಅಷ್ಟರ ಮಟ್ಟಿಗೇ ಆಗಿತ್ತು. ಸಂಭಾಷಣದ ಮಟ್ಟಿಗೆ ಅವರು ಇಂಗ್ಲಿಷ ಕಲಿತಿದ್ದರು ಅದರಲ್ಲಿಯೂ ಹಲವು ಮೋಜಿನ ತಪ್ಪುಗಳು ಅವರಿಂದಾಗುತ್ತಿದ್ದವು; ಮತ್ತೂ ಆವರ ಆ ತಪ್ಪಿನ ಮಾನಸಿಕ ಆನಂದ ಪಡೆಯುವದಕ್ಕೆಂದೇ ಹರೇಮಿ ಸಾಹೇಬ ಜನರು ಆವರನ್ನು ಸಂಭಾಷಣಕ್ಕೆ ಬೇಕಂತ ತೊಡಗಿಸಿ, ಅವರೆದುರು ರೂಢಿಯಲ್ಲಿಲ್ಲದ ಶಬ್ದ ಬರುವಂತಹ ವಿಷಯ ತೆಗೆದು, ಅವರ ಬಾಯಿಂದ ಏನಾದರೊಂದು ಅಪಭ್ರಂಶ ಇಂಗ್ಲಿಷ ಶಬ್ದ ಹೊರಬಿದ್ದು ಹಾಸ್ಯಾಸ್ಪದವಾಗುವಂತೆ ಮಾಡುತ್ತಿದ್ದರು; ಆದರೆ ಸರ ಸಾಹೇಬರ ರಾಜಭಕ್ತಿಯ ಮೂಲಕ ಅವರ ಇಂಗ್ಲಿಷ ಭಾಷೆಯ ತಪ್ಪಿನಂತೆ, ಅವರ ಜಮೀನದಾರಿಕೆಯೊಳಗಿನ ಹಲ ಕೆಲವು ತಪ್ಪುಗಳೂ ಅವರಿಗೆ ಮಾಫಿ ದೊರೆಯುತ್ತಿದ್ದವು.

ಸರ ಗಂಗಾರಾಮರ ಮನೆಯೆಂದರೆ ಅದೊಂದು ಪುಕ್ಕಟೆ ಹೊಟಲ್ಲೇ ಆಗಿತ್ತು! ಅದರಲ್ಲಿ ಹೆಚ್ಚಾಗಿ ಉಳಿದುಕೊಳ್ಳುವ ಅತಿಥಿ-ಅಭ್ಯಾಗತರೆಂದರೆ ಆ ಭಾಗದೊಳಗಿನ ಎಲ್ಲ ಪ್ರಕಾರದ ಅಧಿಕಾರಿಗಳು. ಗಂಗಾರಾಮರು ಅವರೆಲ್ಲರ ವ್ಯವಸ್ಥೆಯನ್ನು ಚೆನ್ನಾಗಿರಿಸುತ್ತಿದ್ದರು; ಮತ್ತು ಅದಕ್ಕಾಗಿ ಎಷ್ಟು ವೆಚ್ಚವಾದರೂ ಅವರು ಲೆಕ್ಕಿಸುತ್ತಿರಲಿಲ್ಲ.

ಅವರಿಗೆ ಕೌಟುಂಬಿಕ ವಿಸ್ತಾರವಿರಲಿಲ್ಲ. ಅವರ ಹೆಂಡತಿ ಮಾಸಾಹೇಬ, ಒಬ್ಬೊಂಟಿಗ ಮಗನಾದ ಚಂದೂಲಾಲ ಮತ್ತು ಒಬ್ಬೊಂಟಿಗ

ಮಗಳಾದ ಬಿಂಬಾ ಈ ಮೂವರೇ ಅವರ ಅವರ ಸ್ವಂತದ ಜನರಾಗಿದ್ದರು. ಬಡತನ ಸ್ಥಿತಿಗೆ ತಲುಪಿದ್ದ ಕೆಲ ಸಮೀಪದ ಆಪ್ತರಿಷ್ಟರು ಅವರಿಗಿದ್ದರು; ಆದರೆ ಅವರೆಲ್ಲರೂ ಸರ ಸಾಹೇಬರಿಗಂಜಿ ದೂರಿಗೆ ದೂರೇ ಇರುತ್ತಿದ್ದರು; ಯಾಕೆಂದರೆ, ಅವರ ಇರುವಿಕೆಯಲ್ಲಿ ಸಮಾನತೆಯಿರಲಿಲ್ಲ; ಮತ್ತು ಬಡವರ ದೈನ್ಯನೋಡಿ ಮರಗುವ ಬದಲು ಅವರ ಮೇಲೆ ಸಿಟ್ಟಾಗುವ ಸ್ವಭಾವವೇ ಸರ ಸಾಹೇಬರದಿತ್ತು. ಯಾವಾಗಾದರೊಮ್ಮೆ ಲಹರಿಯೆನಿಸಿದರೆ, ಅವರು ಆ ತಮ್ಮ ಬಡಸಂಬಂಧಿಕರಿಗೆ ಅಲ್ಪಸ್ವಲ್ಪ ಹಣ-ಕಾಸಿನ ಸಹಾಯ ಮಾಡುತ್ತಿದ್ದರು; ಆದರೆ ಅದಾದರೂ ಸ್ಪರ್ಶವಾಗಬಾರದೆಂದು ಭಿಕ್ಷುಕರ ಉಡಲಲ್ಲಿ ದೂರದಿಂದ ಅನ್ನ ಚೆಲ್ಲಿಕೊಡುವಂತೆ ಕೊಡುತ್ತಿದ್ದರು. ಅವರ ಈ ವಿಚಿತ್ರ ಸ್ವಭಾವದ ಮೂಲಕ ಅವರನ್ನು ದ್ವೇಷಿಸುವ—ನೀರಲ್ಲಿ ನೋಡುವ ಕೆಲ ಪರಿವಾರವಿದಿತು; ಆದರೆ ಅವರು ಇವರ ಬಳಿಗೆ ಸಹಸಾ ಬರುತ್ತಿದ್ದಿಲ್ಲ. ತಾತ್ಪರ್ಯವೇನಂದರೆ, ತಮ್ಮ ಮನೆತನದ ಅಭ್ಯಾಗತರ ಉಪದ್ರವವು ಗಂಗಾರಾಮರಿಗೆ ಇರಲೇಇಲ್ಲವೆನ್ನಬಹುದು. ಆದರಿಂದ ಅವರಿಗೆ ತಮ್ಮ ಎಲ್ಲ ಲಕ್ಷ್ಯವನ್ನು ಅಧಿಕಾರವರ್ಗದ ಕಡೆಗೆ ಎಳೆಯಲಿಕ್ಕೆ ಅನುವುದೊರೆಯುತ್ತಿತ್ತು.

ಮಳೆಗಾಲವಿದ್ದಾಗ ಸರಕಲ್ ಇನ್ಸಪೆಕ್ಟರರಿಂದ ಕಮೀಶನರರ ವರೆಗಿನ ಎಲ್ಲರ ಹಾಜರಿಯು ವರ್ಷಕ್ಕೆ ಒಂದಾವರ್ತಿಯಾದರೂ ಅವರ ವಾಡೆಯಲ್ಲಿ ಬೀಳತಕ್ಕದ್ದೇ; ಮತ್ತು ಅವರಲ್ಲಿಯ ಪ್ರತಿಯೊಬ್ಬರ ಸತ್ಕಾರವನ್ನು ಅವರವರ ಯೋಗ್ಯತೆಯ ಪ್ರಕಾರ ಮಾಡಲಿಕ್ಕೆ ಎಲ್ಲ ಬಗೆಯ ನೌಕರರ ಬೇರೆ ಬೇರೆ ತಂಡಗಳು ಸಿದ್ಧವಿರುತ್ತಿದ್ದವು. ಪ್ರತಿ ಐದು ವರ್ಷಗಳಲ್ಲಿ ಆ ಪ್ರಾಂತದ ಗವ್ಹರ್ನರನಾದರೂ ತನಗೆ ಕೂಡಿದಾಗೊಮ್ಮೆ ಸರ ಗಂಗಾರಾಮರ ಮನೆಯ ಟೀ-ಅಲ್ಪೋಪಹಾರಕ್ಕಾಗಿ ತನ್ನ ಪ್ರೋಗ್ರಾಮದೊಳಗಿನ ಅರ್ಧ ತಾಸನ್ನು ಖರ್ಚು ಮಾಡದಿರುತ್ತಿರಲಿಲ್ಲ; ಆದರೆ ಅಷ್ಟಕ್ಕಾಗಿ ಸರ ಸಾಹೇಬರು ಏನಿಲ್ಲೆಂದರೂ ೨-೩ ಸಾವಿರದ ಖರ್ಚಿಗೆ ಸಿದ್ಧರಾಗಬೇಕಾಗುತ್ತಿತ್ತು!

ಅವರಿಗೆ ಚಿಕ್ಕಂದಿನಿಂದಲೇ ಸರಕಾರೀ ಪದವಿಗಳು ದೊರಕಹತ್ತಿದವು. ನಾನು ಕೇವಲ ಇಪ್ಪತ್ತೇ ವರ್ಷಗಳಲ್ಲಿ 'ರಾವಸಾಹೇಬ'ನಿಂದ 'ಸರ' ಆದೆನು, ಎಂದು ಅವರು ತಮ್ಮ ಪರಾಕ್ರಮವನ್ನು ಒಮ್ಮೊಮ್ಮೆ ಹೊಗಳಿಕೊಳ್ಳುತ್ತಿದ್ದರು. ಬೇಕಾದಾಗ ತಮ್ಮ ನೆರವಿಗೆ ಸಿದ್ಧವಾಗಿರುವ ರಾಜನಿಷ್ಠೆಯು ಸರ ಗಂಗಾರಾಮರ ರೂಪದಿಂದ ತಮ್ಮ ಅಂಕಿತದಲ್ಲಿರುವಾಗ, 'ಸರ' ಎಂಬ ಎರಡಕ್ಷರದ ಕಾಣಿಕೆಯನ್ನು ಅವರಿಗೆ ಕೊಡುವದು ಸರಕಾರಕ್ಕೆ ತುಟ್ಟಿಯೆನಿಸೀತೇ? ಯಾಕಂದರೆ, ಪ್ರಸಂಗ ಬಿದ್ದಾಗ ಆ ಐವತ್ತು ಸಾವಿರ ಆದಾಯದ ಶ್ರೇಷ್ಠ

ಜಮೀನುದಾರಿಕೆಯೂ, ಅದರಲ್ಲಿಯ ಎಲ್ಲ ಧನಸಹಾಯ-ಜನಸಹಾಯವೂ ತಮಗಿರುವದೆಂದು ಆ ಪ್ರಾಂತದ ಸರಕಾರಕ್ಕೆ ನಂಬಿಗೆಯಾಗಿತ್ತು.

ಸರ ಸಾಹೇಬರ ಪತ್ನಿಯಾದ ಮಾಸಾಹೇಬರು ಹಳೇಪದ್ಧತಿಯವರಾಗಿದ್ದರು; ಆದರೆ ಸ್ವಂತ ಸರ ಸಾಹೇಬರು ಸನಾತನೀಧರ್ಮಕ್ಕೆ ತಕ್ಕವಲ್ಲದಂತಹ ಕೆಲ ಕೃತ್ಯಗಳನ್ನು ಮಾಡುತ್ತಿದ್ದರೂ ಕೂಡ, ಅವರು ತಮ್ಮ ಹೆಂಡತಿಯ ಧಾರ್ಮಿಕ ವ್ಯವಹಾರಗಳಿಗೆ ವಿಘ್ನತರುತ್ತಿರಲಿಲ್ಲ; ಮತ್ತು ಈ ಸಹಿಷ್ಣುತೆಯ ಪ್ರತಿಫಲವೆಂದು ಮಾಸಾಹೇಬರಾದರೂ ತಮ್ಮ ಗಂಡನು ಏನು ತಿನ್ನುವನು, ಏನು ಕುಡಿಯುವನು ಇಲ್ಲವೆ ಬೇರೆ ಯಾರ ಸಂಗತಿಯಲ್ಲಿ ಏನು ಮಾಡುವನು ಮುಂತಾದ್ದರ ಕಡೆಗೆ ದುರ್ಲಕ್ಷ್ಯಮಾಡುತ್ತಿದ್ದರು. ಆದರಿಂದ ಅವರಿಬ್ಬರೂ ಸೀಮೆಗೆ ಸೀಮೆ ಕೂಡಿದ್ದ ಎರಡು ಗೃಹರಾಜ್ಯಗಳಂತೆ ತೋರುತ್ತಿದ್ದರು! ಆ ವಾಡೆಯ ಮುಮ್ಮಗ್ಗಲಿನ ಅಂದರೆ, ಪಡಸಾಲೆಯ ಮೇಲಂತಸ್ತಿನ ಭಾಗವು ಸರ ಸಾಹೇಬರಿಗಾಗಿ ಕಾಯಿಟ್ಟ ಸ್ಥಳವಾಗಿತ್ತು. ಆ ಭಾಗದಲ್ಲಿ ವರ್ಷಕ್ಕೊಂದು ಸಲ ಗೋಕುಲಾಷ್ಟಮಿಯ ದಿನ ಹರಿಕಥೆಯು ನಡೆದಾಗಲ್ಲದೆ ಮಾಸಾಹೇಬರು ಬೇರೆ ಎಂದೂ ಪ್ರವೇಶಿಸುತ್ತಿರಲಿಲ್ಲ. ತದ್ವಿರುದ್ಧ ಸರ ಸಾಹೇಬರಾದರೂ ವರ್ಷದೊಳಗಿನ ಒಂದು ದಿನ ದೇವರ ಮನೆಯ ಕಡೆಗೆ ಒಡ್ಡ ಇಣುಕುತ್ತಿರಲಿಲ್ಲ. ಹಳೇ ಪದ್ಧತಿಯಂತೆ ತಾಯಿಶ್ರಾದ್ಧವಾಗುವ ಅದೊಂದೇ ದಿನ ಅವರು ದೇವರ ಮನೆಗೆ ಹೋಗುತ್ತಿದ್ದರು!

ಸರ ಸಾಹೇಬರ ಮಗಳಾದ ಬಿಂಬೆಯು ಒಳ್ಳೇ ಬುದ್ಧಿಶಾಲಿನಿಯಾಗಿದ್ದಳು. ಅವಳು ಸಾಲೆಗೆಂದೂ ಹೋಗಿರಲಿಲ್ಲ; ಆದರೂ ಮನೆಯಲ್ಲಿ ಶಿಕ್ಷಕರನ್ನಿಟ್ಟು ಅವಳಿಗೆ ಓದು, ಬರೆಹ, ಸಂಭಾಷಣ, ಗಾಯನ, ವಾದನ, ಕಲಾಕುಸುರಿ ಮುಂತಾದ ಶಿಕ್ಷಣ ಕೊಡಲಾಗಿತ್ತು. ಮಾಸಾಹೇಬರು ಉತ್ತರ ಹಿಂದುಸ್ಥಾನದ ಪದ್ಧತಿಯಂತೆ ಒಮ್ಮೊಮ್ಮೆ ಬುರುಕೆ ಧರಿಸುತ್ತಿದ್ದರು; ಒಮ್ಮೊಮ್ಮೆ ಧರಿಸುತ್ತಿರಲಿಲ್ಲ; ಆದರೆ ಬಿಂಬೆಯು ಮಾತ್ರ ಎಂದೂ ಬುರುಕೆ ಧರಿಸುತ್ತಿರಲಿಲ್ಲ. ತಂದೆಯ ಪ್ರೀತಿಯ ಮಗಳೆಂದು ಅವಳಿಗೆ ಅವರಲ್ಲಿ ಯಾವಾಗ ಬೇಕಾದರೂ ಪ್ರವೇಶವಿದ್ದಿತು. ಒಮ್ಮೊಮ್ಮೆ ಅವಳು ತನ್ನ ಹುಮ್ಮಸಕ್ಕೆಂದು ತಂದೆಯ ಕಚೇರಿಯಲ್ಲಿ ಹೋಗಿ ಕೂಡ್ರುತ್ತಿದ್ದರೆ, ಕೆಲ ಪ್ರಸಂಗಗಳಲ್ಲಿ ತಂದೆಯು ಹುಮ್ಮಸಕ್ಕಾಗಿ ಅವಳನ್ನು ಬೇಕಂತ ಅಲ್ಲಿಗೆ ಕರೆಯಿಸಲಾಗುತ್ತಿತ್ತು; ಮತ್ತು ಮಂದಿಗೆ ತೋರಿಸಲರ್ಹವಾದ ಮನೆಯೊಳಗಿನ ಪದಾರ್ಥಗಳಲ್ಲಿ ಇವಳೂ ಒಬ್ಬಳೆಂದು ಸರ ಗಂಗಾರಾಮರು ಪ್ರತಿಷ್ಠಿತ ಅಭ್ಯಾಗತರೆದುರಿಗೆ ಅವಳನ್ನು ಕರೆಯಿಸಿ ಮಾತಾಡಿಸಿ, ಅವಳ ಕೌತುಕಮಾಡುತ್ತಿ

ದ್ದರು. ಅಂಥ ಹಲವು ಪ್ರಸಂಗಗಳಲ್ಲಿ ಶುದ್ಧ ಇಂಗ್ಲಿಷ ಮಾತಾಡುವ ಕಲೆಯು ಸರ ಸಾಹೇಬರಿಗಿಂತ ಬಿಂಬೆಗೇ ಹೆಚ್ಚು ಸಾಧಿಸುತ್ತಿತ್ತಾದ್ದರಿಂದ, ಅವರ ಭಾಷಣದೊಳಗಿನ ತಪ್ಪು ತಿದ್ದಿಕೊಳ್ಳುವ ಕೆಲಸವನ್ನು ಅವಳೇ ಮಾಡುತ್ತಿದ್ದಳು; ಆದರೆ ಅದು ಸಾಧಿಸದಿದ್ದಾಗ ಮಾತ್ರ ತನ್ನ ನಾಚಿಕೆ ಸಹಿಸಿಕೊಳ್ಳುವ ಮಹತ್‌ಸಂಕಟವು ಅವಳಿಗೆ ಪ್ರಾಪ್ತವಾಗುತ್ತಿತ್ತು.

ಬಿಂಬೆಗೀಗ ಇಪ್ಪತ್ತುವರ್ಷ. ಆದರೂ ಸರ ಗಂಗಾರಾಮರು ಅವಳ ಲಗ್ನದ ವಿಚಾರವನ್ನೇ ಮಾಡಿರಲಿಲ್ಲ. ಬಹುಶಃ ಪ್ರತಿಯೊಂದು ಮಾತಿನಲ್ಲಿಯೂ ಅವರಿಗೆ ತಮ್ಮ ಕುಲ-ಶೀಲಗಳಿಗಿಂತಲೂ ವಿಲಾಯತಿಯು ಹುಚ್ಚೇ ಹೆಚ್ಚು ರುಚಿಸುತ್ತಿತ್ತಾದ್ದರಿಂದ, ಅವರು ತಮ್ಮಮಗಳ ವಿವಾಹವನ್ನು ತಡೆದು, ಅದು ಕೂಡ ಸ್ವಯಂವರ ಪದ್ಧತಿಯಿಂದಲೆ ಮಾಡಬೇಕೆಂದು ನಿರ್ಧರಿಸಿದ್ದರು.

ಈ ವಿಷಯದಲ್ಲಿ ಮಾಸಾಹೇಬರಿಗೆ ಅವಳ ತಂದೆಗಿಂತಲೂ ಹೆಚ್ಚು ಭೇದಕದೃಷ್ಟಿಯಿದ್ದಿತು. ಅವಳ ಮದುವೆಯು ಬೇಗನೆ ಆಗಿದ್ದರೆ ಅವಳಿಗೆ ಬೇಕಿತ್ತು; ಆದರೆ ಅದನ್ನು ಕಾರ್ಯರೂಪಕ್ಕೆ ತರಲು ಪ್ರತಿಕೂಲವಾದ ಹಲವು ಕಾರಣಗಳಿದ್ದವು. ಈ ಕೆಲಸದಲ್ಲಿ ಮುಖ್ಯವಾಗಿ ಪ್ರಯತ್ನಿಸುವವರು ಗಂಗಾರಾಮರು. ಅವರೇ ಈ ಬಗ್ಗೆ ಉದಾಸೀನರು. ಮಾಸಾಹೇಬರಿಗೆ ಅಲ್ಲಿ ಅಥವಾ ಬೇರೆ ಪ್ರಾಂತಗಳಲ್ಲಿ ತಮ್ಮ ಸರಿಜೋಡಿಯ ಕುಮಾರ, ರಾಜಪುತ್ರ ಅಥವಾ ಜಮೀನದಾರರ ವರಗಳಾವಿರುವವೆಂಬದು ಹೇಗೆ ತಿಳಿಯಬೇಕು? ಅಲ್ಲದೆ ಸ್ವಯಂವರ ತತ್ವದ ಘೋಷಣೆಯು ಸ್ವತಃ ಸರ ಸಾಹೇಬರಿಂದಲೇ ಆಗಹತ್ತಿರಲು, ಅವ್ವ-ಅಪ್ಪರ ಅಧಿಕಾರದಲ್ಲಿ ಈ ಲಗ್ನವಾಗುವದಲ್ಲವೆಂಬದು ನಿರ್ಧರವಾಗಿ ಬಿಟ್ಟಿತ್ತು!

ಈ ವಿಷಯದಲ್ಲಿ ಇನ್ನೊಂದು ಅಡಚಣಿಯೇನಂದರೆ, ಮನೆಯ ಒಬ್ಬೊಂಟಿಗ ಮಗನು, ಅಂದರೆ ಬಿಂಬೆಯ ಅಣ್ಣನಾದ ಚಂದೂಲಾಲನು ಶಿಕ್ಷಣಕ್ಕೆಂದು ವಿಲಾಯತಿಗೆ ಹೋಗಿದ್ದರಿಂದ, ಆತನು ಮರಳಿ ಬಂದ ಬಳಿಕ ಕೂಡಿ ಬಂದ ಮೇರೆಗೆ ಉಭಯತರ ವಿವಾಹಗಳನ್ನು ಒಮ್ಮೆಲೆ ಮಾಡಿಬಿಡಬೇಕೆಂದು ಸರ್ವಸಮ್ಮತವಾದ ವಿಚಾರ! ಮತ್ತು ನಿಜವಾಗಿ ಹೇಳುವುದಾದರೆ, ಇನ್ನೂ ಒಂದು ಪ್ರತಿಕೂಲ ಕಾರಣವಿದ್ದಿತು ಅದೇನಂದರೆ, ತಮ್ಮ ಅಕ್ಕರೆಯ ಮಗಳು ಶಕ್ಯವಾದಷ್ಟು ಹೆಚ್ಚು ದಿನ ತಮ್ಮಿಂದ ದೂರಾಗಬಾರದೆಂದು ಮಾಸಾಹೇಬರ ಮನಸ್ಸಿನ ಒಳಮೂಲೆಯಲ್ಲಿ ಪ್ರೇಮದಿಂದನಿಸುತ್ತಿತ್ತು!

ಚಂದೂಲಾಲನು ನಾಲ್ಕು ವರ್ಷಗಳಿಂದ ಇಂಗ್ಲಂಡದೊಳಗಿನ ಆಕ್ಸಫರ್ಡ ಕಾಲೇಜಿನಲ್ಲಿ ಓದುತ್ತಿದನು. ಆತನು ಅತ್ಯಂತ ಬುದ್ಧಿವಂತನೂ

ವಿದ್ಯಾಭಿಲಾಷೆಯೂ ಇದ್ದುದರಿಂದ ಆ ವಿದ್ಯಾಲಯದ ಎಂ. ಏ. ಪರೀಕ್ಷೆ, ಬ್ಯಾರಿಸ್ಟರ ಪರೀಕ್ಷೆ ಮತ್ತು ಇಂಡಿಯನ್ ಸಿವ್ಹಿಲ್ ಸರ್ವಿಸ್ಸಿನ ಪರೀಕ್ಷೆ ಈ ಮೂರರಲ್ಲೂ ಉತ್ತೀರ್ಣವಾಗುವ ಧ್ಯೇಯವನ್ನು ಅವನು ತನ್ನ ದೃಷ್ಟಿಯ ಮುಂದಿರಿಸಿಕೊಂಡಿದ್ದನು. ವಿಲಾಯತಿಯೊಳಗಿನ ಶ್ರೇಷ್ಠ ವಿದ್ಯಾಪೀಠಗಳಲ್ಲಿಯ ಅಭ್ಯಾಸಕ್ರಮದ, ಅಭ್ಯಾಸ ವಿಷಯಗಳ ಬರೀ ಕಲ್ಪನೆ ಕೂಡ ಸರ ಗಂಗಾ ರಾಮರಿಗಿರಲಿಲ್ಲ; ಆದರೆ ಅವರ ಜ್ಞಾನದಭಾವವನ್ನು ಅವರ ಮಹತ್ವಾ ಕಾಂಕ್ಷೆಯು ಈಡೇರಿಸಿದ್ದಿತು. ಆ ಮಹಾತ್ವಾಕಾಂಕ್ಷೆಯೆಂದರೆ, ತಮ್ಮ ಮಗನು ಆಯ್. ಸಿ. ಎಸ್. ಆಗಬೇಕೆಂಬದು!

ಅವರು ತಮ್ಮ ಚಿಕ್ಕಂದಿನಿಂದ ತಮ್ಮ ಪ್ರಾಂತದೊಳಗಿನ ಐ. ಸಿ. ಎಸ್ಸರ ವೈಭವವನ್ನು ಕಣ್ಣಾರೆ ಕಂಡಿದ್ದರು; ಮತ್ತು ಐ. ಸಿ. ಎಸ್ಸಿನ ಅಧಿಕಾರ ಹಾಗು ಜಮೀನದಾರಿಕೆಯ ಅಧಿಕಾರ ಇವು ಸಂಗೀತದೊಳಗಿನ ವಾದಿ ಪ್ರತಿವಾದಿ ಸ್ವರ ಗಳಂತೆಂದು ಅವರಿಗೆ ಅನಿಸುತ್ತಿದ್ದರಿಂದ, ಚಂದೂಲಾಲನನ್ನು ತೊಟ್ಟಿಲಲ್ಲಿ ಹಾಕಿದಂದಿನಿಂದಲೇ ಅವನನ್ನು ವಿಲಾಯತಿಗೆ ಕಳಿಸಿ ಐ. ಸಿ. ಎಸ್. ಮಾಡಿಸಿ ತರುವ ಒಳ್ಳೇ ಪ್ರಬಲೇಚ್ಛೆಯನ್ನು ಅವರು ತಮ್ಮ ಮನಸ್ಸಿನಲ್ಲಿ ಧರಿಸಿದ್ದರು. ಅದೊಂದು ತಮ್ಮ ಜನ್ಮದ ಮುಖ್ಯ ಕರ್ತವ್ಯವೆಂದು ಅವರಿಗನಿಸುತ್ತಿತ್ತು. ಸುದೈವದಿಂದ ಅವರ ಮಗನು ಬುದ್ಧಿವಂತನೂ ಶಿಕ್ಷಣ ಪ್ರೇಮಿಯೂ ಆದನು. ಅವನಿಗೆ ದುಡ್ಡಿನ ಕೊರತೆ ಬೇರೆ ಇರಲಿಲ್ಲ! ಸರ ಗಂಗಾರಾಮರು ಅವನನ್ನು ವಿಲಾಯತಿಯಲ್ಲಿ ಬಹು ರೀತಿಯಿಂದ ಇರಿಸಿದ್ದರು. ಅದರಿಂದ ಚಂದೂಲಾಲನ ಸಂಗಡಿಗರು ಆತನನ್ನು 'ಪ್ರಿನ್ಸ ಆಫ್ ನವಲಪುರ' (ಚೋದ್ಯಪುರದ ಯುವ ರಾಜ) ಎಂದೆನ್ನುತ್ತಿದ್ದರು. ಆತನ ಚಾಕರಿಗೆ ಆಳು, ಕೂಡ್ರಲಿಕ್ಕೆ ಕುದುರೆ, ಇರಲಿಕ್ಕೆ ಸ್ವತಂತ್ರವಾದ ಬಂಗ್ಲೆ, ಪ್ರತಿವರ್ಷ ಯುರೋಪದೊಳಗಿನ ಬೇರೆ ಬೇರೆ ದೇಶಗಳ ಪ್ರವಾಸಕ್ಕೆ ಸೌಕರ್ಯ, ಸ್ನೇಹಿತರಿಗೆ ಕಾಣಿಕೆ, ಔತನ, ಉಪಾಹಾರ ಮುಂತಾದವುಗಳಿಗೆಲ್ಲ ಹಿಡಿದಷ್ಟು ದುಡ್ಡು ಸರ ಗಂಗಾರಾಮ ರಿಂದ ಚಂದೂಲಾಲನ ಹೆಸರಿಗೆ ಬ್ಯಾಂಕುಗಳಲ್ಲಿ ಮುಂಗಡವಾಗಿ ಠೇವೆಂದು ಇರಿಸಲ್ಪಟ್ಟಿತ್ತು.

ಯೋಜಿಸಿದ್ದ ಅಭ್ಯಾಸ ಕ್ರಮದಲ್ಲಿ ಉಂಟಾದ ಯಶದ ಸರ್ಟೀಫಿಕೇಟು ಗಳನ್ನು ಚಂದೂಲಾಲನು ಆಗಾಗ್ಗೆ ತನ್ನ ತಂದೆಗೆ ಕಳಿಸಿಕೊಡುತ್ತಿದ್ದನು; ಆದರೆ ಆ ಸರ್ಟೀಫಿಕೇಟುಗಳ ಅರ್ಥ ತಿಳಕೊಳ್ಳುವಷ್ಟು ಜ್ಞಾನವು ಸರ ಸಾಹೇ ಬರಿಗಿರದ್ದರಿಂದ, ಅವರು ರಾಜಧಾನಿಯ ಪಟ್ಟಣಕ್ಕೆ ಹೋಗಿ ತಮ್ಮ ಯುರೋಪೀಯನ್ನ ಅಧಿಕಾರಿ ಮಿತ್ರರಿಗೆ ಅವುಗಳನ್ನು ತೋರಿಸುತ್ತಿದ್ದರು.

ಆ ಅಧಿಕಾರಿಗಳಿಗೆ ಮಾತ್ರ ಆ ಸರ್ಟಿಫಿಕೇಟುಗಳ ಮಹತ್ವ ತಿಳಿಯುವದರಿಂದ ಅವರು ಗಂಗಾರಾಮರನ್ನು ಹೆಚ್ಚಾಗಿ ಅಭಿನಂದಿಸುವರು. ಆಗ ತಾವು ಕೃತಕೃತ್ಯವಾದೆವೆಂದು ಧನ್ಯತೆಯ ಗಂಟನ್ನು ಬಗಲೊಳಗಿರಿಸಿಕೊಂಡು ಸರ ಸಾಹೇಬರು ತಮ್ಮ ಊರಿಗೆ ಹಿಂದಿರುಗುತ್ತಿದ್ದರು. ಕಡೆಗೆ ಆಯ್. ಸಿ. ಎಸ್ಸಿನ ಬರೆಹ ಹಾಗು ಮುಖ ಪರೀಕ್ಷೆಯೂ ಕೊನೆಗಂಡಿತು; ಮತ್ತು ತಾನು 'ಬಹುಶಃ ಉತ್ತೀರ್ಣನಾಗುವೆನು' ಎಂಬ ತಂತಿಯು ಚಂದೂಲಾಲನಿಂದ ಮನೆಗೆ ಬಂದ ಬಳಿಕಂತೂ ಸರ ಸಾಹೇಬರ ಉಬ್ಬಿಗೆ ಸೀಮೆಯೇ ಉಳಿಯಲಿಲ್ಲ. ಅವರು ತಮ್ಮ ಮಗನ ಸ್ವಾಗತದ ಸಿದ್ಧತೆಯನ್ನು ಬಳ್ಳೇ ಭರದಿಂದ ನಡೆಸಿದರು. ನಾಲ್ಕು ವರ್ಷಗಳ ತರುವಾಯ ಮಗನ ಭೆಟ್ಟಿಯಾಗುವದೆಂದು ಮಾಸಾಹೇಬರಿಗೂ, ಅಣ್ಣನ ಭೆಟ್ಟಿಯಾಗುವದೆಂದು ಬಿಂಬೆಗೂ ಹೆಚ್ಚಾಗಿ ಸಂತೋಷವಾಯಿತು. ಸರ ಸಾಹೇಬರು ತಮ್ಮ ವಾಡೆಯನ್ನೆಲ್ಲ ಉಡುಗಿಸಿ, ಸಾರಿಸಿ, ಸ್ವಚ್ಛಗೊಳಿಸಿಕೊಂಡರಲ್ಲದೆ, ತಮ್ಮ ಭಾವೀ ಮನೋರಾಜ್ಯದ ಹೊಸ ವಾಡೆಯ ಕಟ್ಟುವ ಕೆಲಸವನ್ನು ತಮ್ಮ ಮನಸ್ಸಿನಲ್ಲಿಯೇ ಪ್ರಾರಂಭಿಸಿದರು!

ಮೊದಲನೇ ಪ್ರಕರಣದಲ್ಲಿ ವರ್ಣಿಸಿದ ಪ್ರಸಂಗ ನಡೆಯುವದಕ್ಕಿಂತ ಮುಂಚೆ ಚಂದೂಲಾಲನು ವಿಲಾಯತಿಯಿಂದ ಬಂದು ೨೦-೨೫ ದಿವಸಗಳಾಗಿದ್ದವು. ಐ. ಸಿ. ಎಸ್. ಪರೀಕ್ಷೆಯ ರಿಝಲ್ಟು ಇಷ್ಟರಲ್ಲೇ ೨-೩ ದಿನಗಳಲ್ಲಿ ಆಗುವುದಿತ್ತು. ಅದರಲ್ಲಿಯೂ ತನ್ನ ಮುಖ ಪರೀಕ್ಷೆಯ ಅನುಮಾನದಿಂದ ತಾನು ಪಾಸಾಗುವದು ಚಂದೂಲಾಲನಿಗೆ ಖಾತ್ರಿಯೆನಿಸಿತ್ತಾದ್ದರಿಂದ, ಮನೆಯ ಮಿಕ್ಕ ಜನರೆಲ್ಲ ಕೊಂಚ ಸಚಿಂತರಾಗಿದ್ದರೂ ಆತನು ಮಾತ್ರ ನಿಶ್ಚಿಂತನಾಗಿರುತ್ತಿದ್ದನು; ಮತ್ತು ತಾಯಿ-ತಂದೆಗಳ ಹಾಗು ತಂಗಿಯ ಚಿಂತಾನಿವಾರಣೆಗಾಗಿ ತನ್ನ ವಿನೋದಪ್ರಚುರವಾದಾಚರಣೆಯಿಂದ ಪ್ರಯತ್ನಿಸುತ್ತಿದ್ದನು. ಆತನು ನಾಲ್ಕು ವರ್ಷಗಳ ಹಿಂದಿನ ತನ್ನ ಹಳೇ ಮಿತ್ರರನ್ನೂ ಕ್ರೀಡಾದಿಗಳ ಹಳೇ ಕಾರ್ಯಕ್ರಮಗಳನ್ನೂ ಪುನರುಜ್ಜೀವನಗೊಳಿಸಿದನು; ಆದರೆ ಇತ್ತೀಚೆಗೆ ಆತನ ರಹದಾರಿ ಕಟ್ಟಾದುವೆಂದರೆ, ರಾವಬಹಾದ್ದೂರ ಶಾಮಲಾಲರ ಮನೆಯ ಕಡೆಗೇ!

ನಾಲ್ಕು ವರ್ಷಗಳ ಹಿಂದೆ ರಾವಬಹದ್ದೂರ ಶಾಮಲಾಲರ ಮಗಳಾದ ಶರಯೂಳ ಜೊತೆಗೆ ಚಂದೂನ ಲಗ್ನವಾದ ನಂತರವೇ ಅವನು ವಿಲಾಯತಿಗೆ ಹೊರಡಬೇಕೆಂದು ಗೊತ್ತಾಗಿತ್ತು. ಆದರೆ ಕೆಲ ಆಕಸ್ಮಿಕ ಕಾರಣಗಳ ಮೂಲಕ ಆ ಯುತ್ತ ಕಾಲಕ್ಕೆ ಆ ಬೇತನ್ನು ರಹಿತಮಾಡಬೇಕಾಯಿತು. ಆದರೆ ಚಂದೂಲಾಲನು ಮರಳಿ ಬಂದಮೇಲಾದರೂ ಆ ವಿವಾಹವಾಗತಕ್ಕದ್ದೇ

ಎಂಬ ವಿಚಾರದಿಂದ ಆ ಎರಡೂ ಕುಟುಂಬಗಳು ಪರಸ್ಪರರೊಡನೆ ವ್ಯವಹರಿಸುತ್ತಿದ್ದವು. ಬಿಂಬೆ ಮತ್ತು ಶರಯೂ ಇವರಿಬ್ಬರೂ ಬಾಲಸಖಿಯರು; ಹಾಗು ಆ ಭಾವೀಸಂಬಂಧದ ಮೂಲಕ ಅವರಲ್ಲಿ ದೃಢಮೈತ್ರಿಯುಂಟಾಗಿತ್ತು.

ಆದರೆ ಚಂದೂಲಾಲನ ನಡವಳಿಕೆಯಲ್ಲಿ ಮಾತ್ರ ನಾಲ್ಕುವರ್ಷಗಳ ಪೂರ್ವದ ಅಂತಃಕರಣವು ಈಗ ಉಳಿದಿರಲಿಲ್ಲ. ಅದು ಸಹಜವಾಗಿ ಒಡೆದು ಕಾಣುವಷ್ಟು ಪ್ರಕಟವಾಗಿರದಿದ್ದರೂ ಸೂಕ್ಷ್ಮದೃಷ್ಟಿಯುವರಿಗೆ ಗೊತ್ತಾಗದೆ ಇರುತ್ತಿರಲಿಲ್ಲ. ರಾವಬಹಾದ್ದೂರರ ಮನೆಯು ಕರೆಯನ್ನು ನಿರಾಕರಿಸಲಾಗದ್ದರಿಂದ ಚಂದೂಲಾಲನು ಕಳೆದ ಒಂದೆರಡು ವಾರಗಳಲ್ಲಿ ಎರಡು-ಮೂರು ಸಲ ಚಹಕ್ಕೂ ಒಮ್ಮೆ ಊಟಕ್ಕೂ ಅವರಲ್ಲಿಗೆ ಹೋಗಿದ್ದನು. ಅದರಂತೆಯೇ ರಾವಬಹದ್ದೂರರ ಮನೆಯುವರಾದರೂ ಸರ ಸಾಹೇಬರ ಮನೆಗೆ ಒಂದು ಚಹ ಊಟ ತೀರಿಸಿಕೊಂಡು ಹೋಗಿದ್ದರು; ಆದರೆ ಲಗ್ನದ ಮಾತು ಹೊರಟಿತೆಂದರೆ, ಅದರಲ್ಲಿ ಚಂದೂಲಾಲನ ಸಂಬಂಧ ಒಂದೇ ಬರಬೇಕು. ಅದು ಹೊರಟಾಗ ಮಾತ್ರ ಆತನು ತುಸ ತುಟಿ ಹತ್ತಿಕ್ಕಿಕೊಂಡೇ ಮಾತಾಡುವನು; ಮತ್ತು ತನ್ನ ಮನೋಗತವನ್ನು ನಿಃಸಂದಿಗ್ಧವಾಗಿ ಪ್ರಕಟಿಸುತ್ತಿರಲಿಲ್ಲ

— —

### ಚಂದೂನ ಬೇಟೆ.

ಮೊದಲನೇ ಪ್ರಕರಣದಲ್ಲಿ ನಡೆದ ಪ್ರಸಂಗದ ನಂತರ ಸುಮಾರು ಅರ್ಧತಾಸಿಗೆ, ಎಂಟೂ ವರೆಗೆ ಚಂದೂಲಾಲನು ತನ್ನ ಉಡುಪುಗಳನ್ನು ಬದಲಿಸಿ ಅಟ್ಟದ ಮೇಲಿಂದ ಕೆಳಗಿಳಿದನು. ಆಗ ಅವನ ಬಾಯಲ್ಲಿ ಸಿಗರೇಟು, ಕೈಯಲ್ಲಿ ತುಬಾಕಿ ಇದ್ದವು. ಆತನು ಹಿಂದುಗಡೆಯ ಅಂಗಳದಲ್ಲಿಳಿದ ಬಳಿಕ ಗಟ್ಟಿಗಟ್ಟಿಯಾಗಿ ಕೂಗಲಿಕ್ಕೂ ಬೈಯಲಿಕ್ಕೂ ಪ್ರಾರಂಭಿಸಿದನು. ಅದನ್ನು ಕೇಳಿ ವಾಡೆಯ ವ್ಯವಸ್ಥಾಪಕನು ಮೊಟ್ಟ ಮೊದಲು ಅವನ ಮುಂದೆ ಬಂದನು.

"ಕ್ಯಾಂ ಬಂಕಟ! ನಾನು ಹೇಳಿದಂತೆ ನನ್ನ ಶಯನಾಗಾರದ ವ್ಯವಸ್ಥೆಯಾಯಿತೇ?" 'ಆಗಿದೆ ಸರಕಾರ!"

"ಏನೇನಾಯಿತು ಹೇಳಿರಿ ನೋಡೋಣ?"

'ಒಂದಕ್ಕೆ ಬದಲು ಎರಡು ಚಪ್ಪರ ಪಲ್ಲಂಗಗಳನ್ನು ಇರಿಸಿದೆ. ಬಾಗಿಲು, ಕಿಟಕಿಗಳಿಗೆ ಪರದೆ ಹಚ್ಚಿದೆ ಫೋಟೋಗಳನ್ನು ತಾವು ತಿಳಿಸಿದ ಕ್ರಮದಿಂದಲೇ ಹಚ್ಚಲಾಗಿದೆ ಗೋಡೆಯ ಹಳೇ ಬಣ್ಣವನ್ನು ತೆಗೆದು, ಹೊಸ ಮುಗಿಲು ಬಣ್ಣ ಹಚ್ಚಿದೆ. ತೂಗುದೀಪಗಳಲ್ಲಿ ಮೇಣಬತ್ತಿಗಳನ್ನಿರಿಸಿದೆ. ವಿದ್ಯುದ್ದೀಪಗಳಿಗೆ ಗ್ಲೋಬುಗಳನ್ನು ಹಾಕಿಸಿವೆ; ಮತ್ತು ವಿದ್ಯುತ್ ಬೀಸಣಿಕೆಯನ್ನು ಹಚ್ಚಿದೆ."

ಮತ್ತು ಇಷ್ಟೆಲ್ಲ ರಿಪೇರಿಗಳನ್ನು ಮಾಡಲಿಕ್ಕೆ ಹೇಳಿದ ಬಗ್ಗೆ ತನ್ನ ತಪ್ಪು ತೋರಬಾರದೆಂದು ಬಂಕಟನು "ಸರಕಾರವು ವಿಲಾಯತಿಗೆ ಹೋದಂದಿನಿಂದ ಆ ಕೋಣೆಯ ಕಡೆಗೆ ಅದಾರು ಹಣಿಕಿ ಹಾಕಿದ್ದರು? ಅದಕ್ಕೆ ಯಾವಾಗಲೂ ಬೀಗ ಬಡಿದಿರುತ್ತಿತ್ತು. ತಿಂಗಳು-ಹದಿನೈದು ದಿನಗಳಿಗೊಮ್ಮೆ ನಾನೇ ಕೀಲಿ ತೆಗೆದು ಉಡಿಗಿಸಿ ಸಾರಿಸಿಸುತ್ತಿದ್ದೆನು. ತಾವು ತಿಳಿಸಿದ್ದ ಎಲ್ಲ ರಿಪೇರಿಗಳನ್ನು ಮಾಡುವುದು ಯೋಗ್ಯವೇ ಆಗಿತ್ತು; ಮತ್ತು ಅವುಗಳಿಗಾಗಿ ವಿಶೇಷ ಖರ್ಚೂ ಹಿಡಿದಿರುವುದಿಲ್ಲ."

"ಖರ್ಚಿನ ಬಗ್ಗೆ ಅದಾರು ಕೇಳಿರುವರೆನ್ನು; ಆದರೆ ಹೇಳದ ಹೊರತು ಮಾಡಿಸಲಿಕ್ಕೆ ತಿಳಿಯದಿರುವದು ವ್ಯವಸ್ಥಾಪಕರಿಗೆ ಶೋಭಿಸುವದಿಲ್ಲ"

"ಹಾಗಲ್ಲ ಸರಕಾರ. ಜೋಡುಪಲ್ಲಂಗ ಮುಂತಾದುದೆಲ್ಲವೂ ತಿಳಿದಿತ್ತು; ಮತ್ತು ನಾನು ಅದರಂತೆ ವ್ಯವಸ್ಥೆ ಮಾಡಿಸತಕ್ಕವನೇ ಇದ್ದೆನು; ಆದರೆ ಮಾಸಾಹೇಬರು 'ಧಣೇರು ವಿಲಾಯತಿಯಿಂದ ಬೇಗನೆ ಬರತಕ್ಕವರಿದ್ದಾರೆ. ಅವರು ಬಂದು ಹೇಳಿದಂತೆಯೇ ಮಾಡಿರಿ. ಏನಾಗಬೇಕೋ ಅದೆಲ್ಲವೂ ಒಮ್ಮೆಲೆ ಅವರ ಮನಸಿನಂತಾಗುವುನೇ ವಿಹಿತವು. ಇಲ್ಲದಿದ್ದರೆ ನೀವು ಇಂದೊಂದು ಮಾಡಿದರೆ, ನಾಳೆ ಅವರ ಇಷ್ಟದಂತೆ ಅದನ್ನು ಬದಲಿಸಿ ಬೇರೆ ಮಾಡಬೇಕಾದೀತು' ಎಂದು ಹೇಳಿದ್ದರು. ಅದರಿಂದ ನಾನು ಇದುವರೆಗೆ ತಮ್ಮ ಪ್ರತ್ಯಾಗಮನವನ್ನು ನಿರೀಕ್ಷಿಸಬೇಕಾಯಿತು.

"ಒಳ್ಳೇದು. ಇನ್ನು ಮುಂದೆ ಮತ್ತೂ ಕೆಲವು ವ್ಯವಸ್ಥೆಯನ್ನು ಆ ಕೋಣೆಯಲ್ಲಿ ಮಾಡಬೇಕಾದೀತು. ಅದನ್ನೆಲ್ಲ ನಾನು ಹೇಳಿದಾಗ ಹೇಳಿದಂತೆ ಮಾಡಿಸಿರಿ."

ಹೀಗನ್ನುತ್ತ ಹತ್ತಿಪ್ಪತ್ತು ಹೆಜ್ಜೆ ಮುಂದೆ ಸಾಗುವಷ್ಟರಲ್ಲಿ ಒಂದು ತುಳಸೀವೃಂದಾವನದ ಕಡೆಗೆ ಬೊಟ್ಟು ತೋರಿ ಚಂದೂಲಾಲನು--"ಈ ಅಸಡ್ಡಾಳ ಕಟ್ಟೆಯು ನಾನು ವಿಲಾಯತಿಗೆ ಹೋಗುವ ಮೊದಲು ಇಲ್ಲಿ ಇದ್ದಿತೆ?" ಎಂದು ಕೇಳಲು,

"ಇರಲಿಲ್ಲ ಸರಕಾರ! ಆದರೆ ತುಳಸಿಗೆ ನೀರು ಹಾಕಲಿಕ್ಕೆ ಸುಲಭವಾಗಬೇಕೆಂದೂ, ನಡುಮನೆಯಿಂದ ಹೊರಬಿದ್ದೊಡನೆ ಕಣ್ಣಿಗೆ ಬೀಳಬೇಕೆಂದೂ ಮಾಸಾಹೇಬರ ಆಜ್ಞೆಯ ಮೇರೆಗೆ ಈ ವೃಂದಾವನವನ್ನು ಇಲ್ಲಿ ಕಟ್ಟಿಸಲಾಗಿದೆ."

"ಡ್ಯಾಮ್ ದ್ಯೆಟ ಬೃಂದಾವನ! ಇದು ಈ ಅಂಗಳದ ಮೂಲೆಯ ಶೋಭೆಯನ್ನೆಲ್ಲ ಹಾಳುಮಾಡುತ್ತಿದೆ; ಮತ್ತು ಶಯನಾಗಾರದಿಂದ ಹೊರಗೆ ಇಣುಕಿ ನೋಡುವವರಿಗೆ ಮೊದಲು ಈ ಕಾಡು ತುಳಸಿಯೇ ಕಾಣಬೇಕೇ?

ಅದೇನೂ ಇಲ್ಲ. ನಾಳೆಯೆಂದರೆ ನಾಳೆಯೇ ಇದನ್ನು ಕೆಡವಿಬಿಡಿರಿ; ಮತ್ತು ಇದೇ ಸ್ಥಳದಲ್ಲಿ ಇರುಳು ಮಲ್ಲಿಗೆಯನ್ನು ಹಚ್ಚಿರಿ!''

ವ್ಯವಸ್ಥಾಪಕನು ಗೊಂದಲಕ್ಕೀಡಾದನು. ಅದರಿಂದ ಅತನು ಗೊಣಗುಟ್ಟುತ್ತಲೆ:—"ಇದನ್ನು ಕೆಡಹುವ ಮೊದಲು ಮಾಸಾಹೇಬರನ್ನೊಮ್ಮೆ ಕೇಳುವುದು ವಿಹಿತವಲ್ಲವೆ?"

"ನೀವೇನೂ ಕೇಳುವ ಕಾರಣವಿಲ್ಲ. ಏನು ಹೇಳಬೇಕೋ ನಾನದನ್ನವರಿಗೆ ಹೇಳುವೆನು. ಇಂಥ ಚಿಲ್ಲರೆ ಕೆಲಸಗಳಿಗೆಲ್ಲ ಪ್ರಶ್ನೆ-ಪ್ರತಿಪ್ರಶ್ನೆ, ಉತ್ತರ-ಪ್ರತ್ಯುತ್ತರಗಳು ಬೇಕಾದರೆ, ಕೆಲಸವು ತೀವ್ರವೆಂತಾದೀತು? ವಿಲಾಯತಿಯಲ್ಲಿ ಹೀಗಾರೂ ಮಾಡುತ್ತಿರುವದಿಲ್ಲ.''

"ಒಳ್ಳೇದು ಸರಕಾರ!'' ಎಂದು ವ್ಯವಸ್ಥಾಪಕನು ಮೆಲ್ಲನೆ ಹೇಳಿದನು.

ತೋಟದ ಕಾಂಪೌಂಡಿನ ಗೋಡೆಯು ಒಂದು ತುದಿಯಲ್ಲಿ ತುಸ ಬಿದ್ದಂತೆ ಕಂಡಿತು. ಹೆಚ್ಚಿಲ್ಲ. ನಾಲ್ಕೆಂಟು ಕಲ್ಲು ಕಿತ್ತು ಕೆಳಗೆ ಬಿದ್ದಿದ್ದವು. ಅತ್ತ ಕೈ ತೋರಿಸಿ ಚಂದೂಲಾಲನು:—"ಮತ್ತು ಇದೇನು? ಇದನ್ನಾರು ಮಾಡಿದರು?''

"ಯಾರೂ ಮಾಡಿಲ್ಲ ಸರಕಾರ; ಆದರೂ ಹಾಗಾಗಿದೆ."

"ತಿಳಿಯಿತು ನನಗೆ. ಅದೆಂದರೇ ಹೀಗೆ; ಆದರೆ ಆದದ್ದಾದರೂ ಹೇಗಾಯಿತು? ನನ್ನ ಮನೆಯಲ್ಲಿ 'ಆಗು ಹೋಗು'ಗಳಾದರೂ ಎಚ್ಚರಿಕೆಯಿಂದಲೇ ನಡೆಯಬೇಕು, ಬಂಕಟ!''

"ನಿಜ ಸರಕಾರ; ಆದರೆ ಈ ಬೀಳುವಿಕೆಯ ನಿಜವಾದ ಕಾರಣವೆಂದರೆ, ಮನೆಯ ಹಕ್ಕೆಯೊಳಗಿನ ಎತ್ತು ಬಲು ಸೊಕ್ಕಿವೆ. ಇತ್ತಕಡೆಯಿಂದ ಗಾಡಿ ತರುವಾಗ ಈ ಮೂಲೆಯಲ್ಲಿ ಅವು ಬೇಕೆಂತಲೇ ತಟಿದು ಹೋಗುತ್ತವೆ .ಅದರಿಂದಲೇ ಈ ಕಡೆಯ ಮೂಲೆ ತುಸ ಬಿದ್ದಿವೆ. ಇದು ಬಿದ್ದದ್ದು ನನಗೆ ಗೊತ್ತಿದೆ. ಇದನ್ನು ಕಟ್ಟಿಕೊಳ್ಳುವ ಬಗ್ಗೆ ಉಪ್ಪಾರನಿಗೆ ನಿನ್ನೆಯೇ ಹೇಳಿರುತ್ತೇನೆ.''

"ಆದರೆ ಉಪ್ಪಾರನು ಇದನ್ನು ಮತ್ತೆ ಮತ್ತೆ ಎಷ್ಟೆಂದು ಕಟ್ಟುವನು? ಎತ್ತಿಗೆ ಸೊಕ್ಕು ಬಂದಿದ್ದರೆ ಅವುಗಳ ದಾಣಿಯನ್ನು ಕಟ್ಟು ಮಾಡಿಬಿಡಿರಿ!''

"ನಾನು ಹಾಗೆಯೇ ಅಂದಿದ್ದೆನು; ಆದರೆ........''

"ಆದರೆ ಏನು? ಪ್ರತಿಯೊಂದಕ್ಕೂ ಆದರೆ-ಆದರೆ''

"ಆದರೆ ಮಾಸಾಹೇಬರಿಗೆ ಆ ಸುದ್ದಿ ತಿಳಿಯಲು, ಅವರು ಸಿಟ್ಟಿಗೆದ್ದು ಹೇಳಿದರೇನಂದರೆ, 'ಹಕ್ಕೆಯೊಳಗಿನ ದನಗಳೆಲ್ಲ ನನ್ನ ಮಕ್ಕಳಾಗಿವೆ. ಅವುಗಳ ಹೊಟ್ಟೆ ಹೊಡೆಯುವ ಪಾತಕವನ್ನು ಯಾರೂ ಮಾಡಲಾಗದು.' ''

ಚಂದೂಲಾಲನು ನಕ್ಕು:--ಭಲೆ ನಮ್ಮವ್ವಾ, ಮೂಸಾಹೇಬ! ನನಗೆ ಅದೆಷ್ಟೋ ಜನ ಅಣ್ಣ-ತಮ್ಮಂದಿರೂ ಅಕ್ಕ-ತಂಗಿಯರೂ ದೊರೆತರಲ್ಲ! ಯಾಕಂದರೆ ಹಕ್ಕೆಯೊಳಗಿನ ಎಲ್ಲ ಪಶುಗಳು ನನ್ನ ಭ್ರಾತೃಗಳೇ!''

ವ್ಯವಸ್ಥಾಪಕನು ಆಜ್ಞಾಧಾರಕ ಸೇವಕನೇನೋ ಅಹುದು; ಆದರೆ ಮೂಸಾಹೇಬರ ಹಿಂದೆ ಅವರ ಈ ಬಗೆಯ ಕುಚೇಷ್ಟೆ, ಅವರ ಭಾವನೆಗಳ ಬಗ್ಗೆ ಹೀಗೆ ಪಾವಿತ್ರ್ಯವಿಡಂಬನವಾಗುತ್ತಿರುವದು ಆತನಿಗೂ ರುಚಿಸಲಿಲ್ಲ. ಆತನು ಬಾಯಿ ಬಿಗಿಹಿಡಿದುಕೊಂಡೇ ಅಂದನೇನಂದರೆ:—''ಮೂಸಾಹೇಬರು ಅಷ್ಟು ದಯಾಘನರೇ ಆಗಿರುತ್ತಾರೆ. ಹುಳ-ಹುಪ್ಪಡಿಗಳ ಅನ್ನವನ್ನು ಕೂಡ ಅವರಿಂದ ಸೆಳಕೊಳ್ಳಲಾಗುವದಿಲ್ಲ. ಪ್ರತಿಯೊಂದು ಪ್ರಾಣಿಯೂ ತನ್ನ ದೈವಬಲದಿಂದಲೇ ತಿನ್ನುಣ್ಣುವುದೆಂದು ಅವರು ಅನ್ನುತ್ತಿರುತ್ತಾರೆ.''

''ಆದರೆ ಬಂಕಟ, ಯಾವ ದೈವವು ತಿನ್ನುಣ್ಣ ಹಚ್ಚುವದೋ, ಅದೇ ದೈವವೇ ಒಂದಾನೊಂದು ದಿನ ಆ ತಿನ್ನುಣ್ಣುವ ಪ್ರಾಣಿಯನ್ನು ಯಮನ ಬಾಯಿಗೆ ತುತ್ತೆಂದು ಒಯ್ದು ತುರಕೀತೆಂಬದು ಪಾಪ! ಆ ನಮ್ಮ ಮೂಸಾಹೇಬರಿಗೇನು ಗೊತ್ತು? ಹೀಗೆ ಯೋಚಿಸಿರಿ: ಗೋಮಾಂಸದ ಚಟಹತ್ತಿದ್ದ ಯಾವನೊಬ್ಬನು ಈ ಹಕ್ಕೆಯೊಳಗಿನ ಒಳ್ಳೇ ಪುಷ್ಟ ಎತ್ತನ್ನೇ ಕೊಲ್ಲಿಸಿದರೆ?''

ಈ ವಾಕ್ಯವನ್ನು ಕೇಳಿ ವ್ಯವಸ್ಥಾಪಕನು ಹೇಸಿಕೆಯಿಂದ ಗೋಣು ತಿರುಗಿಸಿಕೊಂಡು ಬೇರೆ ಕಡೆಗೆ ನೋಡತೊಡಗಿದನು

ಬಳಿಕ ಚಂದುವೇ ಮತ್ತೆ—''ಆದಿರಲಿ. ಬಂಡಿಯುವನಿಗೂ ಎಚ್ಚರ ಕೊಡಿರಿ. ಈ ಮೂಲೆಯಲ್ಲಿ ಬಂಡಿಯನ್ನು ಸಾವಧಾನದಿಂದ ಬಿಡೆಂದು ಹೇಳಿರಿ. ಈ ಗೋಡೆಯು ಗಾಡಿಯ ಧಕ್ಕೆಯಿಂದ ಮುರಿದುಬಿದ್ದಿತೆಂದರೆ, ಮಗನೇ ಇದನ್ನು ಪುನಃಕಟ್ಟುವ ಖರ್ಚು ನಿನ್ನ ಸಂಬಳದಿಂದ ಕೊಡಲಾಗುವದೆಂದು ಆತನಿಗೆ ಖಂಡಿತವಾಗಿ ತಿಳಿಸಿರಿ ವಿಲಾಯತಿಯಲ್ಲೇನು ಸೊಕ್ಕಿದ ಎತ್ತು ಕುದುರೆಗಳಿರುವದಿಲ್ಲವೋ? ಬಂಡಿಯುವರಿಲ್ಲವೆ? ಆದರೆ ಅಲ್ಲಿ ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಎಚ್ಚರಿಕೆಯಿಂದ ಮೈ ತುಂಬ ಕಣ್ಣಿರಿಸಿಕೊಂಡು ಮಾಡುತ್ತಿರುತ್ತಾರೆ''

ಮುಂದೆ ತೋಟದೊಳಗಿನ ಕೊಯ್ಯದಿದ್ದ ಹುಲ್ಲಿನ ಕಡೆಗೆ ಚಂದೂಲಾಲನ ದೃಷ್ಟಿ ಹೊರಳಿತು. ಆ ಬಗ್ಗೆ ಆತನು ಸಿಟ್ಟು ಬೆಂಕಿಯಾಗಿ 'ಇದೇನರೀ ಮ್ಯಾನೇಜರ? ನೀವು ತೀರ ನಿರುಪಯುಕ್ತರಾಗಿರುತ್ತೀರಿ. ಈ ಹುಲ್ಲು ನಿಮಗೆಂದೂ ಕಾಣಿಸುವುದಿಲ್ಲವೇ! ಕತ್ತರಿಸಿದ ಹುಲ್ಲು ಎಷ್ಟು ಶೋಭಿಸುತ್ತದೆಂಬದು ನಿಮಗೆ ತಿಳಿಯುವುದಿಲ್ಲ! ವಿಲಾಯತಿಯಲ್ಲಿ ಹೀಗೆಂದೂ ಆಗುವುದಿಲ್ಲ. ಮನೆಯ ಒಡೆಯನು ಒಂದು ವೇಳೆ ತನ್ನ ನಿತ್ಯದ ಕ್ಷೌರವನ್ನು ಮರೆತಾನು;

ಆದರೆ ಮನೆಯ ಸುತ್ತಲಿನ ಹುಲ್ಲು ಕತ್ತರಿಸಲಿಕ್ಕೆಂದೂ ಮರೆಯುವುದಿಲ್ಲ.''

ವಿಲಾಯತಿಯೊಳಗಿನ ಆ ರೀತಿಯನ್ನು ಕೇಳಿ ಆ ವ್ಯವಸ್ಥಾಪಕನಿಗೆ ಒಮ್ಮೆಲೆ ನಗೆ ಬಂದಿತು. ಯಾಕಂದರೆ ನಿತ್ಯ ಕ್ಷೌರದ ಪರಿಚಯವು ಅವನಿಗಿರಲಿಲ್ಲ; ಮತ್ತು ನಿತ್ಯಗಟ್ಲೆ ಕ್ಷೌರದ ಆ ಉಪದ್ರವದ ಬಗ್ಗೆ ಅವನು ಮನಸಾ ತಿರಸ್ಕೃತನಾದನು. ಆದರಿಂದ ಆತನು:—'ಇಂದು ಮಾಲಿ ಕನ್ನನಿಗೆ ಈ ಹುಲ್ಲು ಕೊಯ್ಯಲಿಕ್ಕೆ ಹೇಳುತ್ತೇನೆ' ಎಂದಿಷ್ಟೇ ನುಡಿದು ಸುಮ್ಮಗಾದನು.

ಇಷ್ಟರಲ್ಲಿ ಸ್ವತಃ ಮಾಲಿ ಕನ್ನನೇ ಎದುರಾಗಿ ಧಣೇರಿಗೆ ಬೊಗ್ಗಿ ಮುಜುರೆ ಮಾಡಿದನು. ಚಂದೂಲಾಲನ ದೃಷ್ಟಿಯು ಈಗ ಆ ಕಲ್ಲಗೋಡೆಯ ಕಾಂಪೌಂಡಿನ ಹೊರಗಿನ ಕಾದಿಟ್ಟ ಬಹು ದೊಡ್ಡ ತೋಟದ ಕಡೆಗೆ ಹೊರಳಿತು; ಮತ್ತು ಕೈಯಲ್ಲಿ ತುಬಾಕಿಯಿದ್ದುದರಿಂದ ಈತನು ಬೇಗನೆ ಹಿಂದಿರುಗಲಾರನೆಂದು ತಿಳಿದು, ಆ ವ್ಯವಸ್ಥಾಪಕನು ಆತನಿಗೊಮ್ಮೆ ನಮಸ್ಕಾರ ಮಾಡಿದವನೇ ಚಟ್ಟನೆ ಹಿಂದಿರುಗಿ ಅವನ ಕೈಯೊಳಗಿಂದ ಮುಕ್ತನಾದನು. ತಾನು ಇಷ್ಟರಲ್ಲಿಯೇ ಪಾರಾದ ಬಗ್ಗೆ ಅವನಿಗೆ ಸಂತೋಷವೆನಿಸಿತು.

ಚಂದೂಲಾಲ ಮತ್ತು ಮಾಲಿ ಕನ್ನ ಇವರಿಬ್ಬರೂ ಮೆಲ್ಲಮೆಲ್ಲನೆ ಮುಂದುವರಿದರು. ದಾರಿಯಲ್ಲಿ ಹತ್ತಿದ ಪ್ರತಿಯೊಂದು ಗಿಡದ ಟೊಂಗೆಗಳನ್ನು ಚಂದೂಲಾಲನು ತಿರುತಿರುವಿ ನೋಡುತ್ತಿದ್ದನು; ಆದರಂತೆ ಅವುಗಳ ಎಲೆಗಳನ್ನೂ ನಿರೀಕ್ಷಿಸದಿರುತ್ತಿರಲಿಲ್ಲ. ಯಾವುದೊಂದು ಕ್ರಿಮಿಯು ಅವುಗಳ ಮೇಲೆ ಕಂಡಿತೆಂದರೆ, ಅವನು ಅದನ್ನು ಒಮ್ಮೆಲೆ ಕೊಡವಿ ನೆಲಕ್ಕೆ ಕೆಡಹುವನು; ಹಾಗು ಕೂಡಲೆ ತನ್ನ ಬೂಟುಗಳಿಂದ ತುಳಿದು ಅದನ್ನು ನಿರ್ನಾಮಗೊಳಿಸುವನು. ಗಿಡಗಳ ಮೇಲೆ ಕ್ರಿಮಿಗಳು ಕಂಡದ್ದರಿಂದ ಮಾಲಿಯು ತೋಟದ ಕಡೆಗೆ ಆ ದೃಷ್ಟಿಯಿಂದ ನೋಡಿಲ್ಲವೆಂಬದು ಸಹಜವಾಗಿಯೇ ವ್ಯಕ್ತವಾಯಿತು ಒಂದುವೇಳೆ ಹೀಗೆ ಹುಳಗಳನ್ನು ಸಂಹರಿಸುವದು ಆ ಮಾಲಿಗೆ ಯೋಗ್ಯವೂ ಅನಿಸಿರಲಿಕ್ಕಿಲ್ಲ.

ಆದರೆ ಚಂದೂಲಾಲನು ಸುಮ್ಮನಿರುವನೇ? ಅವನು:-''ಕನ್ನಾ, ಕತ್ತೇ, ಪ್ರತಿಯೊಂದು ಗಿಡ-ಮರಗಳಲ್ಲಿಯೂ ಈ ಪರಿ ಹುಳವಾಗಗೊಟ್ಟರೆ ಇವು ಬೆಳೆಯುವ ಬಗೆ ಹೇಗೆ? ಶ್ರಮವಹಿಸಿ ನಾವು ಇವುಗಳಿಗೆ ನೀರು ಹಾಯಿಸಬೇಕು, ಹಣ ಖರ್ಚುಮಾಡಿ ಗೊಬ್ಬರ ಹಾಕಬೇಕು, ಕಷ್ಟಪಟ್ಟು ಕಳೆ ತೆಗೆಯಬೇಕು ಮತ್ತು ಈ ದುಷ್ಟ ಕ್ರಿಮಿಗಳು ಎಲೆಗಳ ಮರೆಗೆ ಕುಳಿತು ಎಳೆ ಎಳೆ ಚಿಗುರುಗಳನ್ನು ತಿನ್ನಬೇಕು. ಇದೆಲ್ಲಿಯ ನ್ಯಾಯ! ಈ ತೋಟಮಾಡುವ ಪದ್ಧತಿಯನ್ನು ನಿನಗಾರು ಕಲಿಸಿದರು? ಈ ಗುಲಾಬೀ ಗಿಡವನ್ನು ನೋಡಿ

ದೆಯಾ? ಅದರಂತೆ ಆ ಅಶೋಕವೃಕ್ಷ-ಲಿಂಬೀಗಿಡಳನ್ನೂ. ಇವುಗಳ ಮೇಲಿನ ಒಂದು ಎಲೆಯನ್ನಾದರೂ ಈ ಕ್ರಿಮಿಗಳುಳಿಸಿರುವವೊ? ಎಲ್ಲ ಚಿಗುರೆಲೆಗಳನ್ನು ತಿಂದು ತಿಂದು ಅವುಗಳ ಝುರಡಿಮಾಡಿಬಿಟ್ಟವೆ! ನಿನಗೆ ಇದೆಲ್ಲ ಹೇಗೆ ತಿಳಿಯುವದಿಲ್ಲ?"

"ಧನಿಯರೇ, ನಿಜ. ಆ ಬಗ್ಗೆ ನನಗೂ ಅಲ್ಪಸ್ವಲ್ಪ ತಿಳಿಯುತ್ತಿದೆ. ನಾನು ದಿನಾಲು ಅವುಗಳನ್ನು ಕೆಡವುತ್ತೇನೆ; ಆದರೆ ಅವು ಮತ್ತೆ ಮತ್ತೆ ಮೇಲೇರುತ್ತವಲ್ಲ!''

"ಮಗನೇ, ಇದೇ ಏನು ನಿನ್ನ ಬುದ್ಧಿವಂತಿಕೆಯು! ಎಲೋ, ಕ್ರಿಮಿಗಳು ಗಿಡದಿಂದ ಕೆಳಗೆ ಬಿದ್ದ ಮೇಲೆ ಅವು ಮೇಲಕ್ಕೇರದಿದ್ದಾವೆಯೇ? ಅವುಗಳನ್ನು ಶೋಧಿಸಿ, ನೆಲಕ್ಕೆ ಕೆಡಹಿ, ಹೀಗೆ ಕಚ್ಚಕಚ್ಚೆಂದು ತುಳಿಯಬೇಕಾಗುತ್ತದೆ. ಸತ್ತ ಕ್ರಿಮಿಗಳಷ್ಟೇ ಮರಳಿ ಗಿಡವೇರಲಾರವು, ತಿಳಿಯಿತೇ?''

ಅದೇ ಕಾಲಕ್ಕೆ ಒಂದು ಮರದ ಮೇಲೊಂದು ಕ್ರಿಮಿ ಕಂಡಿತು ಚಂದುವು ಅದನ್ನು ಕೂಡಲೆ ನೆಲಕ್ಕೆ ಕೆಡಹಿ, ಬೂಟುಗಾಲಿನಿಂದ ತುಳಿದು, ವಸ್ತುಪಾಠದ ಪ್ರಯೋಗವನ್ನು ಆ ಮಾಲಿ ಕನ್ನನಿಗೆ ಮಾಡಿ ತೋರಿಸಿದನು!

ಆ ದೃಶ್ಯವನ್ನು ಕಂಡು ಹೇಸಿಕೆಯಿಂದ ಕನ್ನನು ಮೈನಡುಗಿಸಿ ಮುಖ ಹೊರಳಿಸಿದನು. ಬಳಿಕ ಆತನು:—"ಧನಿಯರೇ, ಈ ಕ್ರಿಮಿಗಳನ್ನು ಹೀಗೆ ತುಳಿದು ಕೊಲ್ಲುವದಕ್ಕಿಂತ, ಇವುಗಳ ನಾಶ ಮಾಡುವ ಬೇರೆ ಯಾವುದೊಂದು ಉಪಾಯ ತಿಳಿಸಲಾರಿರಾ?''

ಆ ಪ್ರಶ್ನೆಯು ಚಂದೂಲಾಲನಿಗೆ ಚಮತ್ಕಾರಿಕವಾಗಿ ತೋರಿತು. ಕೊಲ್ಲದೆ ನಾಶಗೊಳಿಸುವ ಒಗಟ ಬಿಡಿಸುವದು ಬ್ರಹ್ಮನಿಗಾದರೂ ಕಠಿಣವಲ್ಲವೆ? ಆಗ ಚಂದುವು:- "ನಾವು ಹಿಂದು ನಿವಾಸಿಗಳು ಮೂರ್ಖರೇ ಅಲ್ಲವೇ ಕನ್ನಾ?''

"ಧಣೇರ, ಅಹುದು.''

ಎಲ್ಲ ಮೂರ್ಖ ಜನರೊಡನೆ ಮತ್ತು ಅದರಲ್ಲಿಯೂ ತನ್ನ ಮೂರ್ಖ ಧನಿಯೊಡನೆ ತಾನು ಮತ್ತೊಬ್ಬ ಮೂರ್ಖನಾಗುವದು ಕನ್ನನಿಗೆ ಕಠಿಣವೆನಿಸಿರಲಿಕ್ಕಿಲ್ಲ. ಅಂತೆಯೇ ಆತನು ಚಂದೂಲಾಲನ ಪ್ರಶ್ನೆಗೆ ಆ ಕೂಡಲೆ ಸಮ್ಮತಿಯಿತ್ತನು; ಮತ್ತು ನಾವೆಲ್ಲರೂ ಬೇಕಾದರೆ ಮೂರ್ಖರಾದೇವು; ಆದರೆ ಶಕ್ಯವಿದ್ದರೆ ನಮ್ಮ ಒಡೆಯಗೆ ಆ ಸಂಕಟದಿಂದುಳಿಯುವ ಸಂಧಿ ಕೊಡಬೇಕೆಂಬ ಉದಾರ ಬುದ್ಧಿಯಿಂದ ಆತನು: —"ಆದರೆ ಧನಿಯರೇ, ಅದು ಹೇಗೆ? ಈ ಮೂರ್ಖ ಕನ್ನನ ಲಕ್ಷ್ಯದಲ್ಲಿ ಬರಲಿಲ್ಲವಲ್ಲ?''

"ಅಂದರೆ ಹೀಗೆ ನೋಡು: ದಯಾಬುದ್ಧಿ, ಖೊಟ್ಟಿ ಅಹಿಂಸೆ ಇವುಗಳ ಬಗ್ಗೆ ಹೀಗೆ ಗೊಂದಲವೆಬ್ಬಿಸಿ ನಾವು ಈ ಲೋಕದಲ್ಲಿ ನಮ್ಮ ಆರ್ಥಿಕ ಹಾನಿಯನ್ನು ಪರಿಪರಿಯಿಂದ ಮಾಡಿಕೊಳ್ಳುತ್ತೇವೆ. ಪುಕ್ಕಟೆ ಉಣಬಡಿಸಿ ನಾವು ಸಾಧುಗಳನ್ನು ಹೇಗೆ ಪೋಷಿಸುವೆಯೋ; ಮತ್ತು ಇಡೀ ಊರಿಗೆ ಉಪದ್ರವ ಕೊಡುವ ಸಲುವಾಗಿ ನಾವು ಅವರನ್ನು ಗೂಳಿಯಂತೆ ಅಥವಾ ಹಂದಿ-ನಾಯಿಗಳಂತೆ ಹೇಗೆ ಸಡಿಲು ಬಿಡುವೆವೋ, ಅವರಂತೆಯೇ ಈ ಕ್ರಿಮಿಗಳನ್ನು ಕೊಲ್ಲದೆ, ಇವುಗಳನ್ನು ಎಳೆಚಿಗುರಿಗಳಿಂದ ಪುಷ್ಟವಾಗಗೊಟ್ಟು ನಮ್ಮ ತೋಟವನ್ನು ಹಾಳುಗೆಡಹಿಕೊಳ್ಳುತ್ತೇವೆ. ಇದೆಂತಹ ಭೂತದಯೆ! ಯಾವನೊಬ್ಬ ಹಸಿದವನಿಗೆ ನಾಲ್ಕು ಹಣ್ಣುಗಳನ್ನು ಪುಕ್ಕಟೆಯಾಗಿ ತಿನ್ನಲಿಕ್ಕೆ ಕೊಡುವದು ಪರೋಪಕಾರವೆಂಬದು ನನಗೆ ತಿಳಿಯುತ್ತದೆ; ಆದರೆ ಗಿಡಗಳ ಮೇಲಿನ ಕ್ರಿಮಿಗಳನ್ನು ಪೋಷಿಸುವುದೇ? ವಿಲಾಯತಿಯೊಳಗೆ ಬುದ್ಧಿವಂತ ತೋಟಿಗನು ಹೀಗೆಂದೂ ಮಾಡುವುದಿಲ್ಲ; ಮತ್ತು ಕನ್ನಾ, ನಾನು ಆಗಲೆ ಆ ಹುಳ ಕೊಂದ ಕೂಡಲೆ ನೀನು ಹೇಸಿಕೆಯಿಂದ ಅತ್ತ ಮೋರೆ ತಿರುವಿದೆಯಲ್ಲ! ಎಲಾ, ನೀನೆಂದೂ ಕುರಿ ಕೊಯ್ದು ತಿನ್ನುವದಿಲ್ಲವೆ? ತಿನ್ನಲಿಕ್ಕೆಂದಲ್ಲದಿದ್ದರೂ ದೇವರಿಗೆ ಬಲಿಯನ್ನರ್ಪಿಸುವ ಸಲುವಾಗಿಯಾದರೂ ನೀನು ಕೊಲ್ಲುತ್ತಿರಬಹುದಲ್ಲವೆ?"

ತನ್ನ ಚಮತ್ಕಾರಿಕ ವರ್ತನದ ವಿವರಣೆ ಮಾಡುವ ಸುಸಂಧಿ ದೊರೆತದ್ದನ್ನು ಕಂಡು ಕನ್ನನಿಗೆ ವಿಹಿತವೆನಿಸಿತು. ಆತನು ತನ್ನ ಅಂಗಿಯ ಗುಂಡಿಯನ್ನು ಬಿಚ್ಚಿ, ಕೊರಳೊಳಗಿನ ತುಳಸೀ ಮಣಿಗಳ ಮಾಲೆಯನ್ನು ಚಂದೂಲಾಲನಿಗೆ ತೋರಿಸಿ—'ಧನಿಯರೇ, ಈ ತೋಟಿಗನು ಕುರಿ-ಕೋಳಿಗಳನ್ನು ಹೇಗೆ ಕೊಂದಾನು? ಅವುಗಳ ಬಲಿಗಳ ಹೊರತು ದೇವರೇನೂ ಪ್ರಸನ್ನನಾಗುವದಿಲ್ಲವೆ? ಮತ್ತು ಹೊಟ್ಟೆಯ ಕಿಚ್ಚೇನೂ ನೊಂದುವುದಿಲ್ಲವೆ?'

"ಎಲಾ ಮೂರ್ಖಾ, ಮಾಂಸ ತಿನ್ನದ ಹೊರತು ಹೊಟ್ಟೆಯ ಕಿಚ್ಚು ಶಮನವಾಗುತ್ತಿದ್ದರೆ, ಹಿಂದುಸ್ಥಾನದೊಳಗಿನ ಭೋಳೇ ಭಾವಿಕರಾದ ಮಾಲೆ ಧರಿಸುವವರ ಹಾಗು ಹುಚ್ಚ ಬ್ರಾಹ್ಮಣರ ಹೊರತು ಲೋಕದೊಳಗಿನ ಜನರೆಲ್ಲರೂ ಅದೇಕೆ ಪ್ರಾಣಿಗಳನ್ನು ಕೊಂದು ತಿನ್ನುತ್ತಿದ್ದರು?"

ಕನ್ನನು ದಿಟ್ಟತನದಿಂದಲೂ ವಿನೋದದಿಂದಲೂ:—'ಅದಕ್ಕೆ ದುಷ್ಟಟವೆನ್ನದೆ ಇನ್ನೇನೆನಬೇಕು ಧನಿಯರೇ?'

"ಎಲೇ ಮಗನೇ, ಅರ್ಧ ಲೋಕದ ಜನರ ಅಭಿರುಚಿಗೆ ಮಿಕ್ಕ ಅರ್ಧ ಲೋಕದ ಜನರು ದುಷ್ಟಟವೆಂದರೆ ಒಂದು ವೇಳೆ ಒಪ್ಪೀತು. ಆಗ ಆ ಜಾರ ಬಾಯನ್ನು ಯಾರೂ ಹಿಡಿಯಲಾರರು; ಆದರೆ ಇಂದು ಇಡೀ ಜಗತ್ತು

ಮಾಂಸ ಭಕ್ಷಣವನ್ನು ಬಿಟ್ಟುಕೊಟ್ಟು ಧಾನ್ಯವನ್ನೇ ತಿನ್ನುವುದೆಂದು ನಿರ್ಧರಿಸಿ ಹೊಲಗಳ ಮೇಲೆ ಬಂದು ಬಿದ್ದರೂ ಪಾಪ! ಆ ಬಡಭೂಮಿಯಾದರೂ ಏನು ಮಾಡಬೇಕು? ಹೇಳು ನೋಡೋಣ!"

"ಆದರೆ ಧನಿಯರೇ, ಪಶು-ಪಕ್ಷಿಗಳನ್ನು ಕೊಂದು ತಿಂದರೂ, ಆ ಪಶು-ಪಕ್ಷಿಗಳಾದರೂ ಭೂಮಿಯ ಮೇಲೆ ಹುಟ್ಟಿದ್ದ ಹುಲ್ಲು, ಹಣ್ಣು. ಕಾಳುಗಳನ್ನೇ ತಿಂದು ಜೀವಿಸುತ್ತಿರುವವಲ್ಲವೆ?"

ಈ ಪ್ರಶ್ನೆಯ ಉತ್ತರ ಕೊಡಲಿಕ್ಕೆ ಚಂದುವಿಗೆ ತುಸ ಗಡಚೆನಿಸಿತು. ಅದರಿಂದ ಅವನು ಅದನ್ನು ಬಿಟ್ಟು, ಕನ್ನನನ್ನು ನಿರುತ್ತರಗೊಳಿಸುವ ಸಲುವಾಗಿ ಬೇರೆ ಮಾತನ್ನೇ ಎತ್ತಿದನು. "ಆದರೇನೋ ಕನ್ನ, ಸತ್ತ ಗಿಡ ಹಾಗು ಜೀವಂತ ಗಿಡ ಇವುಗಳು ಒಂದೇ ಏನು?"

'ಛೀ! ಛೀ! ಹಾಗೆಂತಾದೀತು ಧನಿಯರೇ?'

"ಒಳ್ಳೇದು. ಸತ್ತ ಗಿಡ ಮರಗಳನ್ನು ಉರುವಲೆಂದು ನೀನು ಸುಡುತ್ತೀ; ಆದರೆ ಜೀವಂತ ಗಿಡಗಳಿಗೆ ಗೊಬ್ಬರ ನೀರುಗಳನ್ನು ಹಾಕುವುದರಿಂದ ಅವು ದೊಡ್ಡವಾಗುತ್ತವೆ. ನಮ್ಮಗಳಿಗೆ ಮಕ್ಕಳು ವಾರಿಗಳಾಗುವಂತೆ ಅವುಗಳಿಗೂ ಹೂ ಕಾಯಿಗಳಾಗವವು. ಹೀಗಿದ್ದರೂ ನೀನು ಪಲ್ಲೆಯನ್ನು ಹೆಚ್ಚಿ ಕುದಿಸಿ ತಿನ್ನುತ್ತೀಯಲ್ಲ! ಹಾಗೆ ಮಾಡುವುದೆಂದರೆ, ಜೀವಿತರನ್ನು ಕೊಂದು ತಿಂದಂತಾಗುವುದಿಲ್ಲವೇ? ನಿನ್ನಂತಹ ಪುಣ್ಯವಂತ ತೋಟಿಗರು ಈ ಕೊಲೆಯನ್ನು ದಿನಾಲು ಮಾಡಬಹುದೇನು?"

ಕನ್ನನು ಈಗ ಉತ್ತರಕೊಡದೆ ಸುಮ್ಮನಿರಬೇಕಾಯಿತು; ಆದರೂ ಆತನು:—"ಧನಿಯರೇ, ಏನೂ ತಿನ್ನದೆ ಜೀವಿಸಿರುವುದಾದರೆ, ನಾನು ಅದನ್ನೂ ಮಾಡಲಿಕ್ಕಿಲ್ಲ; ಅಂದರೆ ಕಾಯಿ-ಪಲ್ಲೆಯನ್ನು ಕೂಡ ತಿನ್ನಲಿಕ್ಕಿಲ್ಲ."

"ಹೀಗೆಯೋ? ಒಟ್ಟಿನಲ್ಲಿ ನಾವು ಜೀವಿಸಿರುವುದಾದರೆ, ಬೇರೆಯವರ ಕೊಲೆಗೆಯ್ಯಲಡ್ಡಿಯಿಲ್ಲವಷ್ಟೆ? ಒಳಿತಾಯಿತು. ನಿನ್ನ ಬಾಯಿಂದಲೇ ನಿಜ ಸಂಗತಿ ಹೊರಬಿದ್ದಿತು."

ಆಕ್ಸಫರ್ಡಿನ ಎಂ. ಎ. ಮತ್ತು ಬ್ಯಾರಿಸ್ಟರನಾಗಿದ್ದ ಚಂದೂಲಾಲನೇನ್ಲಾದರೂ ಆ ಮಾಲೀ ಕನ್ನನಿಗೆ ಬೊಗ್ಗುವನೇ?

ಆ ವಾದದಲ್ಲಿ ಜಯ ದೊರಕಿಸಿದ ಬಳಿಕ ಚಂದೂಲಾಲನು ಅದನ್ನು ಸಾಕು ಮಾಡಿದನು. ಬಳಿಕ ತುಸ ನಕ್ಕು, ಆ ವಿಜಯವನ್ನು ತೋರ್ಪಡಿಸಿ ಅಲ್ಲಿಂದ ಮುಂದೆ ಸಾಗಿದನು. ಆಗ ಯಾವುದಾದರೂ ಬೇಟೆ ದೊರೆಯುವದೋ ಹೇಗೆಂಬದರ ಕಡೆಗೇ ಆತನ ದೃಷ್ಟಿಯಿತ್ತು; ಮೊದಲು ಆತನ

ದೃಷ್ಟಿಯು ನೆಲದ ಮೇಲೆಯೇ ಇತ್ತು; ಯಾವುದೊಂದು ಮೊಲವು ದಾರಿ ತಪ್ಪಿ ಬಂದು ಸಿಕ್ಕೀತೆಂದು ನೋಡಿದನು; ಆದರೆ ಕೆಲ ವೇಳೆಯಲ್ಲಿ ಅದು ನಿರಾಶೆಯಾಗಲು, ಆತನು ದೊಡ್ಡ ದೊಡ್ಡ ಮರಗಳ ಕಡೆಗೆ ನೋಡುತ್ತ ನಡೆದನು. ಕೂಡಲೆ ಒಂದು ದೂರದ ಮರದ ಮೇಲೆ ಕೆಲವು ಪಕ್ಷಿಗಳು ಕಂಡವು; ಆದರೆ ಚಂದೂಲಾಲನು ತುಬಾಕಿ ಎತ್ತಿ ಹಿಡಿದು ಮುಂದಕ್ಕೆ ಹೋಗುವಷ್ಟರೊಳಗೆ ಅವು ಅಲ್ಲಿಂದ ಭುರ್ರೆಂದು ಹಾರಿಹೋದವು.

ಕೆಲಹೊತ್ತಿನ ಮೇಲೆ ಮತ್ತೊಂದು ಗಿಡದ ಕಡೆಗೆ ಚಂದೂಲಾಲನ ದೃಷ್ಟಿವೇಧಿಸಿತು. ಆದರ ತುದಿಯಲ್ಲಿ ಒಂದು ನೆಲವು ತೂಗಗಟ್ಟಲ್ಪಟ್ಟಿದ್ದು, ಅದರಲ್ಲಿ ಸುಟ್ಟ ಮಣ್ಣಿನ ಎರಡು ಹರಿವಾಣಗಳೂ ಇದ್ದವು. ಒಂದು ನೀರಿನಿಂದ ತುಂಬಿದ್ದು, ಇನ್ನೊಂದರಲ್ಲಿ ಕಾಳು ಇರಿಸಲ್ಪಟ್ಟಿದ್ದವು. ಅವುಗಳ ಹತ್ತರವೇ ಎರಡು ಕಪೋತಗಳು ಜೊತೆಯಾಗಿ ಕುಳಿತು, ತಮ್ಮ ಚುಂಚುಗಳಿಂದ ಪರಸ್ಪರರ ಪುಚ್ಛಗಳನ್ನು ಸ್ವಚ್ಛಮಾಡುತ್ತಿದ್ದವು. ನಡುನಡುವೆ ಅವು ತಮ್ಮ ಚುಂಚುಗಳನ್ನು ಒಂದಕ್ಕೊಂದು ತಿಕ್ಕುತ್ತಿದ್ದವು; ಒಂದರ ಸುತ್ತೊಂದು ಪ್ರದಕ್ಷಿಣೆ ಹಾಕುತ್ತಿದ್ದವು. ಗೋಣು ಹೊರಹೊರಳಿಸಿ ಒಂದನ್ನೊಂದು ನೋಡುತ್ತಿದ್ದವು; ಮತ್ತು ಆನಂದದಿಂದ ಗುಂಯಿಗುಟ್ಟುವ ಧ್ವನಿಯನ್ನು ಮಾಡುತ್ತಿದ್ದವು.

ಆ ದೃಶ್ಯವನ್ನು ಕಂಡೊಡನೆಯೇ ಚಂದೂಲಾಲನು ಸಂತಸಗೊಂಡು ಅಲ್ಲಿಯೇ ನಿಂತುಬಿಟ್ಟನು. ಆದನ್ನು ಕಂಡು ಕನ್ನನ ಹೊಟ್ಟೆಯು ಉರಿಯ ಹತ್ತಿತು.

ತಮ್ಮ ಗಿಡದ ಸಮೀಪಕ್ಕೆ ಆ ಎರಡು ಜನರು ಬಂದದ್ದನ್ನು ನೋಡಿದರೂ ಕೂಡ ಆ ಎರಡು ಹಕ್ಕಿಗಳೂ ಬೆದರಲಿಲ್ಲ; ಅಥವಾ ಗಾಬರಿಗೊಳ್ಳಲಿಲ್ಲ. ಅವು ಅವರನ್ನು ನೋಡಿಯೂ ನೋಡಿದಂತೆ ಮಾಡಿ ತಮ್ಮ ಕ್ರೀಡೆಗಳಲ್ಲಿಯೇ ಮಗ್ನವಾದವು.

ಚಂದೂಲಾಲನು ಸಪ್ಪಳವಾಗದಂತೆ ತುಬಾಕಿಯನ್ನು ಎತ್ತಿ ಹಿಡಿದು ಮುಂದಕ್ಕೆ ಚಾಚಿದನು. ಆದನ್ನು ಕಂಡೊಡನೆಯೇ ಕನ್ನನು ತುಸ ಮುಂದರಿದು ಹೋಗಿ ಮೆಲ್ಲನೆ ಮತ್ತು ಕಕ್ಕುಲಾತಿಯಿಂದ-“ಧನಿಯರೇ, ಬೇಡ-ಬೇಡ. ಏನಾದರೂ ಈ ಕೆಲಸ ಮಾಡಬೇಡಿರಿ. ನಾನು ಬಡವನು. ನನ್ನಿಂದ ಪುಣ್ಯಕಾರ್ಯವೇನಾಗಬೇಕು? ಅಂತೆಯೇ ಆ ನೆಲುವನ್ನು ನಾನೇ ಈ ಗಿಡಕ್ಕೆ ತೂಗಗಟ್ಟಿದ್ದೇನೆ. ಆ ಮುಚ್ಚಳದಲ್ಲಿ ನಾನೇ ನನ್ನ ಮನೆಯಿಂದ ಕಾಳು-ಕಡಿ ತಂದು ಹಾಕುತ್ತಿರುತ್ತೇನೆ; ಮತ್ತು ಬಾವಿಯ ತಾಜಾ ನೀರನ್ನು ದಿನಾಲು ಸುರುವಿಡು

ತ್ತೇನೆ. ಯಾವವಾದರೂ ಹಾರುವ ಹಕ್ಕಿಗಳು ಅಲ್ಲಿಗೆ ಬಂದು ಕ್ಷಣಕಾಲ ವಿಶ್ರಮಿಸಿ, ನಾಲ್ಕು ಕಾಳುತಿಂದದ್ದನ್ನೂ ಗುಟುಕು ನೀರು ಕುಡಿದದ್ದನ್ನೂ ನೋಡಿದರೆ ಧನಿಯರೇ, ನನಗೆ ಸಮಾಧಾನವಾಗುತ್ತದೆ. ತಾವು ಅವುಗಳ ಮೇಲೆಯಷ್ಟೇ ಅಲ್ಲ, ನನ್ನ ಮೇಲೂ ದಯೆದೋರಿರಿ; ಮತ್ತು ಅವುಗಳ ಕೊಲೆಗೆಯ್ಯಬೇಡಿರಿ. ನಾನು ನಿಮಗೆ ನಮಸ್ಕರಿಸುತ್ತೇನೆ.''

ಎಂದಂದು, ಕನ್ನನು ಕಣ್ಣಲ್ಲಿ ನೀರು ತಂದು ನಿಜವಾಗಿಯೂ ಚಂದೂಲಾಲನ ಪಾದಗಳನ್ನು ಹಿಡಿದುಕೊಂಡನು; ಆದರೆ ಸಿಟ್ಟಿನ ಆವೇಶದಿಂದ ಚಂದೂಲಾಲನು ಅವನನ್ನು ಒದೆದು, ಒತ್ತಟ್ಟಿಗೆ ಸರಿಸಿ—''ನಡೆ ಮೂರ್ಖಾ, ದೂರಾಗು. ಒಳ್ಳೇ ಪುಣ್ಯವಂತ ಮಾಲಾಧಾರಿಯಿವನು!'' ಎಂದು ಸಿಟ್ಟುಮಾಡಿ ತುಬಾಕಿಯ ಕೀಲವನ್ನೊತ್ತಿದನು. ಒಳ್ಳೇ ನಿಪುಣ ಗುರಿ ಹೊಡೆಯುವವನವನು! ಆತನ ಗುರಿ ತಪ್ಪೀತೇಕೆ? ತುಬಾಕಿಯೊಳಗಿನ ಛರಿಗಳೂ ತಮ್ಮ ಕರ್ತವ್ಯವನ್ನು ಚೆನ್ನಾಗಿ ಈಡೇರಿಸಿದವು. ತುಬಾಕಿಯ ಸಪ್ಪಳದೊಡನೆ ಆ ಜೋಡಿಯೊಳಗಿನ ಒಂದು ಹಕ್ಕಿಯು ಸತ್ತು ಕಲ್ಲಿನಂತೆ ನೆಲಕ್ಕೆ ಬಿತ್ತು; ಹಾಗು ಮತ್ತೊಂದು ಹಕ್ಕಿಯು ಆಕ್ರೋಶಮಾಡುತ್ತ, ಅವರಿಬ್ಬರ ಮತ್ತು ಆ ಗಿಡದ ಸುತ್ತಲೂ ಚಕ್ರಾಕಾರವಾಗಿ ಗಿರಕಿ ಹೊಡೆಯಹತ್ತಿತು. ಅದು ನಡುನಡುವೆ ಕೆಳಗಿಳಿದು ಆ ಸತ್ತ ಹಕ್ಕಿಯನ್ನು ತನ್ನ ಕೊಕ್ಕಿನಿಂದ ಮುಟ್ಟುತ್ತಿತ್ತು; ಮತ್ತು ಕೂಡಲೆ ಮೇಲಕ್ಕೆ ಹಾರುತ್ತಿತ್ತು! ಹೀಗೆ ನಾಲ್ಕಾರು ಸಾರೆ ಗಿರಕಿ ಹೊಡೆದ ಬಳಿಕ ಅದೂ ಹತಬಲವಾಗಿ, ತನ್ನ ಜೊತೆಗಾರ ಪಕ್ಷಿಯ ಹತ್ತರ ಬಂದು ಬಿದ್ದಿತು. ಅವೆರಡೂ ಹಕ್ಕಿಗಳ ಪುಚ್ಛಗಳು ಹರವಲ್ಪಟ್ಟಿದ್ದು, ಅವುಗಳ ಮೈಯೊಳಗಿಂದ ನೆತ್ತರವು ತಟಗುಟ್ಟುತ್ತಿತ್ತು!

---

ಯೋಗಾಯೋಗದ ಬೀಜಮಂತ್ರ

ತೋಟಗರ ಕನ್ನನು ಗಕ್ಕನೆ ನೆಲಕ್ಕೆ ಕುಳಿತನು. ಮೊಣಕಾಲಲ್ಲಿ ಗೋಣಿರಿಸಿಕೊಂಡು ಆತನು ಬಿಕ್ಕಿ ಬಿಕ್ಕಿ ಅಳಹತ್ತಿದನು. ಹಣೆ ಹಣೆ ಬಡಕೊಳ್ಳತೊಡಗಿದನು.

ಚಂದೂಲಾಲನು ತುಬಾಕಿ ಕೆಳಗಿಟ್ಟನು; ಹಾಗು ಮುಂದೆ ಹೋಗಿ ಬೊಗ್ಗಿ, ಇನ್ನು ಆ ಪಕ್ಷಿಗಳಿಗೆ ಕೈ ಹಚ್ಚತಕ್ಕವನು; ಇಷ್ಟರಲ್ಲಿ ನಾಲ್ಕಾರು ಮೊಳಗಳ ದೂರದಿಂದ ಯಾರೋ ಸಿಟ್ಟಿನಿಂದ ಅವನನ್ನು ಕುರಿತು:—"ಹಾ ಅಧಮಾ! ಹಾ ಚಾಂಡಾಲಾ! ನೀನಿದೇನು ಮಾಡಿದೆ? ಎಂಥ ಪಾಪಕ್ಕೆ ಗುರಿಯಾದೆ?" ಎಂದು ಒದರಿ ಕೇಳಿದಂತಾಯಿತು.

ಆ ಮರದಾಚೆಯಿಂದ ಒಂದು ಕಾಲುದಾರಿ ಬಿದ್ದಿದ್ದು, ಅದು ನಂತ ಭುವನದ ಆ ತೋಟದೊಳಗಿಂದ ಹೋಗುತ್ತಿದ್ದರಿಂದ, ಖಾಸಗಿಯಾಗಿದ್ದರೂ ಕೆಲ ಜನರು ಅದನ್ನು ತಮ್ಮ ಅಡಚಣಿಗಾಗಿ ಉಪಯೋಗಿಸುತ್ತಿದ್ದರು; ಅದರಿಂದ ಆ ದಾರಿಯ ಬಗ್ಗೆ ತೀರ ಮನಾಯಿ ಇರಲಿಲ್ಲ. ಅಪರಿಚಿತರಿಗಂತೂ ಅದು ಸಾರ್ವಜನಿಕ ದಾರಿಯೇ ಎಂದು ತೋರುತ್ತಿತ್ತು. ಆ ಕಾಲಕ್ಕೆ ಆ ದಾರಿಯಿಂದ ಅಂಥ ಎರಡು ಅಪರಿಚಿತ ವ್ಯಕ್ತಿಗಳು ಬರುತ್ತಿರಲು, ಅವರು ಆ ದಾರಿಯ ಮೂಲೆಯನ್ನು ದಾಟಲಿಕ್ಕೂ ಚಂದೂಲಾಲನ ತುಬಾಕಿ ಹಾರಲಿಕ್ಕೂ ಗಂಟೇ ಬಿದ್ದಿತು!

ಅವರಿಬ್ಬರಲ್ಲಿ ಒಬ್ಬನು ಪ್ರೌಢನೂ ದಿನ ಹೋದವನೂ ಆಗಿದ್ದು, ಕೊಂಚ ಸ್ಥೂಲ ದೇಹದವನಾಗಿದ್ದನು. ಆತನ ಗಡ್ಡದೊಳಗಿನ ಅರ್ಧಕ್ಕಿಂತ ಹೆಚ್ಚು ಕೂದಲುಗಳು ಹಣ್ಣಾಗಿದ್ದವು. ಮೈಮೇಲೆ ಹುಲಿಚರ್ಮದ ತುಂಡು, ಒಂದು ಕೈಯಲ್ಲಿ ಕೋಲು, ಇನ್ನೊಂದು ಕೈಯಲ್ಲಿ ಕಮಂಡಲು, ಬೆನ್ನ ಮೇಲೆ ಹಾಸಿಗೆಯಂತಹದೊಂದು ಉದ್ದನ್ನ ಸುರುಳಿ, ಕಾಲಲ್ಲಿ ತೆಳುವಾದ ಕಟ್ಟಿಗೆಯ ಅವುಗೆ. ಹೀಗೆ ಆತನು ಬೈರಾಗೀ ವೃತ್ತಿಯ ಠೀವಿಯುವನಾಗಿದ್ದನು ಇನ್ನೊಬ್ಬನ ಠೀವು ಹೇಳುವುದೆಂದರೆ-ಅದು ಆ ಮೊದಲನೇ ಮನುಷ್ಯನ ಕೇವಲ ಪ್ರತಿಕೃತಿಯೇ ಆಗಿತ್ತೆಂದು ಹೇಳಿದರೆ ಸಾಕಾದೀತು. ಅವನಿಗೆ ಅನುವರ್ತನ ಮಾಡಲಿಕ್ಕೆ ತೀರ ಬಾರದ ಸಂಗತಿಗಳೆಂದರೆ, ವಯೋಮಾನ ಹಾಗು ಶರೀರದ ಸ್ಥೂಲತ್ವ. ಯಾಕಂದರೆ, ಆತನಿನ್ನೂ ಮೂವತ್ತರೊಳಗಿನ ತರುಣನಿದ್ದು, ಆತನ ದೇಹವು ಹುರಿಕಟ್ಟಿನದಾದ್ದರಿಂದ ಕೊಬ್ಬಿರಲಿಲ್ಲ. ತನ್ನ ಗಡ್ಡದ ಕೂದಲುಗಳ ಬಣ್ಣವು ಮೊದಲಿನವನಂತಾಗಬೇಕೆಂದು ಆತನು ಅವುಗಳಿಗೆ ಆಗಾಗ್ಗೆ ಬೂದಿಯ ಕೈಯನ್ನು ಸವರಿದ್ದನು; ಮತ್ತು 'ಹಾ ಅಧಮಾ, ಹಾ ಚಾಂಡಾಲಾ' ಮುಂತಾದ ಯಾವ ಶಬ್ದಗಳನ್ನು ಆ ವೃದ್ಧ ಬೈರಾಗಿಯು ಸಿಟ್ಟಿನಿಂದ ಅಂದನೋ, ಕೂಡಲೆ ಈ ತರುಣ ಬೈರಾಗಿಯೂ ಅದೇ ಶಬ್ದಗಳನ್ನು ಅಷ್ಟೇ ಸಿಟ್ಟಿನ ದನಿಯಿಂದ, ಅದೇ ಪದ್ಧತಿಯಿಂದ ಉಚ್ಚರಿಸಿದನು.

ಅವರಿಬ್ಬರಲ್ಲಿ ಹಿರಿಯನಾದವನು ಗುರುವು; ಕಿರಿಯನು ಶಿಷ್ಯನು.

"ಹಾ ಚಂಡಾಲಾ!" ಮೊದಲಾದ ತೀವ್ರನಿಷೇಧದ ಸಿಟ್ಟಿನಿಂದ ಗಟ್ಟಿಗಟ್ಟಿಯಾಗಿ ಉಚ್ಚರಿಸಿದ ಶಬ್ದಗಳು ಅಕಲ್ಪಿತವಾಗಿ ಕಿವಿಗೆ ಬಿದ್ದೊಡನೆ ಚಂದೂಲಾಲನು ಮೆಟ್ಟಿಬಿದ್ದನು. ನೆಲದಮೇಲೆ ಬಿದ್ದಿದ್ದ ಹಕ್ಕಿಗಳನ್ನು ಎತ್ತಿಕೊಳ್ಳಲು ಮುಂದುಮಾಡಿದ್ದ ಕೈಗಳು ಆತನಿಗೆ ಗೊತ್ತಾಗದಂತೆ ಹಿಂದೆ ಹೋದವು. ಕೂಡಲೆ ಅವುಗಳನ್ನು ಟೊಂಕದ ಮೇಲಿರಿಸಿಕೊಂಡು ಆ ಬೈರಾಗಿ ಜೊತೆಯ

ಕಡೆಗೆ ಕುತೂಹಲದಿಂದ, ಆದರೆ ತುಚ್ಛತಾಪೂರ್ವಕವಾಗಿ ನೋಡುತ್ತ ಸೆಟೆದು ನಿಂತನು. ಆತನು ಒಮ್ಮೆಲೆ ಮೆಟ್ಟಿಬಿದ್ದಿದ್ದರೂ, ಪರಕ್ಷಣದಲ್ಲಿಯೇ ಆತನ ಮನಸ್ಸಿನಲ್ಲಿ ಕ್ರೋಧದ ಊರ್ಮಿಯುಂಟಾಗಲು, ಅವನ ಪ್ರತೀಕಾರ ಬುದ್ಧಿಯು ಜಾಗೃತವಾಯಿತು.

ಹಿರಿಯ ಬೈರಾಗಿಯು ನೆಲಕ್ಕೆ ಕುಳಿತು ಆಸನಹಾಕಿದನು. ನೆಲದಮೇಲೆ ಬಿದ್ದಿದ್ದ ಒಂದು ಹಕ್ಕಿಯನ್ನು ತನ್ನದೊಂದು ತೊಡೆಯ ಮೇಲೂ, ಇನ್ನೊಂದು ಹಕ್ಕಿಯನ್ನು ಇನ್ನೊಂದು ತೊಡೆಯ ಮೇಲೂ ಇಟ್ಟುಕೊಂಡನು. ಮೊಟ್ಟಮೊದಲು ತನ್ನ ಕಮಂಡಲುದೊಳಗಿನ ನೀರನ್ನು ತನ್ನ ಕೈಮೇಲೆ ಸುರುವಿಕೊಂಡು, ಒಂದು ಎಲೆಯ ಸುರಳಿಯಿಂದ ಅದನ್ನು ಆ ಎರಡೂ ಪಕ್ಷಿಗಳ ಚುಂಚಿನೊಳಗಿಂದ ಅವುಗಳ ಗಂಟಲಲಲ್ಲಿ ಹಾಕಲಿಕ್ಕೆ ಪ್ರಯತ್ನಿಸಿದನು. ಅದು ಸ್ವಲ್ಪಮಟ್ಟಿಗೆ ಸಾಧಿಸಿತು; ಆದರೆ ಅದರಿಂದ ಒಂದೇ ಹಕ್ಕಿಯು ಜೀವದಿಂದಿದ್ದ ಚಲನವಲನ ಮಾಡಿತು. ಇನ್ನೊಂದು ತೀರ ಗೋಣು ಚೆಲ್ಲಿಕೊಟ್ಟುಬಿಟ್ಟಿತು; ಯಾಕಂದರೆ, ಅದರ ದೇಹದೊಳಗಿನ ಪ್ರಾಣವೇ ಹಾರಿಹೋಗಿತ್ತು!

ಆ ಎರಡೂ ಹಕ್ಕಿಗಳ ಮೈಮೇಲೆ ಕೈಯಾಡುತ್ತಿರುವಾಗ ಆ ಬೈರಾಗಿಯು ಬಲ ಅಂಗೈಗೆ ಎಷ್ಟೋ ನೆತ್ತರವು ಹತ್ತಿತ್ತು; ಆದರೆ ಅವನು ಅದನ್ನೊರಿಸಿಕೊಳ್ಳುವ ಪ್ರಯತ್ನ ಮಾಡಲಿಲ್ಲ. ಅವನು ತನ್ನ ಗೋಣನ್ನೆತ್ತಿ ಚಂದೂಲಾಲನನ್ನುದ್ದೇಶಿಸಿ ಮಾತಾಡಲು ಪ್ರಾರಂಭಿಸಿದನು. ಈಗ ಆತನ ಸಿಟ್ಟಿನ ದನಿಯು ಮೊದಲಿಗಿಂತಲೂ ತುಸ ಕುಗ್ಗಿತ್ತು; ಆದರೂ ನಿಷೇಧದ ತೀವ್ರತೆ ಇಲ್ಲವೆ ಆದರ ತೀಕ್ಷ್ಣತೆಯು ಲುಪ್ತವಾಗಿರಲಿಲ್ಲ:“ಬೇಟಾ! ನಿನಗೂ ನನಗೂ ಪರಿಚಯವಿಲ್ಲ. ನಾನು ನಿನಗೇನು ಹೇಳಬೇಕು? ನೀನಿದೇನು ಮಾಡಿದೆ? ಪಾಪ! ಈ ನಿರಪರಾಧ ಪ್ರಾಣಿಗಳನ್ನು ವ್ಯರ್ಥವಾಗಿ ನೀನೇಕೆ ಕೊಂದೆ? ಮತ್ತು ಇಂಥ ಘೋರ ಪಾಪಕ್ಕೇಕೆ ಹೊಣೆಯಾದೆ? ನೋಡು-ನೋಡು, ಈ ಮುದ್ದು ಪಕ್ಷಿಬಾಲಕಗಳನ್ನು! ಇವು ಗಂಡು ಹೆಣ್ಣು ಜೊತೆಯಾಗಿ, ಈ ಮರದ ಮೇಲೆ ಸುಖದಿಂದ ಕ್ರೀಡಿಸುತ್ತಿರಲು, ಇವುಗಳ ಆನಂದ ದುಚ್ಛೇದಗೊಳಿಸಲಿಕ್ಕೆ ನಿನಗೇನು ಅಧಿಕಾರವಿತ್ತು?”

ಎಂದಂದು ಆ ಬೈರಾಗಿಯು ಅಳಹತ್ತಿದನು. ವೃದ್ಧಾಪ್ಯದ ಮೂಲಕ ಅವನ ಕಣ್ಣುಗಳಿಂದ ಒಂದು ವೇಳೆ ಅಶ್ರು ಬಂದಿರಲಿಕ್ಕಿಲ್ಲ; ಆದರೂ ಆತನ ಅಳುವು ನಿಲ್ಲಲೊಲ್ಲದು; ಮತ್ತು ಗುರುವು ಅಳಹತ್ತಿದ್ದನ್ನು ಕಂಡು ಆ ಶಿಷ್ಯನೂ ಅದೇ ದನಿಯಲ್ಲಿ ಅಳಹತ್ತಿದನು. ಗುರುವು ಒಮ್ಮೊಮ್ಮೆ ಬಿಕ್ಕಿ ಅಳಹತ್ತಿದರೆ. ಶಿಷ್ಯನು ಆಗಾಗ್ಗೆ ಬಿಕ್ಕಿ ಬಿಕ್ಕಿ .ಅಳತೊಡಗಿದನು!

ಚಂದೂಲಾಲನು ಏನೂ ಮಾತಾಡಲಿಲ್ಲ. ಆತನು ಸುಮ್ಮನೆ ನಿಂತು ಕೇಳಿಕೊಳ್ಳುತ್ತಿದ್ದನು. ಗುರುವಿನ ತೀವ್ರ ಭಾವನಾಪ್ರದರ್ಶನದಿಂದ ಅವನ ಮನಸ್ಸಿನ ಮೇಲೆ ಒಂದಿಷ್ಟು ಗಂಭೀರ ಪರಿಣಾಮುವಾಯಿತು; ಆದರೆ ಶಿಷ್ಯನು ಸಿಟ್ಟಿನಿಂದ ತನ್ನನ್ನು ದುರು-ದುರು ಎಂದು ನೋಡಲಿಕ್ಕೂ ಅಳಲಿಕ್ಕೂ ಹತ್ತಿ, ಗುರುವಿನ ಕೇವಲ ನಕಲು ಮಾಡಿದ್ದನ್ನು ಕಂಡು, ಚಂದುವಿಗೆ ಕೊಂಚ ನಗುವೇ ಬಂತು; ಹಾಗು ಅದರಿಂದ ಆತನ ಮನೋವೃತ್ತಿಯು ಸ್ವಲ್ಪ ಭಿನ್ನವೂ ಆಯಿತು. ಹರಿಯುವ ನೀರು ನಡುವಿನ ಪ್ರತಿಬಂಧದ ಮೂಲಕ ಹಿಂದಿರುಗುವ ಹಾಗೆಯೇ ಆತನ ಸ್ಥಿತಿಯಾಯಿತು. ನಿಷೇಧದ ಮೊದಲನೇ ಮಟ್ಟಿನಲ್ಲಿ ಆ ಬೈರಾಗಿಗೆ ಪ್ರತ್ಯುತ್ತರ ಕೊಡಬೇಕೆಂದು ಚಂದುವಿಗನಿಸಲಿಲ್ಲ; ಆದರೆ ಈಗ ಮಾತ್ರ ಪ್ರತ್ಯುತ್ತರ ಕೊಡಲಿಕ್ಕೆ ಆತನ ಮನಸ್ಸು ಸಿದ್ಧವಾಗ ತೊಡಗಿತು.

ಆ ಪ್ರೌಢ ಬೈರಾಗಿಯು ಆ ಪಕ್ಷಿಗಳ ಮೈ ಮೇಲೆ ಮಮತೆಯಿಂದ ಮತ್ತೆ ಕೈಯಾಡಿಸಹತ್ತಿದನು; ಮತ್ತು ಚಂದುವನ್ನು ಕುರಿತು:—“ಬೇಟಾ, ನಿನ್ನ ಸುರೂಪವ ನೋಡಿ ಮನಸ್ಸು ಮೋಹಗೊಳ್ಳುತ್ತದೆ; ಆದರೆ ನಿನ್ನೀ ದುರಾಚರಣೆಯನ್ನು ಕಂಡು ಅಷ್ಟೇ ತಿರಸ್ಕಾರವೆನಿಸುತ್ತದೆ.”

ಸಣ್ಣ ಇರುವೆ ಕಡಿದರೆ ಎಷ್ಟು ವೇದನೆಯಾಗುವುದೋ, ಈ ನುಡಿಯನ್ನು ಕೇಳಿ ಚಂದುವಿಗೆ ಅಷ್ಟು ಸಿಟ್ಟು ಬಂದಿತು. ಅದರಿಂದ ಅವನು:— “ಆದರೇನಿರೋ ಬೈರಾಗಿಗಳೇ, ಈ ಖಾಸ ತೋಟದೊಳಗಿನ ಖಾಸಗೀ ದಾರಿಯಲ್ಲಿ ಯಾರಿಗೆ ಕೇಳಿ ಬಂದಿರೆಂಬದನ್ನು ನೀವು ಮೊದಲು ಹೇಳಿರಿ.”

“ಅದು ನಮ್ಮ ತಪ್ಪಾಗಿರಬಹುದು ನಾವು ಪರಕೀಯರಾಗಿದ್ದು, ಈಗಲೆ ಈ ಊರಿಗೆ ಬಂದಿದ್ದೇವೆ. ನಾವು ಭದ್ರೇಶ್ವರದ ಯಾತ್ರೆಗೆ ಹೊರಟಿರುತ್ತೇವೆ. ಇಂದಿನ ಮುಕ್ಕಾಮಿಗೆ ಯಾವ ಸ್ಥಳವು ಯೋಗ್ಯವಾದೀತೋ ಎಂಬದನ್ನು ನೋಡುತ್ತ ನಡೆದಿದ್ದೆವು. ನಮ್ಮ ಅತಿಕ್ರಮಣದ ಬಗ್ಗೆ ನೀನು ನಮಗೇನು ಶಿಕ್ಷೆ ಮಾಡಬೇಕೆಂದಿರುವೆಯೋ ಅದನ್ನು ಮಾಡು; ಆದರೆ ಬೇಟಾ! ನೀನು ಈ ಪಾಪಕ್ಕೇಕೆ ಹೊಣೆಯಾದೆ?” ಎಂದಂದು ಆತನೂ ಆತನ ಶಿಷ್ಯನೂ ಮತ್ತೆ ಅಳತೊಡಗಿದರು.

“ಶಿಕ್ಷೆಯಿರಲಿ; ಆದರೇನರಿ ಬೈರಾಗಿಗಳೇ, ನನ್ನ ಸ್ಥಳದಲ್ಲಿ ಅನಧಿಕಾರದಿಂದ ಪ್ರವೇಶಿಸಿ, ಮೇಲೆ ನನ್ನನ್ನೇ ನಿಷೇಧಿಸುವ ನೀವಿದೇನು ನಾಟಕ ನಡಿಸಿರುತ್ತೀರೆಂದು ನಾನೇ ನಿಮ್ಮನ್ನು ಕೇಳುತ್ತೇನೆ. ನೀವು ಯಾರು? ನಾನಾರು? ನನ್ನ ನಿಮ್ಮಗಳಿಗೇನು ಸಂಬಂಧ? ನೀವು ಹೀಗೆ ಸಿಟ್ಟಾಗಿ ನನ್ನನ್ನು

ದೂರಲಿಕ್ಕೆ ಕಾರಣವೇನು? ಮತ್ತು ನಾನು ಅದನ್ನು ಸಹಿಸಿಕೊಳ್ಳಬೇಕೇಕೆ? ನನ್ನ ಸ್ವಂತದ ತೋಟದಲ್ಲಿ ಸ್ವಚ್ಛಂದದಿಂದ ನಾನೀ ಹಕ್ಕಿಗಳನ್ನು ಕೊಂದೆನು; ಮತ್ತು ನನಗೆ ಮತ್ತೆ ಕೊಲ್ಲಬೇಕೆಂದೆನಿಸಿದರೆ, ಪುನಃ ಕೊಂದೇನು. ಇದರಲ್ಲಿ ನಿಮ್ಮಪ್ಪನ ಗಂಟೇನು ಹೋಯಿತು? ಈ ಮಾತಿನಲ್ಲಿ ನಿಮಗೆ ಬಾಯಿ ಹಾಕಲು ಆದಾರು ಹೇಳಿದರು? ಮತ್ತು, ನಿಮ್ಮ ಈ ಚಿಕ್ಕ ಜೊತೆಗಾರನಂತೂ ಹೇಗೆ ಇರಿಕುಳ ಎಮ್ಮೆಗೊಡ್ಡಿನಂತೆ ಕೆಕ್ಕರಿಸಿ ನೋಡುತ್ತಾನಲ್ಲ! ಈತನ ಈ ದೃಷ್ಟಿಕ್ಷೇಪದಲ್ಲಿ ಇವನು ತನ್ನ ಪುಣ್ಯದ ಬಲದಿಂದ ನನ್ನನ್ನು ನರಕದ ಹೊದರಿನಲ್ಲಿ ತುರಕುವನೋ; ಅಥವಾ ಯಮಪುರಿಯ ಕಾದ ಕಡಾವಿಗೆಯಲ್ಲಿ ನೂಕುವನೋ ಎಂದೆನಿಸುತ್ತದೆ; ಆದರೆ ಬಚ್ಚ್ಯಾಜೀ! ನಿನ್ನ ಈ ಚೇಷ್ಟೆಯು ನನ್ನೆದುರಿಗೆ ನಡೆಯಲಾರದೆಂದು ಖಂಡಿತವಾಗಿ ತಿಳಿ. ಈ ಹಕ್ಕಿಗಳ ವಕೀಲಿ ವಹಿಸಲಿಕ್ಕೆ ನಿಮಗದಾರು ಅಧಿಕಾರವಿತ್ತರು?'

'ಬೇಟಾ! ದೇವರ ಪ್ರಾಣಿಯು ಲೋಕದ ಆಸ್ತಿಯಾಗಿದೆ. ಅದರ ಅಪಹರಣ ಇಲ್ಲವೆ ಅದರ ಮೇಲಾಗುವ ಅತ್ಯಾಚಾರ ಇವುಗಳನ್ನು ತಡೆಯುವ ಸ್ವತಂತ್ರ ಅಧಿಕಾರವನ್ನು ದೇವರು ಪ್ರತಿಯೊಬ್ಬನಿಗೂ ಕೊಟ್ಟಿರುತ್ತಾನೆ.'

"ಹಾಗಾದರೆ ತೀರಿತು. ನಿಮ್ಮ ಬಾಯಿಂದಲೇ ನಿರ್ಣಯವಾದಂತಾಯಿತು. ನಾನು ಈ ಹಕ್ಕಿಗಳನ್ನು ಕೊಂದದ್ದು ಈ ಲೋಕದ ಆಸ್ತಿಯನ್ನು ಹರಣ ಮಾಡಿದಂತಾಗಲಿಲ್ಲ; ಅಥವಾ ಅದರ ಮೇಲೆ ಅತ್ಯಾಚಾರವೂ ಅಲ್ಲ" ಎಂದಂದು, ಇದುವರೆಗೆ ಬೇಟೆಗಾರನಾಗಿದ್ದ ಚಂದೂಲಾಲನು ಈಗ ಬ್ಯಾರಿಸ್ಟರನಾಗಿ ಹೇಳಹತ್ತಿದನು:"ಯಾಕಂದರೆ, ಲೋಕದ್ದೆಂದು ಹೇಳಲಾಗುವ ಯಾವುದೊಂದು ಆಸ್ತಿಯ ಮೇಲೆ ಒಬ್ಬನ ಸ್ವಾಮಿತ್ವವು ಎಷ್ಟರಮಟ್ಟಿಗಿರುವುದೋ, ಅಷ್ಟೇ ಇನ್ನೊಬ್ಬನಿಗೂ ಇರುವುದಲ್ಲವೆ? ಅದಿರಲಿ. ಬೈರಾಗಿಗಳೇ, ನಿಮಗೆ ಹಿಂದೂ ಧರ್ಮದ ತತ್ವಗಳು ತಿಳಿಯುತ್ತಿದ್ದರೆ ಆ ರೀತಿಯಿಂದಲೂ ನಿಮಗೆ ಹೇಳುವುದೇನಂದರೆ, ನಾನು ಜಾತಿಯಿಂದ ಕ್ಷತ್ರಿಯನಿದ್ದೇನೆ; ಬ್ರಾಹ್ಮಣನಲ್ಲ. ಅಂದಬಳಿಕ ನೀವು ಯಾರೇ ಇರಲೊಲ್ಲಿರೇಕೆ, ನನಗೆ ಬೇಟೆಯಾಡುವ ಹಕ್ಕು ಇದೆ; ಮತ್ತು ಬೇಟೆಮಾಡಿಕೊಂಡ ಪ್ರಾಣಿ ತಿನ್ನುವ ಹಕ್ಕೂ ಇದೆ ಎಂಬದನ್ನು ಬೇರೆ ತಿಳಿಸುವ ಅಗತ್ಯವಿಲ್ಲ!"

"ಅಹಹ! ಅಹಹ! ಕ್ಷತ್ರಿಯಧರ್ಮದ ಎಂಥ ದೊಡ್ಡಿಸ್ತಿಕೆಯಿದು!" ಎಂದಂದು, ಆ ಗುರುವು ಒಂದು ಯುಕ್ತಿವಾದವ ಹೇಳಹತ್ತಿದನು:"ತರುಣಾ, ಕ್ಷತ್ರಿಯಧರ್ಮದ ಖೊಟ್ಟೆನೆವಹೇಳಿ ನೀನು ಈ ಕ್ರೂರ ಹಿಂಸೆಯ ಸಮರ್ಥನ ಮಾಡಿದ ಬಗ್ಗೆ ನಿನಗೆ ನಾಚಿಕೆಯೆನಿಸಬೇಕು. ಎಲೋ ತಮ್ಮಾ, ನಿರಪರಾಧ

ಹಕ್ಕಿಗಳನ್ನು ಕೊಲ್ಲುವದೂ ತಿನ್ನುವದೂ ಇಷ್ಟಕ್ಕಾಗಿಯೇ ಈಗ ಕ್ಷತ್ರಿಯ ಧರ್ಮ ಉಳಿದಂತೆ ತೋರುತ್ತದೆ! ನೀನು ಕ್ಷತ್ರಿಯನೆನಿಸಿಕೊಳ್ಳುತ್ತಿದ್ದರೆ, ಈ ದೇಶವನ್ನು ಈಗ ಯಾರು ಆಳುತ್ತಾರೆಂಬ ಬಗ್ಗೆ ನೀನೆಂದಾದರೂ ಯೋಚಿಸಿರುವೆಯಾ? ಈಗಿನ ರಾಜರು ಕ್ಷತ್ರಿಯರೋ ವೈಶ್ಯರೋ? ನಮ್ಮವರೋ ಪರಕೀಯರೋ? ಸ್ವಧರ್ಮೀಯರೋ ಪರಧರ್ಮೀಯರೋ? ನಮ್ಮ ದೇಶವು ಇಂದು ಪರಕೀಯರ ದಾಸ್ಯದಲ್ಲಿದೆ; ಮತ್ತು ಅದರೊಳಗಿಂದ ಸ್ವದೇಶವನ್ನು ಬಿಡಿಸಿದರೆ, ನಾವು ಕ್ಷತ್ರಿಯರೆಂದು ಜೀವಿಸಿರಲಿಕ್ಕೆ ಯೋಗ್ಯವೆಂಬ ವಿಚಾರವು ನಿನ್ನೀ ಹರೆಯದ ಉತ್ಸಾಹೀ ಮನಸ್ಸಿನಲ್ಲಿ ಎಂದಾದರೂ ಬಂದಿದೆಯೇ? ಆದರೆ ನಾನಿದನ್ನು ಕೇಳುವದಾದರೂ ಏಕೆ ಹಾಗು ಯಾರನ್ನು? ನಿನ್ನೀ ಅಂತರ್ಬಾಹ್ಯ ವಿಲಾಯತೀ ಠೀವು ನೋಡಿಯೇ ನಿನ್ನ ಕ್ಷತ್ರೀಯತ್ವದ ನಿಜವಾದ ಬೆಲೆಯು ನನಗೆ ಗೊತ್ತಾಗಿದೆ. ಕ್ಷತ್ರಿಯಕುಲದ ಅಭಿಮಾನವನ್ನು ಯಾರಿಗೆ ಯಥಾರ್ಥವಾಗಿ ಕಾಯಲಿಕ್ಕೆ ಬರುವದಿಲ್ಲವೋ, ಅವರು ದುಷ್ಕೃತ್ಯಗಳ ಸಮರ್ಥನಕ್ಕಾದರೂ ಆ ಉಜ್ವಲ ಕುಲ ಮತ್ತು ಕುಲಧರ್ಮ ಇವುಗಳನ್ನುಲ್ಲೇಖಿಸಬಾರದು. ಅಹಹ! ಎಂಥ ನಿರಪರಾಧ ಬಡಹಕ್ಕಿಗಳಿವು! ಇವುಗಳನ್ನು ಕೊಂದ ಆ ನಿನ್ನ ತುಬಾಕಿಯನ್ನು ದೇವರು ಮುರಿದೇಕೆ ಚೆಲ್ಲಲಿಲ್ಲ? ಮತ್ತು ಅದನ್ನುಪಯೋಗಿಸುವ ನಿನ್ನೀ ಕೈಗಳ ಮೇಲೆಯೇ ಆತನು ಅಘಾತ ಮಾಡಿ, ಅವುಗಳನ್ನು ಕಡಿದೇಕೆ ಚೆಲ್ಲಲಿಲ್ಲ! ಆದರೆ ತರುಣಾ, ಎಚ್ಚರ! ಪಾಪಿ ತರುಣಾ, ಬಲು ಎಚ್ಚರ! ಪಾಪದ ಪ್ರಾಯಶ್ಚಿತ್ತವನ್ನು ದೇವರು ಇಂದಿಲ್ಲದಿದ್ದರೂ ನಾಳೆಗೆ, ಒಂದಿಲ್ಲೊಂದು ರೀತಿಯಿಂದ ನಿನಗೆ ಕೊಡದಿರಲಾರನು. ಇಂದಿನ ದಿನ, ಈಗಿನ ವೇಳೆ ಇವುಗಳನ್ನು ನೀನು ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೋ!'ಎಂದು ಯಾವುದೊಂದು ನಾಟಕದೊಳಗಿನ ಅಭಿನಯಪಟುವು ಪಾಠಮಾಡಿದ್ದ ಭಾಷಣವನ್ನನ್ನುವಂತೆ ಆ ಬೈರಾಗಿಯು ಆ ಮಾತನ್ನು ಕೊಂಚವೂ ತಡವರಿಸದೆ, ಖಣ್ಣ ಖಣ್ಣೆಂದು ನುಡಿದನು.

ಈಗ ಚಂದೂಲಾಲನ ಸಿಟ್ಟು ಅನಿವಾರವಾಯಿತು. ಅದರಿಂದ ಅವನು: "ಈ ಹಕ್ಕಿಗಳಿಗೆ ನಿರುಪದ್ರವಿಗಳೆಂದೆನ್ನುವ ಬೈರಾಗೀ, ನಿನ್ನಲ್ಲಿಯ ಲೌಕಿಕ ಜ್ಞಾನವು ತಿಳಿದಂತಾಯಿತು. ಈ ಹಕ್ಕಿಗಳು ನೋಡಲಿಕ್ಕೆನೋ ಒಳ್ಳೇ ಸಾತ್ವಿಕ, ನಿರಪರಾಧ ಪ್ರಾಣಿಗಳೆಂದು ತೋರುವವು; ಆದರೆ ಇವು ತಮ್ಮ ಉದರನಿರ್ವಾಹವನ್ನು ಹೇಗೆ ಸಾಗಿಸುತ್ತವೆಂಬದು ನಿನಗೆ ಹೊಳೆಯದಿರುವದನ್ನು ಕಂಡು ನನಗೆ ಕಸಿಕರವುಂಟಾಗುತ್ತದೆ. ಈ ಕಪೋತ ಪಕ್ಷಿಗಳೇನೂ ಶಾಕಾಹಾರಿಗಳಲ್ಲ. ಹುಳ-ಹುಪ್ಪಡಿಗಳನ್ನು ಕಂಡೊಡನೆಯೇ ಇವು ಅವುಗಳ

ಮೇಲೆ ಒಮ್ಮೆಲೆ ನುಗ್ಗುವವು. ಇವುಗಳ ಆ ನುಗ್ಗಾಟದ ಮುಂದೆ ನನ್ನ ತುಬಾಕಿಯ ಗುಂಡು ಕೂಡ ಏನೂ ಅಲ್ಲ. ಆ ಹುಳ-ಹುಪ್ಪಡಿಗಳ ಬಗ್ಗೆ ಹಳಹಳಿಸುವ ಯಾವನೊಬ್ಬ ನಿನ್ನಂತಹ ನಾಟಕಪಟು ಬೈರಾಗಿಯು ದೊರೆಯುವದಿಲ್ಲವಷ್ಟೆ; ಮತ್ತು ತಿನ್ನಲಿಕ್ಕೆ ಸಾಕಷ್ಟು ಹುಳ-ಹುಪ್ಪಡಿಗಳು ಸಿಗದಿದ್ದಾಗ ಘಟಿಸಬಹುದಾದ ಉಪವಾಸದ ಪಾರಣಿಗೆಂದು ಈ ಮೂರ್ಖ ಮಾಲಿ ಕನ್ನನು ಮರದ ತುದಿಯಲ್ಲಿ ನೆಲವು ಕಟ್ಟಿ, ಅದರಲ್ಲಿ ಕಾಳು-ನೀರುಗಳ ಈ ಪರಿಮಾಣಗಳನ್ನಿರಿಸಿ, ಅವುಗಳ ವ್ಯವಸ್ಥೆ ಮಾಡಿಟ್ಟಿರುವನು! ಭಲಿರೆ ಹಕ್ಕಿಗಳೇ! ಸಾಧಿಸಿದರೆ ಮಾಂಸಾಹಾರ, ಇಲ್ಲದಿದ್ದರೆ ಶಾಕಾಹಾರ! ಎರಡೂ ಬಗೆಯ ತಕ್ಕ ವ್ಯವಸ್ಥೆಯು ನಿಮಗಿದೆ. ಭೂತದಯೆಯು, ಹಿಂಸೆ-ಅಹಿಂಸೆಯು ಕಲ್ಪಿತ ಕಲ್ಪನೆಗಳಿಂದ ಹುಚ್ಚಾದ ನಿಮ್ಮಂಥ ಮಬ್ಬು ಜನರಿಗೆ ಹೀಗೆ ಆಳುವದಕ್ಕಿಂತ ಇನ್ನೇನು ತಿಳಿಯಬೇಕು? ಮತ್ತು ಸೊಕ್ಕಿನ ಬೈರಾಗಿ, ನೀನು ನನಗೆ ಶಾಪದ ಅಂಜಿಕೆ ದೋರಿ, ನನ್ನನ್ನು ಬೆದರಿಸಬೇಕೆಂದಿರುವೆಯಾ? ಅದೇನೋ 'ಪಾಪಿ ತರುಣಾ, ಎಚ್ಚರ! ದೇವರು ನಿನ್ನ ಪಾಪದ ಪ್ರಾಯಶ್ಚಿತ್ತವನ್ನು ಇಂದಿಲ್ಲದಿದ್ದರೆ ನಾಳೆಗೆ, ಒಂದಿಲ್ಲೊಂದು ಬಗೆಯಿಂದ ಕೊಡದಿರಲಿಕ್ಕಿಲ್ಲ' ಎಂದೆಯಲ್ಲವೆ? ಒಳ್ಳೇದು. ನಾನು ನಿನ್ನೀ ಶಾಪವಾಣಿಯ ಮತ್ತು ನಿನ್ನ ಶಾಪದ ಸಾಮರ್ಥ್ಯದ ಪರೀಕ್ಷೆಯನ್ನೇ ಮಾಡುತ್ತೇನೆ. ನಿಮ್ಮಂಥ ಬೈರಾಗಿಗಳಿಗೆ ಮೈತುಂಬ ಬೂದಿ ಬಡಕೊಂಡೆವೆಂದರೆ, ನಾವು ದೇವರ ಬಿಟ್ಟಿಯ ಪೋಲೀಸರೂ ನ್ಯಾಯಾಧೀಶರೂ ಆದೆವೆಂದೆನಿಸುತ್ತಿದ್ದೀತು. ನೀವೆಲ್ಲರೂ ದೇವರ ಮನೆಯ ಆನರರಿ ಮ್ಯಾಜಿಸ್ಟ್ರೇಟರೇ ಅಲ್ಲವೆ! ಏಳಿರಿ, ಇಲ್ಲಿಂದ ಹೊರಟು ಹೋಗಿರಿ ನೋಡೋಣ! ದಯೆಯ ಹಾಗು ಕರುಣೆಯ ನಿಮ್ಮೀ ನಾಟಕವು ಹೇಸಿಗಿಟ್ಟಿತು. ನನಗಿದಿನ್ನು ರುಚಿಸಲಾರದು. ನೀವು ಈ ಹೊಲಸು ನಾಟಕವನ್ನು ಮತ್ತೆ ನಟಿಸಿದರೆ, ನಾಟಕಗೃಹದೊಳಗಿನ ಪ್ರೇಕ್ಷಕರು ಬಿಸುಟುವ ಕೊಳೆತ ಬದನೀಕಾಯಿಗಳ ಪೆಟ್ಟು ತಿನ್ನುವಂತೆ, ಹೊಡೆತ ತಿಂದೀರಿ."

ಈ ಮಾತು ಕೇಳಿ ಆ ಬೈರಾಗಿಯೆದ್ದನು. ಆತನ ಊರ್ಮಿಯು ತುಸ ಕುಗ್ಗಿತು. ಅದರಿಂದ ಅವನು—"ಅವಿವೇಕಿ ತರುಣಾ! ನಾನು ನುಡಿದದ್ದು ಭವಿಷ್ಯವೆಂದಲ್ಲ; ಶಾಪವೆಂದೂ ಅಲ್ಲ. ಭವಿಷ್ಯ ವರ್ತಿಸುವ ಜ್ಞಾನವಿರಲಿಕ್ಕೆ ನಾನು ಜ್ಯೋತಿಷಿಯೇನೂ ಅಲ್ಲ; ಅಥವಾ ಲೋಕದೊಳಗಿನ ಆಗು-ಹೋಗುಗಳನ್ನು ತನ್ನಿಚ್ಛೆಯಿಂದ ಮಾಡಿ, ದುಷ್ಟರ ಶಾಸನ ಸುಷ್ಟರ ಪಾಲನಗೊಳಿಸುವ ತನ್ನ ಸಾಮರ್ಥ್ಯದ ಅಂಶವನ್ನೇನೂ ದೇವರು ನನಗೆ ಕೊಟ್ಟಿರುವುದಿಲ್ಲ.

ನಾನು ನಿನಗೆ ಶಪಿಸಿರುವುದಿಲ್ಲ. ಯಾಕಂದರೆ ಶಾಪಕೊಡುವುದಾದರೂ
ದುಷ್ಟಬುದ್ಧಿಯ ಪ್ರದರ್ಶನವೇ ಆಗಿದೆ; ಅಲ್ಲದೆ ಶಾಪವಿತ್ತು ಅಹಿತವೆಸಗುವ
ದಕ್ಕೆ ನಾನು ಹಿಂಸೆಯೆಂದು ತಿಳಿಯುತ್ತೇನೆ. ನನ್ನ ಅಹಿಂಸೆಯ ವ್ರತಕ್ಕೆ
ಅದು ಕುಪಥ್ಯವೇ ಆಗಿದೆ. ದೇವನು ನಿನ್ನನ್ನು ನೋಡಿಕೊಳ್ಳುವನೆಂದು ನಾನಂ
ದದ್ದರ ಅರ್ಥವಿಷ್ಟೇ, ಈಶ್ವರನ ರಾಜ್ಯದಲ್ಲಿ ನ್ಯಾಯವೇ ಪ್ರಭಾವಿಯಾಗುವ
ದೆಂದು ನನ್ನ ದೃಢ ನಂಬಿಗೆಯಿದೆ. ಇರಲಿ. ಇಗೋ, ನಾನಿನ್ನು ನನ್ನ
ದಾರಿ ಹಿಡಿದು ಹೊರಟೆನು ''

ಎಂದೆಂದು, ಎದ್ದೇಳುವಾಗ ಅವನು ತನ್ನ ತೊಡೆಯ ಮೇಲಿನ ಹಕ್ಕಿಗಳ
ಮೈಮೇಲೆ ಮತ್ತೆ ಪ್ರೇಮದಿಂದ ಕೈಯನಾಡಿಸಿದನು; ಮತ್ತು ಹಾಗೆ ಮಾಡು
ವಾಗ ಆತನಿಗೆ ಮತ್ತೆ ಅಳುವು ಬಂದಿತು. ಆಗ ಆತನು:—"ನಾನು ಹೋಗು
ವೆನು; ಆದರೆ ನನಗಿಷ್ಟು ಭಿಕ್ಷೆಯನ್ನಾದರೂ ನೀಡುವೆಯಾ? ಈ ಕಪೋತ
ಪಕ್ಷಿಗಳನ್ನು ಸಂಗಡ ಒಯ್ಯಬೇಕೆಂದು ನನ್ನ ಮನಸ್ಸು ನನಗೆ ಆದೇಶಗೆಯ್ಯು
ತ್ತಿದೆ. ಅದರಿಂದ ನೀನು ಇವುಗಳನ್ನು ಸಂಗಡ ಒಯ್ಯುವ ಅನುಜ್ಞೆಯನ್ನು
ನನಗೆ ದಯಪಾಲಿಸುವೆಯಾ? ನಿನ್ನ ಬೇಟೆಯು ಹಾಗು ನಿನ್ನ ತೋಟದೊಳಗೆ
ಬಿದ್ದಿದ್ದವೆಂದು ಇವು ನಿನ್ನ ಹಕ್ಕಿನವೇ ಆಗಿವೆ; ಆದರೆ ಭಿಕ್ಷೆ ನೀಡಲಿಕ್ಕೆ ಹಕ್ಕಿನ
ವಸ್ತುಗಳೇ ಹೆಚ್ಚು ಉಚಿತವಿರುತ್ತವೆ.''

ಗುರುಗಳು ಕೇಳಿದ ಭಿಕ್ಷೆಯನ್ನು ಉಡಲಲ್ಲಿ ಚೆಲ್ಲಿಸಿಕೊಳ್ಳಲಿಕ್ಕೆ ಮರಿ
ಯು ಕೂಡಲೆ ಮುಂದಾಯಿತು. ಅವನ್ನು ಕಂಡು ಚಂದೂಲಾಲನು:—
"ಒಳ್ಳೇದು. ನಿಮ್ಮ ಅಂಬೋಣವಿಷ್ಟೇ ಇದ್ದರೆ ನಾನದನ್ನು ಮನ್ನಿಸುತ್ತೇನೆ.
ಈ ನಿಮ್ಮ ಮರಿಯ ಮೋರೆಯನ್ನು ನೋಡಿದರೆ, ಕುಚ್ಚಲಿಕ್ಕೆ ಸಮೀಪದಲ್ಲಿ
ಲ್ಲಾದರೂ ಬೆಂಕಿ ದೊರೆತರೆ ಇವನು ಇವುಗಳನ್ನು ಈಗಲೆ ಬೆಯ್ಯಿಸಿ ಹೊಟ್ಟೆ
ತುಂಬ ತಿನ್ನಬೇಕೆಂದಿರುವವನ ಹಾಗೆ ತೋರುತ್ತದೆ; ಆದರೆ ಬೈರಾಗೀ, ನಿನ್ನ
ಸ್ವಂತದ ದಯೆಯ ಮತ್ತು ಅಹಿಂಸೆಯ ಬಗ್ಗೆ ಸಂಪೂರ್ಣ ಸುಳ್ಳು ನಾಟಕ
ವೆನಿಸುವದಿಲ್ಲ. ನಿನ್ನ ತತ್ವಜ್ಞಾನವು ತಪ್ಪಿನದಿದ್ದರೂ, ಭಾವನೆಯು ಪ್ರಾಮಾ
ಣಿಕವೆಂದು ತೋರುತ್ತದೆ. ಒಳ್ಳೇದು. ಈ ಹಕ್ಕಿಗಳನ್ನು ತೆಗೆದುಕೊಂಡು
ಹೋಗು. ಇವುಗಳನ್ನೇನು ಬೇಕಾದರೂ ಮಾಡು. ನಾನು ಇವುಗಳನ್ನು
ನಿಮಗೆ ಸಂತೋಷದಿಂದ ಕೊಟ್ಟಿರುತ್ತೇನೆ ಬೇಟೆಗಾರನು ಪಶು-ಪಕ್ಷಿಗಳನ್ನು
ತಾನೇ ತಿನ್ನಬೇಕೆಂದು ಕೊಲ್ಲುವುದಿಲ್ಲ. ಮೃಗಯಾದ ಸುಖವನ್ನನುಭವಿಸ
ಲಿಕ್ಕೆಂದು ಹೊಡೆಯುತ್ತಾನೆ; ಮತ್ತು ಈಗಲೆ ನಿಮಗೆ ಕಟ್ಟಪ್ಪಣೆಗೆಯ್ಯುವೆನೇ
ನೆಂದರೆ, ನೀವು ಈ ಖಾಸ ತೋಟದೊಳಗಿನ ಕಾಲುದಾರಿಯಿಂದ ಇನ್ನೆಂದೂ

ಬರಬೇಡಿರಿ. ಈ ತೋಟವು ಕಾದಿಟ್ಟದ್ದಿದೆ. ಬೇಕಾದವರು ಬಂದು ನನ್ನ ದಾರಿ ಕಟ್ಟುವುದು ನನಗೆ ಸೇರುವುದಿಲ್ಲ. ಕಾಲೇ ಮುರಿದುಬಿಟ್ಟೇನು! ನಿಮ್ಮ ದರ್ಶನವು ಪುನಃ ಆಗದಿದ್ದರೂ ಅಡ್ಡಿಯಿಲ್ಲ."

ಮರಿಬೈರಾಗಿಯು ಎರಡೂ ಹಕ್ಕಿಗಳನ್ನೆತ್ತಿಕೊಂಡು ಒಂದನ್ನು ತನ್ನ ಕೈಯಲ್ಲಿ ಹಿಡಿದು, ಇನ್ನೊಂದನ್ನು ಗುರುವಿನ ಕೈಗೆ ಕೊಟ್ಟನು. ಅಲ್ಲಿಟ್ಟಿದ್ದ ತಮ್ಮ ಕಮಂಡಲುವನ್ನೆತ್ತಿಕೊಂಡ ಬಳಿಕ ಅವರಿಬ್ಬರೂ ಅದೇ ಕಾಲದಾರಿಯಿಂದ ಮುಂದೆ ನಡೆದರು ಮರಿಯು ಆಗಾಗ್ಗೆ ಹೊರಳಿ, ಸಿಟ್ಟನಿಂದ ಚಂದೂಲಾಲನನ್ನು ನೋಡುತ್ತಿದ್ದನು.

---

ಬೈರಾಗಿಯ ಫಜೀತಿ

ಮುಂದೆ ಹತ್ತು ನಿಮಿಷಗಳಿಗೆ ಚಂದೂಲಾಲನು ತೋಟದಿಂದ ವಾಡೆಗೆ ಬಂದನು ಬೇಟೆಯಲ್ಲಿ ಕೊಂದ ಪಕ್ಷಿಗಳನ್ನು ಬೇಡಲಿಕ್ಕೆ ಆ ಇಬ್ಬರು ಬೈರಾಗಿಗಳು ಬಾರದಿದ್ದರೆ ಅವುಗಳನ್ನು ಹಿಡಿದುಕೊಂಡೇ ಆತನು ಮನೆಯಲ್ಲಿ ಪ್ರವೇಶಿಸುತ್ತಿದ್ದನು; ಆದರೆ ಹೊರಗೆ ಹೋದ ಮನುಷ್ಯನು ಕೈ ಅಲ್ಲಾಡಿಸುತ್ತ ಬರುವುದಕ್ಕಿಂತ ಕೈಯಲ್ಲೇನಾದರೂ ಹಿಡಿದುಕೊಂಡು ಹಿದಿರುಗುವುದು ಸುಖಸಮಾಧಾನದ ಸಂಗತಿಯಾಗಿರುತ್ತದೆ. ಅದರಂತೆ ಮನೆಗೆ ಬರುವಾಗ ಚಂದುವು ಜಾಜಿಯ ಮತ್ತು ಗುಲಾಬಿಯ ಹಲವು ಹೂಗಳನ್ನು ಎತ್ತಿ, ತನ್ನ ಕರವಸ್ತ್ರದಲ್ಲಿ ಕಟ್ಟಿಕೊಂಡು ಅವುಗಳ ಸುಗಂಧ ಪಡೆಯುತ್ತಾ, ಬಾಯಿಂದ ಇಂಗ್ಲಿಷ ಗೀತವನ್ನು ಗುಣುಗುಟ್ಟುತ್ತ, ಸಿಳ್ಳು ಹಾಕುತ್ತ ಮೆಲ್ಲಮೆಲ್ಲನೆ ಬಂದನು.

ಮನೆಗೆ ಬರುವಷ್ಟರಲ್ಲಿ ಆತನ ಹಲವು ಮಂದಿ ಗೆಳೆಯರು ಅವನ ಮಾರ್ಗನಿರೀಕ್ಷಿಸುತ್ತ ಕುಳಿತಿದ್ದರು. ಚಂದೂನ ಐ. ಸಿ. ಎಸ್. ಪರೀಕ್ಷೆ ಪಾಸಾಗುವದು ಎಲ್ಲರ ಖಾತ್ರಿಯಿದ್ದದರಿಂದ, ವಿಲಾಯತಿಯಿಂದ ತಂತಿ ಬರುವ ಅಂದಾಜಿನ ಮೇರೆಗೆ ಆ ಜನರು ಒಂದೆರಡು ದಿನಗಳಿಂದ ನಂದಭುವನದ ಕಡೆಗೆ ಎಡತಾಕಹತ್ತಿದ್ದರು. ಗಳಿಗೆ ಬಟ್ಟಲವನ್ನು ಗಂಗಾಳದಲ್ಲಿ ಮುಣುಗ ಹಾಕಿದಾಗ, ಅದು ಯಾವಾಗ ಮುಣುಗುವದೋ ಎಂಬದನ್ನು ಒಂದೇಸವನೆ ನೋಡುತ್ತ ಕುಳಿತಿದ್ದ ಜೋಯಿಸನಂತೆ ಅಥವಾ ಕೈಯಲ್ಲಿ ಮಂಗಳಾಕ್ಷತೆಗಳನ್ನು ಹಿಡಿದು ಅವುಗಳನ್ನು ವಧುವರರ ಮೇಲೆ ಚೆಲ್ಲಲು ಉತ್ಸುಕರಾಗಿದ್ದ ಲಗ್ನಮಂಟಪಸ್ಥ ಸಭಾಸದರಂತೆ ಇಲ್ಲವೆ ಅಂತಃಪಟವು ಬದಿಗಾದೊಡನೆಯೋ ಕಾಳಿಗೆ ಮುದ್ದು ಕೊಟ್ಟು, ಲಗ್ನವಾದಬಗ್ಗೆ ವರದಿ ಕೊಡುವದಕ್ಕೆ ಕಾದು ಕುಳಿತಿದ್ದ ಕಾಳಿಯವನಂತೆ ಚಂದೂನ ಸ್ನೇಹಿತರು ಆತುರರಾಗಿದ್ದರು. ತಾವು ರಿಝುಲ್ಟಿನ ಬಗೆ

ಕೇಳಹೋಗಬೇಕು; ಹಾಗು ತಾವಲ್ಲಿರುವಾಗಲೇ ಆತನ ಪಾಸಾದ ತಂತಿ ಬರ ಬೇಕು; ಮತ್ತು ಆ ಸರತಿಯು ಕೇವಲ ರಿಝಲ್ಟ ಕೇಳಲಿಕ್ಕೇ ಹೋದಂತಾಗದೆ ಅಭಿನಂದನದ್ದೂ ಆಗಬೇಕು, ಎಂದು ಅವರೆಲ್ಲರ ಮನದಿಚ್ಛೆಯಿದ್ದಿತು; ಆದರೆ ಅವರಾದರೂ ಏನು ಮಾಡುವರು? ಪರೀಕ್ಷೆಯ ರಿಝಲ್ಟು ಆಯಿತು ವಿಲಾಯತಿ ಯಲ್ಲಿ ಪಬ್ಲಿಕ್ ಸರ್ವ್ಹಿಸ ಕಮೀಶನರರ ಕೈಯಲ್ಲಿ ಆ ಶುಭಕಾರ್ಯದ ಮೊದ ಲನೇ ಚಪ್ಪಾಳೆ ಹೊಡೆಯುವದು ಅಥವಾ ಕಾಳಿಗೆ ಮುದ್ದುಕೊಡುವದು ಆ ಕಮಿಶನರರ ಅಧೀನವಾಗಿತ್ತು. ಅಂತೆಯೇ ಆ ಸ್ನೇಹಿತರ ಕೈಯಲ್ಲಿ ಈಗ ಉಳಿ ದದ್ದೇನಂದರೆ, ತಮ್ಮ ಸದಿಚ್ಛೆಯ ಬಲದಿಂದ ಹಾಸ್ಯ ವಿನೋದ ಗೈದು, ಭಾವೀ ಆನಂದವನ್ನು ಈಗಲೇ ಸುಲಿಯಬೇಕು; ಮತ್ತು ಆ ಸುಲಿಗೆಯ ಶ್ರಮದ ಪ್ರತಿಫಲವೆಂದು ಚಂದೂನ ಮನೆಯ ಚಹ-ಕಾಫಿ, ಬೇರೆ ಪೇಯಗಳು-ಉಪಾ ಹಾರ-ಸಿಗರೇಟು ಮುಂತಾದವುಗಳನ್ನು ಎತ್ತಬೇಕು.

ಇಂದು ಚಂದುವು ಬೇಟೆಯಿಂದ ಮನೆಗೆ ಮರಳುವ ಕಾಲಕ್ಕೆ ಆ ವಾಡೆಯ ದರ್ಶನೀ ಭಾಗದ ಸಂಗಮರವರೀ ಫರಸುಗಲ್ಲಿನ ವಿಸ್ತೀರ್ಣವಾದ ಪಡಸಾಲೆಯಲ್ಲಿ ಒಂದು ಬಹು ದೊಡ್ಡ ದುಂಡು ಮೇಜಿನ ಸುತ್ತಲೂ ಇರಿಸಿದ್ದ ಖುರ್ಚಿಗಳ ಮೇಲೆ ಕೆಲ ಜನ ಮಿತ್ರರು ಮೊದಲೇ ಬಂದು ಕುಳಿತಿ ದ್ದರು. ಅವರು ತಮ್ಮ ತಮ್ಮೊಳಗೇ ಸುಖೋಪಚಾರಗಳನ್ನು ನಡೆಸಿದ್ದರು; ಆದರೆ ಅವರು ಹೊರಗಡೆಯಿಂದ ಬರಲಿರುವ ಚಂದೂನ ದಾರಿಕಾಯುತ್ತಿರು ವಷ್ಟರಲ್ಲಿ ಆತನು ಅಲ್ಲಿಗೆ ಬಂದೇಬಿಟ್ಟನು!

ಅವನ ಬಲಗೈಯೊಳಗಿನ ತುಬಾಕಿ ನೋಡಿ ತಮ್ಮ ಮಿತ್ರನು ತೋಟ ದೊಳಗೆ ಬೇಟೆಗೆ ಹೋಗಿದ್ದನೆಂಬವನ್ನು ಅವರು ತಿಳಿದರಲ್ಲದೆ, ಆತನ ಕರವಸ್ತ್ರ ದಲ್ಲಿ ಏನೋ ಕಟ್ಟಿರುವದನ್ನೂ ಅವರು ನೋಡಿದರು; ಆದರೆ ಆ ಕರವಸ್ತ್ರದ ಬಹಿರ್ಭಾಗದಲ್ಲಿ ರಕ್ತದ ಬಣ್ಣ ಹತ್ತಿರದೆ, ಅದರಲ್ಲಿ ರಕ್ತವರ್ಣದ ಜಾಜಿ ಗುಲಾಬೀ ಹೂಗಳಷ್ಟೇ ಇರುತ್ತಿರುವುದನ್ನು ಕಂಡು ಆಶ್ಚರ್ಯಗೊಂಡರು! ಮತ್ತು ಅದೇ ಸಂದರ್ಭದಿಂದ ಆಗಿನ ಭಾಷಣವು ಪ್ರಾರಂಭವಾಯಿತು.

ಒಬ್ಬ ಗೆಳೆಯನು ಸಿಗರೇಟಿನ ಹೊಗೆ ಬಿಡು ಬಿಡುತ್ತ:- "ಎಲೋ, ತೋಟಕ್ಕೆ ಹೋಗಿ ಹೂಗಳನ್ನೇ ಕೊಯ್ಯುವದಾದರೆ, ಕೈಯಲ್ಲಿ ತುಬಾಕಿ ಯೇಕೋ?

ಬಾಯೊಳಗಿನ ತಾಂಬೂಲದುಗುಳನ್ನು ಪೀಕದಾಣಿಯಲ್ಲಿ ಉಗುಳುತ ಮತ್ತೊಬ್ಬ ಸ್ನೇಹಿತನು —"ವಿಲಾಯತಿಗೆ ಹೋದ ಬಳಿಕ ಇವನು ಬೇಟೆಯ ಕಲೆಯನ್ನು ಮರೆತಂತೆ ಕಾಣುತ್ತದೆ. ಅದರಿಂದ ಬೇಟೆಯ ಬದಲು ಉಡಲಲ್ಲಿ

ಹೂಗಳನ್ನು ಕಟ್ಟಿಕೊಂಡು ಬರದೆ ಇವನು ಮತ್ತೇನು ಮಾಡ್ಯಾನು? ಪಾಪ! ಹೂಗಳ ಬೇಟೆಯನ್ನು ಮಾತ್ರ ಯಾರಿಗಾದರೂ ತಪ್ಪದೆ ಮಾಡಬರುತ್ತದೆ!''

ಲಿಮನೆಡ್ಡಿನ ಗ್ಲಾಸನ್ನು ಬರಿದಾಗ ಮಾಡಿ ಕೆಳಗಿಡುತ್ತಿದ್ದ ಮತ್ತೊಬ್ಬ ಮಿತ್ರನು—''ವಿಲಾಯತಿಯೊಳಗಿನ ಬೇಟೆಯ ಮಾತನ್ನೇಕೆ ತೆಗೆಯುವೆ ಯಪ್ಪಾ! ಚಂದೂನ ಬೇಟೆಯ ಕಲಿಯು ವಿಲಾಯತಿಯಲ್ಲಿ ಜೀವದಿಂದುಳಿಯು ಲಿಲ್ಲೆಂದು ನೀನು ಹೇಗೆ ಹೇಳುತ್ತೀ? ಅದರದೊಂದು ಫಲವಂತೂ ಐ. ಸಿ. ಎಸ್. ಪರೀಕ್ಷೆಯ ರಿಝಲ್ಟಿನಿಂದ ಬಂದದ್ದು ಇಂದು ನಾಳೆ ಕಂಡೇ ಕಂಡೀತು; ಆದರೆ ಹುಚ್ಚಪ್ಪಗಳಿರಾ, ವಿಲಾಯತಿಯೊಳಗಿನ ಬೇಟೆಯೇನ, ಒಂದೇಬಗೆಯ ದಿರುವುವೇ? ಬೇಟೆಗಾರನು ಯಾವ ಮಟ್ಟದವನಿರುವನೋ, ಅದೇ ಮಟ್ಟದ ಬೇಟೆಗಳು ಅಲ್ಲಿ ಬೇಕಾದಷ್ಟು ಸಿಗುತ್ತವೆಂದೆನ್ನುವರು; ಆದರೂ ಆ ಬೇಟೆಯ ಸಂಗತಿಯನ್ನು ಚಂದುವು ಮನಬಿಚ್ಚಿ ಹೇಳುವಷ್ಟೇ ನಮಗೆ ತಿಳಿಯತಕ್ಕದ್ದು. ನಾವೇನೂ ಅವನ ಕ್ರಿಸ್ತ್ರೀಧರ್ಮದೊಳಗಿನಂತಹ 'ಕನ್ಫೇಸರ'ಬೇರಿಲ್ಲ; ಅಥವಾ ನಾವು ಇವನ ಮೇಲೇನೂ ಗುಪ್ತಪೊಲೀಸರನ್ನಿರಿಸಿದ್ದೆವೊ ಈತನ ಬೇಟೆಯ ಆ ಖಾಸಗೀ ಸಂಗತಿಯನ್ನು ಸ್ವಂತ ಇವನು ಇಲ್ಲವೆ ಆ ಗುಪ್ತಹೇರರು ತಿಳಿಸಲಿಕ್ಕೆ.''

ಕಿತ್ತಳೆಯ ಹಣ್ಣಿನ ತೊಳೆಗಳನ್ನು ಸುಲಿಸುಲಿದು ಬಾಯಲ್ಲಿ ಚೆಲ್ಲಿ ಕೊಳ್ಳುತ್ತಿದ್ದ ನಾಲ್ಕನೆಯವನು—''ವಿಲಾಯತಿಯ ಬೇಟೆಯುದಿರಲಿರೊ; ಆದರೆ ಇಂದು ತೋಟದೊಳಗಿನ ಈ ತುಬಾಕಿಯ ಬೇಟೆಯೇಕೆ ತಪ್ಪಿತು, ಎಂಬದನ್ನಾ ದರೂ ಚಂದುವು ನಮಗೆ ಹೇಳಲಿಲ್ಲವಲ್ಲ! ಇದಂತೂ ಅಲ್ಲಿಯಂತಹ ಗುಪ್ತ ಸಂಗತಿ ಬೇರೆಯುಲ್ಲವಷ್ಟೇ?''

ಆ ಸಂಭಾಷಣದಲ್ಲಿ ನಡುವೇ ಪ್ರವೇಶಿಸಿ ಭಾಗವಹಿಸಲಿಕ್ಕೆ ಈಗ ಚಂದು ವಿಗೆ ಇದೊಳ್ಳೇ ಅನುಕೂಲ ಸಂಧಿ ದೊರಕಿತು. ವಿಲಾಯತಿಯೊಳಗಿನ ಬೇಟೆಯ ವಿಷಯವನ್ನು ಆತನು ಬಿಡಲೇಬೇಕಾಗಿತ್ತು. ಅಂತೆಯೇ ಆತನು ಈ ಮೊದಲು ಏನೂ ನುಡಿದಿರಲಿಲ್ಲ; ಆದರೆ ಈಗ ಆತನು: ''ಹೇಳಿ ಬಿಡಲೋ ಇಂದಿನ ಬೇಟೆಯ ಕಥೆಯನ್ನು? It is the Hare that shows the Hunter (ಯಾರ ಕೈಯಲ್ಲಿ ಮೊಲವೋ ಆತನೇ ಬೇಟೆಗಾರ!) ಎಂಬ ಇಂಗ್ಲಿಷ ನಾಣ್ಣುಡಿಯು ನಿಮಗೆ ಗೊತ್ತೇ ಇದೆ; ಆದರೆ ಆ ನಾಣ್ಣುಡಿ ಹೇಗೆ ಸುಳ್ಳಾಗುವದೆಂಬದಕ್ಕೆ ಈಗಲೆ ಒಂದು ಉದಾಹರಣೆ ಘಟಿಸಿತು. ಅದನ್ನೇ ನಿಮಗೀಗ ತಿಳಿಸುತ್ತೇನೆ. ನಾನು ಬೇಟೆಗೆ ಹೋಗಿದ್ದೆನು; ಮತ್ತು ಎರಡು ಕಪೋತ ಪಕ್ಷಿಗಳನ್ನು ಕೊಂದು ಬೇಟೆ ಸಾಧಿಸಿದೆನೆನ್ನೋ ನಿಜ. ಮತ್ತು ಬೇಟೆಯ ನಿಶಾನೆಯ ಹೊರತು ಕೈ ಅಲ್ಲಾಡಿಸುತ್ತ ಬಂದಂಥ ಈ ಬೇಟೆಗಾರ

ನನ್ನಂತೂ ನೀವು ನೋಡಿಯೇ ನೋಡುತ್ತಿರುವಿರಿ. ತದ್ವಿರುದ್ಧವಾಗಿ ಇಷ್ಟರಲ್ಲೇ ನಮ್ಮ ತೋಟದೊಳಗಿನ ಕಾಲುದಾರಿಯ ಹಿಡಿದು ಹೋದಿರೆಂದರೆ, ಬೇಟೆ ಮಾಡದಲೆ ಹೆಗಲ ಮೇಲೆ ಬೇಟೆಯನ್ನು ಚೆಲ್ಲಿಕೊಂಡು ನಡೆದಿರುವ ಇಬ್ಬರು ಆಗಂತುಕರು ನಿಮಗೆ ಭೆಟ್ಟಿಯಾದಾರು; ಮತ್ತು ಈ ನಿಜ ಸಂಗತಿ ಯಾರಿಗೆ ತಿಳಿದಿಲ್ಲವೋ, ಅವರು ಅವರನ್ನೇ ಬೇಟೆಗಾರರೆಂದು ಅನ್ನುತ್ತಾರೆ.

"ಆದರೆ ಅದರಲ್ಲಿಯೂ ಒಂದು ಮೋಜಾಗಿಬಿಟ್ಟಿದೆಯೋ ಗೆಳೆಯರಿರಾ! ಅದೇನಂದರೆ, ಯಾರ ಕೈಯಲ್ಲಿ ಆ ಬೇಟೆಯಿದೆಯೋ, ಅವರಿಬ್ಬರೂ ಬಾವಾ-ಬೈರಾಗಿಗಳಿರುತ್ತಾರೆ; ಮತ್ತು ಬಾವಾ-ಬೈರಾಗಿಗಳಂತೂ ಎಂದೂ ಹಕ್ಕಿಗಳ ಬೇಟೆಯಾಡುವುದಿಲ್ಲ ಅಂದಮೇಲೆ 'ಯಾರ ಕೈಯಲ್ಲಿ ಬೇಟೆಯೋ ಅವರೇ ಬೇಟೆಗಾರರು.' ಎಂಬ ನಾಣ್ಣುಡಿಯ ಗುಂಭವು ಅದನ್ನು ನೋಡುವವರಿಗೆ ಬೀಳದಿರಲಿಕ್ಕಿಲ್ಲ."

'ಚೋಜಿಗವೇ ಸರಿ! ಆದರೇನೋ ಚಂದೂ, ನೀನು ಹೊಡೆದ ಪಕ್ಷಿಗಳು ಆ ಆಗಂತುಕ ಬೈರಾಗಿಗಳ ಕೈಗೆ ಹೋದ ಕಾರಣವೇನು?"

ಆಗ ಚಂದುವು ತೋಟದಲ್ಲಿ ನಡೆದ ಸಂಗತಿಯನ್ನೆಲ್ಲ ಆ ತನ್ನ ಮಿತ್ರ ಮಂಡಳಿಗೆ ವಿಶದವಾಗಿ ಅರುಹಿದನು; ಹಾಗು ಆತನು—"ಅಪ್ಪಗಳಿರಾ, ಲೋಕವು ಹೀಗಿದೆ; ಅದರಲ್ಲಿಯೂ ಹಿಂದೀ ಲೋಕವಂತೂ ಹೀಗೆಯೇ ಇದೆ ನೋಡಿರಿ! ಯಾವನೊಬ್ಬನು ಮೈಗೆ ಬೂದಿಬಡಕೊಂಡು ಗಡ್ಡ-ಮೀಸೆಗಳನ್ನು ಬೆಳೆಸಿದನೆಂದರೆ, ಅವನಿಗೆ ಮಿಕ್ಕ ಲೋಕಕ್ಕೆಲ್ಲ ಧರ್ಮಾಚಾರ, ತತ್ವಜ್ಞಾನ, ನೀತಿ ಮುಂತಾದ್ದನ್ನೆಲ್ಲ ಒಳ್ಳೆ ಅಧ್ಯತೆಯಿಂದ ಬೋಧಿಸುವ ಅಧಿಕಾರ ದೊರೆಯುವದು; ಅಂದರೆ ಬರಿಯ ದೊರೆಯುವದೇ ಏಕೆ, ಪ್ರತ್ಯಕ್ಷ ದೇವರೇ ಕೊಟ್ಟನೆಂದು ತೋರಹತ್ತುತ್ತದೆ. ನನ್ನ ತುಬಾಕಿಯೊಳಗಿನ ಛರಿಗಳು ತಾಕಿ ಆ ಹಕ್ಕಿಗಳು ಬೀಳಲಿಕ್ಕೂ, ಆ ಬೈರಾಗಿಗಳು ಅಲ್ಲಿಗೆ ಬರಲಿಕ್ಕೂ ಗಂಟೇಬಿದ್ದಿತು; ಮತ್ತು ಅವರಲ್ಲೊಬ್ಬನು-ಅವನು ಬಹುಶಃ ಗುರುವಿರಬೇಕೆಂದೆನಿಸುತ್ತದೆ-ಭೂತದಯೆಯ ಒಳ್ಳೇ ಸೋಗು ಹಾಕಿ, ಕರುಣಾವಿಲಾಸ ಮತ್ತು ನಾಟಕ ಮಾಡಿದ್ದರಿಂದ ನನಗೆ ಅವನ ಬಗ್ಗೆ ನಗುವೇ ಬಂದಿತು. ನಾನೊಬ್ಬನು ಯಾರೂ ಕೊಲ್ಲದ ಆ ಹಕ್ಕಿಗಳನ್ನಿಂದು ಕೊಂದೆನೇ? ಆದರೆ ಆ ಬೈರಾಗಿಯು ಸ್ವಂತ ಅತ್ತು ಅತ್ತು ಆಕ್ರಾಂತ ಮಾಡೇ ಮಾಡಿದನು; ಅಲ್ಲದೆ 'ಪಾಪಿ, ದುರಾತ್ಮಾ, ಅಧಮಾ, ಚಂಡಾಲಾ' ಮುಂತಾದ ಬೈಗಳಿಂದ ನನ್ನನ್ನು ಪೂಜಿಸಿದನು. ದೇವರ ಮನೆಯ ನ್ಯಾಯವನ್ನು ನನಗೆ ಹೇಳಿದನು; ಮತ್ತು ಕೊನೆಗೆ ನನಗೆ ಶಾಪ ಕೂಡ ಕೊಟ್ಟನು!"

'ನಿನ್ನ ಆಯ್. ಸಿ. ಎಸ್. ಪರೀಕ್ಷೆ ನಾಪಾಸಾಗುವದೆಂದು ಶಪಿಸಿದನೇನು?' ಒಬ್ಬ ಗೆಳೆಯನು ಅವಸರದಿಂದ ಕೇಳಿದನು.

"ಎಲೇ, ಆ ಬೈರಾಗಿಗೆ ಆಯ್. ಸಿ ಎಸ್. ನ ಹೆಸರಾದರೂ ಗೊತ್ತಿದೆಯೇ? ಮತ್ತು ನಾನು ಅದನ್ನು ಕಟ್ಟಿರುವುದಾದರೂ? ಅಥವಾ ಪಾಸ ನಾಪಾಸಗಳೆಂದರೇನೆಂಬಬಾದರೂ ತಿಳಿದಿರುವುದೇ? ಆದರೆ ಆ ಗಬ್ರು ನನಗೊಂದು ವ್ಯಾಪಕ Comprehansive ಶಾಪ ಕೊಟ್ಟದರಿಂದ, ಅವರ ಪೊಳ್ಳಿನಲ್ಲಿ ಏನಾದರೂ ಕೂಡ್ರುವಂತಿದೆ"

"ಭಲೆ ಭಲೆ! ಅದಾವ ವ್ಯಾಪಕ ಶಾಪವಪ್ಪಾ?"

ಚಂದೂ--"ಈ ಪಕ್ಷಿಗಳ ಹಿಂಸೆಯನ್ನು ನೀನು ಮಾಡಿದ್ದರಿಂದ ದೇವರು ನಿನ್ನನ್ನು ನೋಡಿಕೊಂಡಾನು. ಈ ದಿನ ಮತ್ತು ಈ ವೇಳೆ ಇವುಗಳನ್ನು ನೀನು ಲಕ್ಷ್ಯದಲ್ಲಿಟ್ಟುಕೋ!" ಎಂದು

'ನಿಜವಿದೆ. ಈ ಪೊಳ್ಳಿನಲ್ಲಿ ಏನಾದರೂ ಹಿಡಿಯುವುದು. ಯಾಕಂದರೆ ಇನ್ನು ಮುಂದೆ ಯಾವ ಯಾವುದು ನಿನಗೆ ಅನಿಷ್ಟವಾಗಿ ಪರಿಣಮಿಸುವದೋ, ಅದನ್ನೆಲ್ಲ ಶಿಕ್ಷಿಸುವದಕ್ಕಾಗಿಯೇ ದೇವರು ಮಾಡಿದನೆಂದಾಗುವದಿಲ್ಲವೆ?"

"ಮತ್ತು ಅದಾಗತಕ್ಕದ್ದನ್ನು ದೇವರೇ ಮಾಡತಕ್ಕವನಿದ್ದರೆ, ಈ ಮುಂಡೇಮಗ ಬೈರಾಗಿಯೇಕೆ ನಡುವೆ ಬೇಕು? ಅದರಲ್ಲಿ ಈ ಬೈರಾಗಿಯ ಕರ್ತೃತ್ವವಾವುದು?

"ಆತನ ಕರ್ತೃತ್ವವಿಷ್ಟೇ. ಅವನು ಅದರ ಭವಿಷ್ಯವನ್ನು ಮೊದಲು ಹೇಳಿದನೆಂದು, ಅದು News before the mail ಎಂದೆನಿಸಲಿಲ್ಲವೆ?"

"ಎಲೋ, ಇಷ್ಟೇ ಅಲ್ಲ; ನಾನವನಿಗೆ News before the event ಎಂದೆನ್ನಲಿಕ್ಕೂ ಸಿದ್ಧನಿದ್ದೇನೆ."

ಮೈಗೆಲ್ಲ ಬೂದಿಬಡಕೊಂಡು ಜಟೆ-ಗಡ್ಡಗಳನ್ನು ಬಿಡಿಸಿದ ಮಾತ್ರದಿಂದ Event ಘಟಿಸುವ ಮುಂಚೆಯೇ News ನಿರ್ಮಿಸಲಿಕ್ಕೆ ಬಂದರೆ, ಅದು ವಿಹಿತವೇ ಆಯಿತಲ್ಲ ಈ ಮಹಾಯುದ್ಧದ ದಿನಗಳಲ್ಲಿ! ಈ ವಿದ್ಯೆಯಿಂದ ನಾನು ಲಂಡನ್ನ ಟಾಯಿಮ್ಸದ War Correspondent ನಾದರೂ ಖಾತ್ರಿಪೂರ್ವಕವಾಗಿ ಆಗಬಂದೀತು."

"ಎಲ-ಎಲಾ, ಆದರೆ ಈ News before the event ನಿಜವಾದರಷ್ಟೆ? ಮತ್ತು Event ಘಟಿಸದಿದ್ದರೆ?"

"ಭಲೆ! ನಾನವನಿಗೆ 'ಇಂಟೆಲಿಜಂಟ ಅಂಟಿಸಿಪೇಶನ್' ಎಂದೇನು."

"ನಿಜವಾದರೆ ಅದು ಅಂಟಿಸಿಪೇಶನ್ ಆಯಿತು. ಇಲ್ಲದಿದ್ದರೆ ಅದಕ್ಕೆ

ಕೇವಲ 'ವುಯಿಶಫುಲ್ಲ ಅಂಟಿಸಿಪೇಶನ' ಅನ್ನಬೇಕಾದೀತು; ಅಂದರೆ ಅದರಲ್ಲಿ ಏನೂ ಅರ್ಥವಿಲ್ಲ.''

"ಅದೇನೇ ಇರಲಿ; ದೇವರು ಚಂದೂನನ್ನು ನೋಡಿಕೊಳ್ಳುವನೆಂದು ಬೈರಾಗಿಯು ಭವಿಷ್ಯವನ್ನಂತೂ ಹೇಳಿದನೇ. ಆತ ಶಾಪವನ್ನಂತೂ ಕೊಟ್ಟನೇ; ಆದರಿನ್ನು ಎಂತೆಂತು ಸಫಲವಾಗುವದು ಅಂದರೆ ಇವನನ್ನು ದೇವರು ಹೇಗೆ ಹೇಗೆ ನೋಡಿಕೊಳ್ಳುವನು? ಎಂಬದನ್ನು ನೋಡುವದಕ್ಕೆ ನಾವಾದರೂ ಸಿದ್ಧರಾಗಬೇಕು.''

"ಮತ್ತು ಪ್ರತಿಯೊಂದು ಬಗೆಯ ಸಿದ್ಧತೆಗಾದರೂ ಅದಕ್ಕೆ ಪ್ರಾರಂಭದಲ್ಲಿ 'ನ್ಯಾರಿ'ಬೇಕೆಂಬದು ಸಹಜವೇ ಇದೆ. ಚಂದೂಸಾಹೇಬರೇ, ಈಗಿನ್ನು 'ನ್ಯಾರಿ'= ಉಪಾಹಾರ ತರಿಸಿರಿ." ಹೀಗೆ ಸ್ಪಷ್ಟ ಬೇಡಿಕೆಯನ್ನು ಒಬ್ಬ ತಿನಸುಬಕ್ಕ ಗೆಳೆಯನು ಮಾಡಿದನು. ಬರಿಹೊಟ್ಟೆಯಿಂದ ನಡೆಸಿದ್ದ ಬಡಬಡಿಕೆಯ ಶ್ರಮಕ್ಕೆ ಆತನು ಬೇಸತ್ತಿದ್ದನು; ಆದರೆ ಆ ಗೆಳೆಯನ ಆ ಸೂಚನೆಯ ಅವಶ್ಯಕತೆಯೇ ಇರಲಿಲ್ಲ; ಯಾಕಂದರೆ, ಆತನ ಆ ಬೇಡಿಕೆಯೆಂದರೆ, ಆದಾದರೂ News before the event ಆಗಿತ್ತು. ಮನೆಯ ಯಾವ ಚಾಕರನು ಉಪಾಹಾರದ ಪದಾರ್ಥ ಮತ್ತು ಪೇಯದ ಗ್ಲಾಸುಗಳನ್ನಿರಿಸಿದಂತಹ ತಟ್ಟೆಗಳನ್ನು ತಕ್ಕೊಂಡು ಈಗಾಗಲೆ ಆ ಪಡಸಾಲೆಯ ಅರ್ಧ ದಾರಿಯನ್ನಾಕ್ರಮಿಸಿ ಬಂದಿದ್ದನೋ, ಅವನು ಅಷ್ಟರಲ್ಲಿ ಅವುಗಳನ್ನು ಆ ದುಂಡು ಮೇಜಿನ ಮೇಲಿರಿಸಿ ತನ್ನ ಆ ಪ್ರವಾಸವನ್ನು ಸಮಾಪ್ತಗೊಳಿಸಿದನು.

ಆದರ ಆ ಪದಾರ್ಥಗಳನ್ನು ತಿನ್ನುತ್ತಿರುವಾಗ ಒಬ್ಬ ಹದಗಾರ ಸ್ನೇಹಿತನು "ಎಲ-ಎಲಾ! ಚಂದೂವು ಕೊಂದಿದ್ದ ಹಕ್ಕಿಗಳು ಆ ಬೈರಾಗಿಯ ಕೈಗೆ ಹೋಗದೆ ನಮಗೇ ಬಂದಿದ್ದರೆ ಎಷ್ಟು ಚೆನ್ನಾಗುತ್ತಿತ್ತು? ಆದರೇನೋ ಚಂದೂ, ಶಾಪಕೊಟ್ಟವನಿಗೆ ಶಾಪಿತನು ಕಾಣಿಕೆ ಕೊಡುವುದಿದೆಲ್ಲಿಯ ನ್ಯಾಯವು? ನೀನು ಏಸೂಕ್ರಿಸ್ತನ ಅನುಯಾಯಿಯಂತೆ ತೋರುತ್ತದೆ. ನೀನು ಆ ಬೈರಾಗಿಯ ಮುಸುಡೆಯ ಮೇಲೆ ಕೊಟ್ಟು ಅವನನ್ನು ಹೊರಗಟ್ಟಬೇಕಾಗಿತ್ತು.

"ಮತ್ತೂ ನಾನು ನಿಜವಾಗಿ ಹಾಗೆ ಮಾಡಬೇಕೆಂದಿದ್ದೆನು; ಯಾಕಂದರೆ ಆ ಬೈರಾಗಿ ಜೊತೆಯೊಳಗಿನ ತರುಣ ಬೈರಾಗಿಯನ್ನು ಕಂಡು-ಆತನು ಆ ಗುರುವಿನ ಮರಿಯಾಗಿರಬೇಕು—ನನಗೂಳ್ಳೇ ಸಿಟ್ಟು ಮತ್ತು ತಿರಸ್ಕಾರವುಂಟಾಯಿತು. ಆದರಿಂದ ನನಗೆ ಭೂತದಯೆಯ, ಅಹಿಂಸೆಯ ಉಪದೇಶ ಮಾಡಿದ ಬಗ್ಗೆ ನಾನಾತನ ಮುಸುಡೆ ಕೆತ್ತುವಂತೆ ಬಡಿಯಬೇಕೆಂದಿದ್ದೆನು; ಆದರೆ ಆ ಅಂಥ ಗುರುವಿನ ಸಂಗತಿಯಲ್ಲಿ ಆತನಿದ್ದ ಮೂಲಕವೇ ಅವನುಳಕೊಂಡನು!''

"ಆದರೆ ಆ ಗುರುವಿನಲ್ಲಾದರೂ ಅಂಥದೇನಿದ್ದಿತೋ ನೀನವನ ಬಗ್ಗೆ ಇಷ್ಟು ಉಪೇಕ್ಷೆ ಮಾಡಲಿಕ್ಕೆ?"

ಚಂದೂ ಹೇಳಿದನು- "ಆತನ ಅಭಿಪ್ರಾಯವು ತಪ್ಪಿನದಿದ್ದರೂ ಆತನ ಭಾವನೆಯು ಪ್ರಾಮಾಣಿಕವಿರಬೇಕೆಂದು ನನಗೆ ಭಾಸವಾಯಿತು. ಆತನ ಶಿಷ್ಯನು ಮಾತ್ರ ಪಕ್ಕಾ ಬುವಾಜಿಯು! ಅವನು ಬದ್‌ಮಾಷನಿದ್ದುದನ್ನು ಅವನ ದೃಷ್ಟಿಯೇ ನನಗೆ ಹೇಳುತ್ತಿತ್ತು. ಆತನು ಬಡಕೊಂಡ ಆ ಬೂದಿಯೂ ಆ ಜಟಾ ಗಡ್ಡಗಳೂ ಆ ಗುರುವಿಗೆ ವಯೋಮಾನದಿಂದಾದರೂ ಒಪ್ಪುತ್ತಿದ್ದವು; ಆದರೆ ಆ ಮರಿಯು ಜಟಾ ಮತ್ತು ಗಡ್ಡಗಳಿಂದ 'ಕ್ಷೌರದ ದುಡ್ಡು ಉಳಿಸಿ ಕೊಳ್ಳುವ ಯುಕ್ತಿ' ಎಂಬ ಯಾವುದೊಂದು ವಿನೋದ ಪ್ರಚುರ ಚೀಟಿಯನ್ನಂಟಿಸಿದ ಹಾಗೆ ತೋರುತ್ತಿತ್ತು. ಆತನ ಆ ಭೇದಕ ಕಣ್ಣು ನೋಡಿ, ಇವನು ನುರಿತ ಬದ್‌ಮಾಷನಿರುವನೆಂದೂ ಅನೀತಿಯ ಅರ್ಕನಿರುವನೆಂದೂ ಪಾಪದ ಮೂರ್ತಿಯಿರುವನೆಂದೂ ಪ್ರತಿಯೊಬ್ಬನೂ ಹೇಳಬಹುದಾಗಿತ್ತು. ಆ ಗುರುವಿನ ಹಾಗು ಆ ಶಿಷ್ಯನ ಜೊತೆಯನ್ನು ದೇವರು ಹೇಗೆ ಕೂಡಿಸಿದನೋ ನನಗದು ಕೌತುಕವೇ ಅನಿಸುತ್ತದೆ! ಆ ಮರಿಯು ಗುರುವಿನ ನಕಲನ್ನು ಕೊಂಚವೂ ಐಬಿಲ್ಲದ ಹಾಗೆ ಮಾಡಿದ್ದನು. ಬರಿಯ ಕ್ಷೌರ ಮಾಡದಿದ್ದರೆ ಅವರಿಬ್ಬರ ಜಟಾಗಡ್ಡಗಳು ಬರಿಯ ಬೆಳೆದಾವು; ಆದರೆ ಒಂದರ ಆಕಾರವು ತನ್ನಷ್ಟಕ್ಕೆ ತಾನೇ ಇನ್ನೊಂದರಂತಿರಲಾರದು. ಆ ಶಿಷ್ಯನು ತನ್ನ ಜಡೆ ಮತ್ತು ಗಡ್ಡಗಳ ಮೂಲಿ-ಮಟ್ಟುಗಳನ್ನು ಗುರುವಿನ ಜಟಾಗಡ್ಡಗಳ ಹಾಗೆ ತೀರ ನಕಲು ಮಾಡಿದ್ದರಿಂದ, ಅವುಗಳನ್ನು ಮಾಡುವಾಗ ಆತನು ಟೇಪು-ಕಂಪಾಸಗಳನ್ನು ಹಿಡಿದುಕೊಂಡೇ ಮಾಡಿದಂತೆ ವ್ಯಕ್ತವಾಗುತ್ತಿತ್ತು. ಬಿಳೀ ಕೂದಲುಗಳ ನಕಲು ಹರೆಯದವರಿಗೆ ಸಾಧಿಸುವದಿಲ್ಲೆಂದು ಅವನು ತನ್ನ ಕೂದಲುಗಳಿಗೆ ಸ್ವಲ್ಪ ಸ್ವಲ್ಪ ಬೂದಿ ತಿಕ್ಕಿ, ತನ್ನ ವೃದ್ಧಗುರುವಿನ ಗಡ್ಡದ ಅರೆಬಿಳುಪಿನ ಬಣ್ಣ ಸಾಧಿಸುವ ಪ್ರಯತ್ನ ಮಾಡಿದ್ದನು!"

"ಸಾಯುಲಿ ಬಿಡು ಆ ಮರಿಯು! ಆದರೆ ಚಂದೂ, ನಿನ್ನ ಬೇಟೆಯ ಹಕ್ಕಿಗಳನ್ನು ನೀನು ಅವರಿಗೇಕೆ ಕೊಟ್ಟೆಯೆಂಬದನ್ನು ನೀನಿದುವರೆಗೂ ಹೇಳಲೇ ಇಲ್ಲವಲ್ಲ!"

"ಆ ಗುರುವು ಆ ಹಕ್ಕಿಗಳನ್ನು ಬೇಡಿದನೆಂದು; ಮತ್ತು ಆತನು ಅವುಗಳನ್ನು ಬೆಯ್ಯಿಸಿ ತಿನ್ನಲಿಕ್ಕೆ ಬೇಡುವದಿಲ್ಲೆಂಬದು ನನಗೆ ತೋರಿದ್ದರಿಂದ ನಾನು ಅವನಿಗೆ ಕೊಟ್ಟೆನು.

"ಹಾಗಾದರವನು ಅವುಗಳನ್ನು ಬೇಡಿದ್ದಾದರೂ ಏತಕ್ಕೆ? ನಿನ್ನ ಭಾರವನ್ನು ಕಡಿಮೆ ಮಾಡಲಿಕ್ಕಿಲ್ಲವಷ್ಟೆ?"

"ಅವುಗಳಲ್ಲಿಯು ಯಾವ ಹಕ್ಕಿಯು ಪೂರಾ ಸತ್ತಿತ್ತೋ ಅದನ್ನು ಅವನೇನು ಮಾಡುವನೋ ತಿಳಿಯದು; ಆದರೆ ಯಾವ ಇನ್ನೊಂದು ಹಕ್ಕಿಯು ಅರೆಜೀವವಾಗಿತ್ತೋ ಅದನ್ನೊಯ್ದು, ಸಾಕಿ, ಬದುಕಿಸಬೇಕೆಂದು ಆ ಗುರುವಿಗೆ ಕಳಕಳಿಯೆನಿಸುತ್ತಿರಬಹುದು!"

"ಅದಿರಲಿ. ಹಕ್ಕಿಗಳಂತೂ ಕೈಬಿಟ್ಟು ಹೋದವು. ಇನ್ನು ದೇವರು ನಿನ್ನನ್ನು ಯಾವ ಬಗೆಯಾಗಿ ನೋಡಿಕೊಳ್ಳುವನೆಂಬದಿಷ್ಟನ್ನೇ ನೋಡುವದುಳಿಯಿತು; ಮತ್ತು ಈ ರುಚಿಕರ ಉಪಾಹಾರದಿಂದಂತೂ ಅದನ್ನು ನೋಡಲಿಕ್ಕೆ ನಾವು ಗಟ್ಟಿಮುಟ್ಟಾಗಿ ಕುಳಿತಿರುತ್ತೇವೆ"

ಈ ವಾಕ್ಯವು ಪೂರ್ಣವಾಗಿ ಉಚ್ಚರಿಸಲ್ಪಟ್ಟಿತೊ ಇಲ್ಲವೋ ಇಷ್ಟರಲ್ಲಿಯೇ ತಂತಿ ಇಲಾಖೆಯ ಜವಾನನೊಬ್ಬನು ಒಂದು ತಂತಿಯ ಕಾಗದ ತಂದನು. ಚಂದೂಲಾಲನು ಸಹಿ ಮಾಡಿಕೊಟ್ಟು, ಆ ಲಕ್ಕೋಟೆಯನ್ನೊಡೆದನು, ಓದಿದನು; ಮತ್ತು ಆನಂದದಿಂದ ಎದ್ದು ನಿಂತು, ಅವನು ಆ ಕಾಗದವನ್ನು ತಿರುವಿ ಹಿಡಿದು ಮಿತ್ರರೆಲ್ಲರಿಗೆ ತೋರಿಸಿ, ಓದಿ ಹೇಳಿದನು. ಆ ತಂತಿಯೊಳಗೆ ಈ ಶಬ್ದಗಳಿದ್ದವು:—

"ನೀವು ಐ. ಸಿ. ಎಸ್. ಪರೀಕ್ಷೆ ಪಾಸಾದ ಬಗ್ಗೆ ನಾನು ಅತ್ಯಂತ ಮನಃಪೂರ್ವಕವಾಗಿ ನಿಮ್ಮನ್ನು ಅಭಿವಂದಿಸುತ್ತೇನೆ ನೀವು ಆ ಪರೀಕ್ಷೆಯಲ್ಲಿ ಬಹುಮಾನವನ್ನೂ ಪಡೆದಿರುತ್ತೀರಿ. ಒಟ್ಟು ಮೂವತ್ತೊಂರು ಮಂದಿ ಪಾಸಾಗಿರುತ್ತಾರೆ ಅವರಲ್ಲಿ ನಿಮ್ಮ ನಂಬರು ಮೂರಾಗಿದೆ. ನಿಮ್ಮ ನೇಮಣೂಕಿ ಯಾವ ಪ್ರಾಂತದಲ್ಲಾಗುವದೆಂಬದು ಇನ್ನೂ ಪ್ರಕಟವಾಗಿಲ್ಲ."

ಎಲ್ಲ ಸ್ನೇಹಿತರೂ ಒಮ್ಮೆಲೆ ಎದ್ದು ನಿಂತರು; ಮತ್ತು ಆನಂದದಿಂದ ಮೈಮೇಲೆ ಸ್ಮೃತಿಯಿಲ್ಲದವರಂತೆ ಮಂಗನಾಟ ನಡೆಸಿದರು! ಒಬ್ಬನು ಕುಣಿಯಹತ್ತಿದನು; ಇನ್ನೊಬ್ಬನು ತನ್ನ ಟೊಪ್ಪಿಗೆಯನ್ನು ಮೇಲೆ ಮೂರು ಮೂರು ಸಾರೆ ತೂರತೊಡಗಿದನು. ಮತ್ತೊಬ್ಬನು ಗಂಟೆಯ ಬದಲು ಚಹದ ಕಪ್ಪುಗಳ ಮೇಲೆ ಚಮಚೆ ಬಡೆದು ಖಣ್ಣಖಣ್ಣೆಂದು ಸಪ್ಪಳ ಮಾಡಹತ್ತಿದನು. ಒಂದಿಬ್ಬರು ಕೈಯಲ್ಲಿ ಕೈಯಿಕ್ಕಿ ಕುದುರೆಗಳಂತೆ ಜಿಗಿಯಹತ್ತಿದರು; ಮತ್ತೊಬ್ಬನಂತೂ ಚಂದೂನ ಕೊರಳಿಗೆ ತೆಕ್ಕೆಬಿದ್ದು, ಆತನ ಗಲ್ಲವನ್ನೇ ಕಡಿದನು!

ಎಲ್ಲರಿಗಿಂತಲೂ ವಿವೇಕಿಯೂ ಗಂಭೀರನೂ ಆಗಿದ್ದವನು:—"ಮಿತ್ರ

ರೆ, ಬೈರಾಗಿಯ ಶಾಪದ ಫಲವಿದು!! ದೇವರು ಚಂದೂನನ್ನು ನಿಜವಾಗಿಯೂ ನೋಡಿಕೊಂಡನು; ಆದರೆ ಹಾಗೆ ನೋಡಿಕೊಳ್ಳುತ್ತಿರುವಾಗ ಪಾಸಾದ ಮೂವತ್ತೊರರಲ್ಲಿ ಇವನು ಮೂರನೆಯವನೆಂಬದಾದರೂ ಆ ದೇವರಿಗೆ ಕಂಡಿದ್ದೀತು!"

"ಎಲೋ, ನೀವೆಂಥ ಹುಚ್ಚರಿರುತ್ತೀರಿ? ಆ ಬೈರಾಗಿಯ ವಿಕ್ಷಿಪ್ತ ಶಬ್ದಗಳನ್ನು ಸುಮ್ಮನೆ ತೇಯುತ್ತಿರುವಿರಿ. ಅದಿರಲಿ. ನಿಮಗೆ ನಾನೇನು ಕಾಣಿಕೆ ಕೊಡಬೇಕೆಂಬದನ್ನೀಗ ಹೇಳಿರಿ" ಎಂದು ಚಂದೂಲಾಲನೆನ್ನಲು, ಕೂಡಲೆ ಸೋಡಾ-ಚಾಂಪಿಯನ್ ಸೀಸೆಗಳ ಬೆಣೆಗಳು ಹಾರಿ, ರಂಗೀತ ಪೇಯಗಳ ಗ್ಲಾಸುಗಳು ಆ ದುಂಡು ಮೇಜಿನ ಮೇಲೆ ತಂಪಿರಿಸಲ್ಪಟ್ಟವೆಂಬದನ್ನು ಹೇಳಬೇಕಾಗಿಲ್ಲ!

---

### ಜೀಕೌ ಇವಳಿಗೆ ಆಯ್. ಸಿ. ಎಸ್.

ಚಂದೂಲಾಲನು ಐ. ಸಿ. ಎಸ್. ಪಾಸಾಗುವ ಬಗ್ಗೆ ಎಲ್ಲರ ಖಾತ್ರಿಯಿದ್ದರೂ ಕೂಡ, ಆ ಸಂಗತಿಯು ನಿಜವಾದ ಆನಂದವುಂಟಾಗಲಿಕ್ಕೆ ಪ್ರತ್ಯಕ್ಷ ತಂತಿ ಬರುವ ಅವಶ್ಯಕತೆಯಿರಲಿಲ್ಲವೇ? ಆ ತಂತಿ ಬಂದ ಕೂಡಲೆ ಆನಂದದ ಪ್ರದರ್ಶವು ನಡೆಯಿತು.

ಎಲ್ಲಕ್ಕಿಂತಲೂ ಹೆಚ್ಚು ಆನಂದವು ಆದಾರಿಗಾದರೂ ಆಗಿದ್ದರೆ ಅದು ಸರ ಗಂಗಾರಾಮರಿಗೆ. ಗಂಗಾವತರಣದಿಂದ ಭಗೀರಥನಿಗೂ, ರಾಮನು ವನವಾಸದಿಂದ ಹಿಂದಿರುಗಿದ್ದರಿಂದ ಭರತನಿಗೂ, ಕೀಚಕವಧದಿಂದ ದ್ರೌಪದಿಗೂ, ಅಹಲ್ಯಾಶಾಪವಿಮೋಚನದಿಂದ ಗೌತಮನಿಗೂ, ಶಿವಾಜಿಯು ಔರಂಗಜೇಬನ ಬಂದಿಗೃಹದಿಂದ ಪಾರಾಗಿ ಬಂದು ಭೆಟ್ಟಿಯಾದ ಬಗ್ಗೆ ಜಿಜಾಬಾಯಿಗೂ-ಅಷ್ಟೇ ಏಕೆ 'ಸರ' ಪದವಿಯು ಸರಕಾರದಿಂದ ದೊರೆತದ್ದಕ್ಕಾಗಿ ಸ್ವತಃ ಸರ ಗಂಗಾರಾಮರಿಗೂ ಎಷ್ಟು ಅತ್ಯಾನಂದವಾಗಿದ್ದಿತೋ, ಅದೆಲ್ಲಕ್ಕಿಂತಲೂ ಚಂದೂ ಐ. ಸಿ. ಎಸ್. ಪಾಸಾದ ಬಗ್ಗೆ ಸರ ಗಂಗಾರಾಮರಿಗಾದ ಆನಂದವು ಮಿಗಿಲಾಗಬಹುದು.

ಯಾಕೆಂದರೆ, ಐ. ಸಿ. ಎಸ್ಸಿನ ಮಹತ್ವವೇ ಅವರಿಗೆ ಅಷ್ಟೆನಿಸುತ್ತಿತ್ತು. ಒಂದು ದಿನ ಗಂಗಾರಾಮರು ತಮ್ಮ ಗೆಳೆಯನೊಡನೆ ಮಾತಾಡುತ್ತಿರುವಾಗ ಅವರಿಗೆ ಊರ್ಮಿಯುಂಟಾಗಲು, ಅವರು ಆಯ್. ಸಿ. ಎಸ್ಸಿನ ಮಹತ್ವದ ವರ್ಣನವನ್ನು ಈ ಪ್ರಕಾರ ಮಾಡಿದ್ದರು:—"ಐ. ಸಿ. ಎಸ್. ಅಂದರೆ ಏನು ಹೇಳಲಿ! ಅದೊಂದು ಗುಲಾಬೀ ಹೂವಿನಂತಹ ಹೂವ್ವಾಗಿದೆ: ಬಣ್ಣ,

ವಾಸನೆ ಇವುಗಳೆಲ್ಲ ಮನಮೋಹಕವು! ಅದೊಂದು ಅಕ್ರೋಡದಂತಹ ಮರವಾಗಿದೆ. ಆ ಗಿಡಗಳಿಗೆ ಕಾಯಿ ಆಗಲಿಕ್ಕೆ ಅರವತ್ತು ವರ್ಷ ಬೇಕಾದಾವು; ಆದರೆ ಒಮ್ಮೆ ಕಾಯಿ ಆಗಹತ್ತಿದವೆಂದರೆ, ಮುಂದೆ ಅರವತ್ತು ವರ್ಷಗಟ್ಲೆ ಒಂದೇಸವನೆ ಕಾಯೇಕಾಯಿ! ಒಬ್ಬರ ಹಿಂದೊಬ್ಬರಂತೆ ಐದೈದು ತಲೆಗಳಿಂದ ಆಯ್. ಸಿ. ಎಸ್ಸಿನ ಚಾಕರಿ ಮಾಡಿದ ಹುಡುಗರು ಇದ್ದಂಥ ಮನೆತನಗಳು ವಿಲಾಯತಿಯಲ್ಲಿ ಹಲವಿರುತ್ತವೆಂದೆನ್ನುತ್ತಾರೆ. ಐ. ಸಿ. ಎಸ್. ಇದು ಸರಕಾರಿ ನೌಕರಿಯೆಂಬ ಉಣ್ಣೆಯ ಮೇಲಿನ ಹೂವಾಗಿರುತ್ತದೆ; ರೇಷ್ಮೆಯ ಮೇಲಿನ ಹೊಳಪಾಗಿರುತ್ತದೆ; ಬಂಗಾರದ ಮೇಲಿನ ಕಾಂತಿಯಾಗಿದೆ; ಶಸ್ತ್ರಗಳ ಮೇಲಿನ ಸಾಣೆಯಾಗಿದೆ. ಚಂದೂವನ್ನು ಸರ ಗಂಗಾರಾಮರ ಮಗನೆಂದು ಇಂದು ಹೊಗಳುವವರು, ನಾಳೆ ಚಂದೂಲಾಲನ ತಂದೆಯೆಂದು ನನ್ನನ್ನು ಹೊಗಳಹತ್ತಿದರೆಂದರೆ, ನನಗೆ ಧನ್ಯತೆಯೆನಿಸೀತು.

ಅವರ ವಾಡೆಯ ಹೊರಬಾಗಿಲ ಬಳಿಯಲ್ಲಿ ಎಡಗಡೆಗೆ 'ಸರ ಗಂಗಾರಾಮ ವರ್ಮಾ' ಎಂಬ ಹೆಸರಿನ ಅಕ್ಷರಗಳು ಹಿತ್ತಾಳೀ ಹಲಗೆಯ ಮೇಲೆ ಕೊರೆದು ಹಚ್ಚಲ್ಪಟ್ಟಿದ್ದವು. ಅದರಂತೆಯೇ ಇನ್ನು ಬಲಗಡೆಗೆ "ಚಂದೂಲಾಲ ವರ್ಮಾ, ಐ ಸಿ. ಎಸ್" ಎಂಬ ಅಕ್ಷರ ಕೊರೆದ ಅಂಥದೇ ಒಂದು ಹಿತ್ತಾಳಿಯ ಹಲಗೆಯನ್ನು 'ಸರ' ಎಂಬ ಶಬ್ದಕ್ಕೆ ಹಿಂದುಗಡೆ ಸ್ಥಳಬಿಟ್ಟು ಸಿದ್ಧಗೊಳಿಸಿ ಹಚ್ಚುವ ಆಜ್ಞೆಯನ್ನು ಅವರು ತಮ್ಮ ಮನೆಯ ಮ್ಯಾನೇಜರನಿಗೆ ಅಂದೇ ಮಾಡಿದರು.

ಮಾಸಾಹೇಬರಿಗೂ ಆನಂದವಾಯಿತು; ಆದರೆ ಒಬ್ಬೊಂಟಿಗನಾದ ಮಗನು ನೌಕರಿಯ ನಿಮಿತ್ತದಿಂದ ದೂರಿರಬೇಕಾಗುವದೆಂಬ ಖೇದದ ಝಳವು ಆ ಆನಂದವೊಡನೆ ಅವರಿಗೆ ಬಡಿಯಹತ್ತಿತು; ಯಾಕಂದರೆ ಅದು ತಾಯಿಯ ಹೃದಯವಾಗಿತ್ತು! ಅವರಿಗನಿಸುತ್ತಿದ್ದಿತೇನಂದರೆ, ಮನೆಯಲ್ಲಿ ೫೦ ಸಾವಿರ ಆದಾಯದ ಜಮೀನದಾರಿಯಿದೆ. ಚಂದುವು ಎಷ್ಟೇ ಗಳಿಸಿದರೂ ಅವನಿಗೆ ಇಷ್ಟೇನೂ ಸಂಬಳ ದೊರೆಯಲಿಕ್ಕಿಲ್ಲ. ಒಂದುವೇಳೆ ದೊರೆತರೂ ಉಪಭೋಗದ ದೃಷ್ಟಿಯಿಂದ ಒಂದು ಲಕ್ಷ ಮತ್ತು ೫೦ ಸಾವಿರ ಇವುಗಳಲ್ಲಿ ಹೆಚ್ಚು ಭೇದವಿಲ್ಲ. ಒಮ್ಮೆ ತಲೆ ಮುಣುಗುವ ವರೆಗೆ ನೀರಿದ್ದ ಬಳಿಕ, ಅದರ ಕೆಳಗೆ ಮತ್ತೆ ನಾಲ್ಕು ಆಳು ನೀರಿದ್ದರೇನು ಅಥವಾ ಮಹಾಸಾಗರವಿದ್ದರೇನು? ಎಲ್ಲವೂ ಅಷ್ಟೇ. ಲಕ್ಷ ರೂಪಾಯಿ ಖರ್ಚು ಮಾಡುವವನ ಸುಖವು ಐವತ್ತು ಸಾವಿರ ಖರ್ಚು ಮಾಡುವವನ ಇಮ್ಮಡಿಯಿರುವುದೇ! ಇನ್ನು ಹಾಳುಮಾಡುವವನೇ ಗಂಟುಬಿದ್ದರೆ, ಆತನಿಗೆ ಲಕ್ಷವೂ ಕಡಿಮೆಯೇ ಆದೀತು. ತಾತ್ಪರ್ಯ

ವಿಷ್ಟೇ, ದುಡ್ಡಿನ ಪ್ರತ್ಯಕ್ಷ ಸುಖದ ದೃಷ್ಟಿಯಿಂದ ಆಯ್. ಸಿ. ಎಸ್. ಆಗಬೇಕೆಂದು ಮಾಸಾಹೇಬರು ಎಂದೂ ಯೋಚಿಸಲೇ ಇಲ್ಲ; ಆದರೆ ತಮ್ಮ ಗಂಡನು ತೀರ ಪ್ರಾಣ ಕಳಕೊಳ್ಳುವಂತೆ ಯಾವುದಕ್ಕೆ ಮಹತ್ವ ಕೊಡುವನೋ ಅದು ಹಾಗೆಯೇ ಏನಾದರೂ ದೊಡ್ಡದೇ ಇದ್ದೀತು, ಎಂದು ಆ ತಾಯಿಯ ಸ್ವಾಭಾವಿಕ ಕಲ್ಪನೆಯಾಗಿತ್ತು. ತನ್ನ ಮಗನು ಈ ಪರೀಕ್ಷೆ ಪಾಸಾಗಿ ಏನೋ ಲೋಕೋತ್ತರ ಯಶ ಸಂಪಾದಿಸಿದನೆಂಬದಿಷ್ಟೇ ಸ್ಥೂಲ ಕಲ್ಪನೆಯು ಅವಳಿಗಾಯಿತು.

ಚಂದೂನ ತಂಗಿಯಾದ ಬಿಂಬೆಯು ಅಲ್ಪ ಸ್ವಲ್ಪ ಕಲಿತವಳು; ಅದರಿಂದ ಅವಳಿಗೆ ಆಯ. ಸಿ. ಎಸ್.ನ ಜ್ಞಾನವು ಹೆಚ್ಚಾಗಿತ್ತು; ಅಂದರೆ ಆ ಶಬ್ದವು ಅವಳಿಗೆ ತನ್ನ ತಾಯಿಗಿಂತಲೂ ಹೆಚ್ಚು ಶುದ್ಧರೀತಿಯಿಂದುಚ್ಚರಿಸಬರುತ್ತಿತ್ತು. ನಮ್ಮ ಮಾಸಾಹೇಬರು ಆಯ್. ಸಿ. ಎಸ್. ದ ಬದಲು 'ಐಶೀಯಸ' ಎಂದೆನ್ನುತ್ತಿದ್ದರು! ಅಲ್ಲದೆ ಸಾಹೇಬ ಜನರ ಸಂಗತಿಯಿಂದ ಬರುವ ಮಹತ್ವದ ಕಲ್ಪನೆಯು ಬಿಂಬೆಗೆ ಅಧಿಕವಾಗಿತ್ತು; ಯಾಕಂದರೆ ತನ್ನ ತಂದೆಯೊಡನೆ ಅವಳು ಸಾಹೇಬಜನರ 'ಪಾರ್ಟಿ'ಗಳಿಗೆ ಹಾಜರಿರುತ್ತಿದ್ದಳು. ತನ್ನ ಅಣ್ಣನ ಯಶದ ಬಗ್ಗೆ ಅವಳಿಗೆ ಸಹಜವಾಗಿಯೇ ವಿಶೇಷ ಅಭಿಮಾನವೆನಿಸಿತು: ಆದರೆ ಅದರಿಂದ ತನಗೆ ಮೊದಲಿಗಿಂತಲೂ ಹೆಚ್ಚು ಚಲೋ ಗಂಡನ ಮನೆಯು ದೊರೆತೀತೆಂಬ ಬಗ್ಗೆಯಾದರೂ ಅವಳ ಮನಸ್ಸಿನಲ್ಲಿ ಅಸ್ಪಷ್ಟವಾದ ಅಪೇಕ್ಷೆಯಿರಬಹುದು.

ಆ ಊರ ಬಹುಜನರಿಗೆ ಆಯ್. ಸಿ. ಎಸ್. ದ ನಿಜವಾದ ಅರ್ಥವೇನೂ ತಿಳಿಯುತ್ತಿರಲಿಲ್ಲ; ಆದರೆ ವರ್ಷದೊಳಗೊಮ್ಮೆ ಕಲೆಕ್ಟರ ಸಾಹೇಬನ ಮುಕ್ಕಾಮು ಚೋದ್ಯಪುರದಲ್ಲಾಯಿತೆಂದರೆ, ಎಷ್ಟು ಗಡಬಿಡಿಯಾಗುತ್ತದೆ? ತಮ್ಮೂರಿಗೆ ಎಂಥ ಪ್ರಸಿದ್ಧಿಯುಂಟಾಗುತ್ತದೆ? ಮುಂತಾದುದು ಅವರಿಗೆ ಗೊತ್ತಿತ್ತು. ಅದರಿಂದ ತಮ್ಮೂರ ನಿವಾಸಿಯಾದ ಚಂದೂಲಾಲನೇ ಕಲೆಕ್ಟರನಾಗಿ ಆ ತಮ್ಮೂರಿಗೆ ಬಂದರೆ, ಆ ಸಲದ ಕಲೆಕ್ಟರನ ಮುಕ್ಕಾಮಿನ ಮಹತ್ವವು ಅವರಿಗೆ ಅವರ್ಣನೀಯವೆನಿಸುವುದು ತೀರ ಸ್ವಾಭಾವಿಕವಾಗಿತ್ತು. ಕಲೆಕ್ಟರನು ಬಂದನೆಂದರೆ, ರಾಜಧಾನಿಯ ರಹದಾರಿ ಬಂಗ್ಲೆಯ ಮೇಲೆ ನಿಶಾನಿ ಹಚ್ಚಲಾಗುವುದು, ಕಾಂಪೌಂಡಿನಲ್ಲಿ ಚಿಕ್ಕ ದೊಡ್ಡ ತಂಬುಗಳು ನಿಲ್ಲಿಸಲ್ಪಡುವವು, ಹಿತ್ತಾಳಿಯ ಇಲ್ಲವೆ ಬೆಳ್ಳಿಯ ಚಂದ್ರನಂತಹ ಪಟ್ಟಿ ಧರಿಸಿದ್ದ ಶಿಪಾಯಿಗಳು ಅಲ್ಲಲ್ಲಿ ಅಡ್ಡಾಡುವರು ಇವೆಲ್ಲ ಕಾಣುತ್ತವೆ. ಊರೊಳಗಿನ ಅಂಗಡಿಕಾರರಿಗೆ ತಮ್ಮ ಮೇಲೆ ಸಂಕಟ ಬಂದಿತೆಂದು ಅನಿಸುತ್ತಿದ್ದರೂ ಸರಬ

ರಾಯಿ ಮಾಡಲಿಕ್ಕೆ ತತ್ಪರರಾಗಿದ್ದ ನಾಲ್ಕು ಜನ ಲೋಭಿಗಳ ಕೈಯೂ ಬೆಚ್ಚ ಗಾಗುತ್ತದೆ, ಕೋರ್ಟ ಕಚೇರಿಗಾಗಿ ಹಳ್ಳಿಪಳ್ಳಿಗಳಿಂದ ಬಂದಿರುವ ಜನರ ಗದ್ದಲವಾಗುತ್ತದೆ. ತಾತ್ಪರ್ಯವೇನಂದರೆ, ಊರೊಳಗಿನ ಯಾವುದೊಂದು ಜಾತ್ರೆ ಇಲ್ಲವೆ ಉರುಸು ನಡೆದಿರುವ ಹಾಗೆ ಕಲೆಕ್ಟರನ ಸ್ವಾರಿಯಿಂದ ಗೊಂ-ದಲವೇಳುತ್ತದೆ.

ಮತ್ತು ತಮ್ಮೂರ ಚಂದೂಲಾಲನು ಒಂದು ದಿವಸ ಅದರೊಳಗಿನ ಉತ್ಸವ ಮೂರ್ತಿಯಾಗತಕ್ಕವನೆಂಬ ಕಲ್ಪನೆಯಿಂದ ಊರ ಸರ್ವಸಾಧಾ ರಣ ಜನರ ಮನಸ್ಸು ದಂಗಾಗುತ್ತಿತ್ತು. ಅಂದಬಳಿಕ ಆತನ ಕೇವಲ ಮಿತ್ರ-ಪರಿಚಿತರ ಮನಸ್ಸಿನಲ್ಲಿ ಇವಲ್ಲದೆ ಇನ್ನೂ ಹಲವು ಬೇರೆ ಆಶೆ-ಅಪೇಕ್ಷೆಗಳು ದ್ಭವಿಸಿದರೆ ಅದರಲ್ಲೇನು ಆಶ್ಚರ್ಯ! ನಾನು ಚಂದೂನ ಖುರ್ಚಿಗೆ ಖುರ್ಚಿ ಯಾನಿಸಿಕೊಂಡು ಡೌಲಿನಿಂದ ಕುಳಿತು, ಆತನ ಸಿಗರೇಟು ತಕ್ಕೊಂಡು ಸೇದು ತ್ತಿರುವದನ್ನು ಜನರು ನೋಡಿದಾಗ್ಗೆ ನಮ್ಮ ಪಿತೃಗಳು ಸ್ವರ್ಗಕ್ಕೆ ಮುಟ್ಟು ವರು, ಎಂದು ತಿಳಿಯುವ ಕೆಲ ಲಬ್ಧ ಪ್ರತಿಷ್ಠಿತ ಮಿತ್ರರಿದ್ದರೆ, ತನ್ನ ಗೆಳೆಯನಿಂದ ಲಾಭದ ಕೆಲವು ಸರಕಾರ ದರ್ಬಾರದ ಕೆಲಸಗಳನ್ನು ತಮಗೆ ಮಾಡಿಕೊಳ್ಳಬಂದೀತೆಂದು ಭಾವಿಸುವ ಕೆಲ ಲೋಭಿ ಗೆಳೆಯರೂ ಇದ್ದರು.

ಚೋದ್ಯಪುರದ ಜನರು ಸಭೆಗೂಡಿ ಚಂದೂಲಾಲನಿಗೆ ಮಾನಪತ್ರ ಮತ್ತು ಔತಣ ಕೊಡುವುದನ್ನು ನಿರ್ಧರಿಸಿದರು. ಅದಕ್ಕಾಗಿ ಅವರಲ್ಲೊಬ್ಬ ಮುಖಂಡನು ಫಂಡು, ಚಂದಾ, ಕಾಣಿಕೆ ಮುಂತಾದವುಗಳನ್ನು ಕೂಡಿಸುವ ದಕ್ಕಾಗಿ ಹೊರಟನು. ಇನ್ನೊಬ್ಬನು ಮಾನಪತ್ರವನ್ನು ಬರೆಯುವದಕ್ಕಾಗಿ ದಾಖಲೆಗಳನ್ನು ಹುಡುಕಲಾರಂಭಿಸಿದನು. ಮಾನಪತ್ರವನ್ನು ಏತರಲ್ಲಿ ಹಾಗು ಏತರ ಮೇಲೆ ಕೊಡಬೇಕೆಂಬ ಬಗ್ಗೆ ಮತಭೇದವಾಗಿ ದೊಡ್ಡ ಕಲಹ ವಾಯಿತು; ಆದರೆ ಚಂದಾದ ಅಂಕಿಯನ್ನು ನೋಡಿಯೇ ಅದರ ನಿರ್ಣಯ ಮಾಡಬೇಕೆಂಬ ವಿವೇಕದಿಂದ ಆ ಕಲಹವು ಶಾಂತವಾಯಿತು. ಮಾನ ಪತ್ರದಲ್ಲಿ ಯಾವ ಸಂಗತಿ ಬರೆಯಲಾದೀತೆಂಬ ವಿಷಯದ ಯೋಜನೆಯು ಆದಾರಿಗೂ ಇರಲಿಲ್ಲ.; ಮತ್ತು ಆ ಬಗ್ಗೆ ಮತಭೇದವೂ ಆಗಲಿಲ್ಲ. ಮಾನ ಪತ್ರ ಕೊಡುವವರ ಹೆಸರು, ಅದನ್ನು ಸ್ವೀಕರಿಸುವವನ ಹೆಸರು ಮತ್ತು ಪ್ರಸಂಗದ ನೆವದ ಹೆಸರು ಇವುಗಳ ಹೊರತು ಮಿಕ್ಕ ಎಲ್ಲ ಸಂಗತಿಯು ಪ್ರತಿಯೊಂದು ಮಾನಪತ್ರದಲ್ಲಿ ಬಹುಮಟ್ಟಿಗೆ ಒಂದೇ ಬಗೆಯದಾಗಿರುತ್ತದೆ; ಮತ್ತು ಯಾವುದೊಂದು ದೊಡ್ಡ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮಾನಪತ್ರವನ್ನು ಕಂಪೋಜ ಮಾಡಲಿಕ್ಕೆ ಹೆಡ್ ಕಂಪೋಜಿಟರನ ಕಡೆಗೆ ಕೊಟ್ಟಿತೆಂದರೆ, ಅವನು

ಮೇಲೆ ಬರೆದ ತಪಶೀಲದ ಸ್ಥಾನಗಳನ್ನಷ್ಟು ಖಾಲಿಬಿಟ್ಟು, ಮಿಕ್ಕ ಎಲ್ಲ ಮಾನ ಪತ್ರವನ್ನು ತನ್ನ ಪೂರ್ವಪರಂಚಯದ ಮೇರೆಗೆ ಕಂಪೋಜ ಮಾಡಿಬಿಡು ತ್ತಾನೆ! ಔತಣದ ನಂತರ ಹಾರಿಸುವ ಮದ್ದಿನ ಬಗ್ಗೆ ಕೂಡಲೆ ಬೇಡಿಕೆ ಕಳಿಸಲಾ ಯಿತು. ಆ ಸಮಾರಂಭವು ಸಾದರಗೊಳ್ಳಲಿಕ್ಕೆ ಇನ್ನೂ ಕೆಲದಿನಗಳ ಅವಕಾಶ ವಿದ್ದಿತು; ಆದರೆ ಅದರ ಪೂರ್ವ ಸಿದ್ಧತೆಯು ಮಾತ್ರ ಒಳ್ಳೇ ಒತ್ತರದಿಂದ ನಡೆದಿತ್ತು.

ಚಂದೂನ ಪರೀಕ್ಷೆ ಪಾಸಾದ ತಂತಿ ಬಂದ ದಿನವೇ ಇಳಿಹೊತ್ತಿನಲ್ಲಿ ರಾವಬಹಾದ್ದೂರ ಶಾಮಲಾಲರ ಮನೆಯಲ್ಲಿ ಹಲವು ಮಂದಿ ಚಿಕ್ಕ-ದೊಡ್ಡ ಸ್ತ್ರಿಯರ ಒಂದು ಚಿಕ್ಕ ಸಮೂಹವೇ ಕಲೆತಿತು ಶರಯೂಳ ಭಾವೀ ಪತಿಯು ಆಯ್. ಸಿ. ಎಸ್. ಪಾಸಾದ ಬಗ್ಗೆ ಆಕೆಯ ಅಭಿನಂದನ ಮಾಡುವ ಉದ್ದೇಶದಿಂದಲೇ ಅದು ಸೇರಿತ್ತು. ಆ ಕಾಲಕ್ಕೆ ಶರಯೂಳ ಮನಸ್ಸಿನಲ್ಲಿ ಆನಂದದ ಭಾವನೆಯು ಹೇಗೆ ಹುಟ್ಟಿದ್ದೀತೆಂಬದರ ಕಲ್ಪನೆಯು ಆ ವಯಸ್ಸಿನ, ಅಂಥ ಪ್ರಸಂಗದಲ್ಲಿ ಸಿಲುಕಿದ ಉಪವರಕನ್ಯೆಯರಿಗೆ ಮಾತ್ರ ಆದೀತು.

ಚಂದೂ ವಿಲಾಯತಿಗೆ ಹೋಗುವ ಮುಂಚೆ ಅಂದರೆ ನಾಲ್ಕು ವರ್ಷ ಗಳ ಹಿಂದೆ, ತನ್ನ ನಿಯೋಜಿತ ಮಾವನ ಮನೆಗೆ ವಿಶೇಷವಾಗಿ ಎಡತಾಕುತಿ ದ್ದನು; ಮತ್ತು ಆಗ ಆತನಿಗೂ ಶರಯೂಳಿಗೂ ಯಾವಾಗಾದರೊಮ್ಮೆ ಅವ ಸರದಲ್ಲಿ ಭೆಟ್ಟಿಯಾಗಿ, ಹಾಸ್ಯಮುಖದಿಂದ ಅವರಲ್ಲಿ ನಾಲ್ಕಾರು ಶಬ್ದಗಳ ಕೊಡಕೊಳ್ಳೋಣವೂ ನಡೆಯುತ್ತಿತ್ತು. ಎಷ್ಟಾದರೂ ಸಾಗರ ಪ್ರಾಂತದೊಳ ಗಿನ ಆ ಜೋಧ್ಯಪುರವು ಹಿಂದುಳಿದದ್ದೇ! ಅಲ್ಲಿ ಸುಶಿಕ್ಷಿತರು ಅಲ್ಪ; ಅದರಿಂ ದ ಸಾಮಾಜಿಕ ಸುಧಾರಣೆಯ ಹೊಸ ಹೊಸ ರೀತಿ-ರಿವಾಜುಗಳೂ ಆಧು ನಿಕ ಪದ್ಧತಿಗಳೂ ಅಲ್ಲಿ ಹೆಚ್ಚಾಗಿ ಪ್ರಚಾರದಲ್ಲಿರಲಿಲ್ಲ. ವಿಲಾಯತಿಯ ಕೋರ್ಟಶಿಪ್ ಪದ್ಧತಿಯ ಮೇರೆಗೆ ಭಾವೀ ವಧುವರರು ಜೊತೆಯಾಗಿ ತಿರು ಗಾಡಲಿಕ್ಕೆ ಹೋಗುವದೂ ನಾಟಕ-ಸಿನೇಮಗಳಿಗೆ ಹೋಗುವದೂ ಇಲ್ಲವೆ ಹಾಸ್ಯ-ವಿನೋದ ಮಾಡುತ್ತ ಹಲವರ ಎದುರಿಗೆ ಹರಟೆ ಹೊಡೆಯುತ್ತ ಕೂಡುವದೂ ಇವೆಲ್ಲ ಪ್ರಕಾರಗಳು ಅಲ್ಲಿ ನಡೆಯುತ್ತಿರಲಿಲ್ಲ. ಆದರೆ ಅಗು ನಾಲ್ಕು ವರ್ಷಗಳ ಹಿಂದೆ ಸ್ವಾಭಾವಿಕವಾಗಿತ್ತು; ಪುನಃ ನಾಲ್ಕು ವರ್ಷ ಕಳೆದ ನಂತರ ಶರಯೂ ಹೆಚ್ಚು ದೊಡ್ಡವಳೂ ತಿಳಿವಳಿಕೆಯುಳ್ಳವಳೂ ಆದಳು; ಹಾಗು ಚಂದೂವಂತೂ ವಿಲಾಯತೀ ಸಮಾಜದೊಳಗಿನ ಸುಧಾ ರಣೆಯ, ಉದಾರಮತವಾದಿತ್ವದ, ಸ್ತ್ರೀದಾಕ್ಷಿಣ್ಯತ್ವದ ಅರ್ಕ ಇಲ್ಲವೆ ರಸಾ ಯನ ಕುಡಿದು ಬಂದವನು; ಆದರಿಂದ ಮತ್ತು ವಿಶೇಷವಾಗಿ, ಇನ್ನು ಲಗ್ನದ

ಅವಧಿಯು ತೀರ ಸಮೀಪಿಸಿದ್ದರಿಂದ-ಚಂದ್ರೂನ ಎಡತಾಕುವಿಕೆಯು ಭಾವೀ ಶ್ವಶುರನ ಮನೆಗೆ ಅಧಿಕವಾಗಿ ನಡೆದೀತೆಂದು ಎಲ್ಲರ ಕಲ್ಪನೆಯಾಗಿತ್ತು; ಮತ್ತು ಹಾಗೆ ಆಗಿದ್ದರೆ, ಶರಯೂ ಹಾಗು ಚಂದ್ರೂ ಇವರಿಬ್ಬರೂ ಮೋಟರಿನಲ್ಲಿ ತಿರುಗಾಡಲು ಹೊರಟದ್ದು ಹೆಚ್ಚಾಗಿ ಕಂಡುಬರುತ್ತಿತ್ತು. ಆದರೆ!—

ಆದರೆ ತದ್ವಿರುದ್ಧ ಚಮತ್ಕಾರವಾಯಿತೇನಂದರೆ, ಚಂದ್ರೂವು ವಿಲಾಯತಿಯಿಂದ ಮರಳಿ ಬಂದ ಮೇಲೆ ಏನಾದರೂ ವಿಶೇಷ ನೆವವುಂಟಾದರೆ ಮತ್ತು ಹೆಚ್ಚಾಗಿ ಆಗ್ರಹದಿಂದ ಕರೆಬಂದರೆ ಮಾತ್ರ ಆತನು ರಾಯಬಹದ್ದೂರರ ಮನೆಗೆ ಹೋಗುತ್ತಿದ್ದನು; ಮತ್ತು ಅಲ್ಲಿಗೆ ಹೋದನಂತರ ಕೂಡ ಶರಯೂಳ ಜೊತೆಗೆ ಮಾತು-ಕಥೆ ಮಾಡುವಾಗ ಆತನ ಭಾವನೆಗಳ ಉತ್ಕಟತೆಯೂ ತೋರಿ ಬಾರದಂತಾಯಿತು ವಿಲಾಯತಿಗೆ ಹೋದ ಬಳಿಕ ಶರಯೂಗೆ ಬರುತ್ತಿದ್ದ ಚಂದ್ರೂನ ಪತ್ರಗಳು ಬರಬರುತ್ತ ಕಡಿಮೆಯಾಗಹತ್ತಿದ್ದವು; ಹಾಗು ಎಷ್ಟು ಬರುತ್ತಿದ್ದವೋ ಅವು ಕೂಡ ತಾಂತ್ರಿಕ ಸಂಗತಿಯವೇ ಆಗಿರುತ್ತಿದ್ದವು. ಅವಳು ಮೊದಲು ಅವರ ಅರ್ಥವನ್ನು ಚಂದ್ರೂ ಅಭ್ಯಾಸದಲ್ಲಿ ನಿರತನಾದ್ದರಿಂದ ಪತ್ರಗಳನ್ನು ಸವಿಸ್ತರವಾಗಿ ಬರೆಯಲಿಕ್ಕೆ ಆತನಿಗೆ ಸಮಯ ದೊರೆಯುತ್ತಿರಲಿಕ್ಕಿಲ್ಲವೆಂದೂ ಅಲ್ಲದೆ ಪ್ರೇಮಪತ್ರಗಳಾದರೂ ಅವುಗಳಲ್ಲಿ ಯಾರಾದರೂ ದಿನಾಲು ಹೊಸ ಹೊಸ ಪ್ರೇಮಕಥನವನ್ನೇನು ಮಾಡುವರು? ಎಂದೂ ಮಾಡಿದ್ದಳು; ಆದರೆ ಚಂದ್ರುವು ಮರಳಿ ಬಂದ ಬಳಿಕ ಆತನ ನಡವಳಿಕೆಯಲ್ಲಿ ಸ್ನಿಗ್ಧತೆ ಕಡಿಮೆಯಾದ ಕಾರಣವು ಆಕೆಗೆ ತಿಳಿಯದ್ದರಿಂದ ಅವಳಿಗೆ ಹಲವು ಬಗೆಯ ಸಂದೇಹವುಂಟಾಯಿತು.

ಅದಿರಲಿ. ಇಂದು ರಾಯಬಹಾದ್ದೂರರ ಮನೆಯಲ್ಲಿ ಸೇರಿದ್ದ ಸ್ತ್ರೀಯರ ಸಮೂಹದ ಕಾರ್ಯಕ್ರಮವು ಬೇರೆ ಬೇರೆ ಪ್ರಕಾರಗಳಿಂದ ನಡೆದಿತ್ತು. ಅವುಗಳಿಗಾಗಿ ಸಾರಿಸಿದ ಅಂಗಳಗಳಿಗೆ, ಉಪವನದೊಳಗಿನ ಲತಾಮಂಟಪಗಳಿಗೆ, ಪಡಸಾಲೆ-ನಡುಮನೆಗಳೊಳಗಿನ ತೂಗುಮಣೆಗಳಿಗೆ ಸಾಕಷ್ಟು ಕೆಲಸ ಸಿಕ್ಕಿತು. ಮೊದಲು ಅಣೆಕಲ್ಲು ಆಡಿದ್ದಾಯಿತು, ಘುಗಡಿಯಾಟವಾಯಿತು, ಕಥೆ ಹೇಳುವದಾಯಿತು, ಒಗಟ ಹಾಕುವುದೂ-ಒಡೆಯುವುದೂ ಆಯಿತು. ಕೊನೆಗೆ ತೂಗುಮಣೆಗಳ ಮೇಲೆ ಕುಳಿತು ಹಾಡು ಹಾಡೋಣವು ನಡೆಯಿತು. ಒಳ್ಳೇ ಮಧುರ ಕಂಠದ ಯಾವ ನಾಲ್ಕಾರು ಹುಡುಗೆಯರಿಗೆ ಆ ಹಾಡು ಹಾಡುವ ಮನ್ನಣೆ ದೊರಕಿದ್ದಿತೋ, ಅವರು ಮೊದಲು ದೇವರ ಹಾಡುಗಳನ್ನು ಹಾಡಿದರು. ಆಗ ಒಬ್ಬಳು:—'ಏನ್ರೇ, ವೃದ್ಧಾಪ್ಯದಲ್ಲಿ ನಡಬೊಗ್ಗಿದ ಬಳಿಕ ದೇವರ ಕೋಣೆಯಲ್ಲಿ ಕುಳಿತು ಹಾಡ

ತಕ್ಕಂಥ ಹಾಡುಗಳನ್ನು ನೀವೀ ಸಮಾರಂಭದಲ್ಲೇಕೆ ಹಾಡುತ್ತಿರುವಿರಿ?' ಎಂದು ಕೇಳಿದಳು. ಕೂಡಲೆ ಅವುಗಳನ್ನು ಬಿಟ್ಟು, ನಾಟಕ-ಸಿನೇಮಾದೊಳಗಿನ ಹೊಸ-ಹೊಸ ಗೀತಗಳು ಪ್ರಾರಂಭಿಸಲ್ಪಟ್ಟವು ಬಳಿಕ ಮದುವೆಯ ಹಾಡುಗಳನ್ನು ಹಾಡಬೇಕೆಂದು ಗೊತ್ತಾಯಿತು; ಕೂಡಲೆ ಕೆಲವರು ಅವುಗಳನ್ನೂ ಅಂದರು.

ಆದರೆ ಒಬ್ಬ ದಿಟ್ಟ ಹುಡುಗಿಯು ಆಕ್ಷೇಪಗೊಂಡದ್ದೇನಂದರೆ, 'ಈ ಹಾಡುಗಳನ್ನು ನಿಜವಾಗಿ ಲಗ್ನವಾದ ಮೇಲೆಯೇ ಅನ್ನತಕ್ಕದ್ದಿರುತ್ತದೆ. ಅವುಗಳನ್ನು ಈಗೆಂತು ಹಾಡುವಿರಿ? ಶರಯೊಳ ಲಗ್ನದಲ್ಲಿ ಹಾಡುವದಕ್ಕಾಯೇ ಅವುಗಳನ್ನು ಕಾದಿಡೋಣ.''

"ಹಾಗಾದರೆ ಈಗ ಅನ್ನೋಣವಾದರೂ ಏನು?'' ಎನ್ನಲು, ಒಬ್ಬಳು ಜ್ಞಾಪಿಸಿಕೊಂಡು ಒಂದು ಆಧುನಿಕ ಭಾವಗೀತವನ್ನು ಸೂಚಿಸಿದಳು. ಅದೊಂದು ಆಧುನಿಕ ಕವಿಯ ಕಾವ್ಯಗುಚ್ಛದೊಳಗಿನದಿದ್ದು, ಅದರ ಪಲ್ಲವಿಯು 'ಬೇಕೌ ಇವಳಿಗೆ ಐ ಸಿ. ಯಸ್ ।' ಎಂದಿತ್ತು. ಐ ಸಿ. ಎಸ್. ಎಂಬಕ್ಷರಗಳನ್ನು ತಪ್ಪದೆ ಬಾಯಿಪಾಠ ಹೇಳಲಿಕ್ಕೆ ಎಲ್ಲರೂ ಸಿದ್ಧರಿದ್ದರು; ಅದರಂತೆ ಆ ಗೀತದೊಳಗಿನ ಮರ್ಮ ತಿಳಿಯುವವರೂ ಅವರಲ್ಲಿ ಕೆಲವರಿದ್ದರು. ವಾಚಕರ ನೆನಪಿಗಾಗಿ ಆ ಇಡೀ ಗೀತವನ್ನೇ ಇಲ್ಲಿ ಉದ್ಧರಿಸುವೆವು:

ಬೇಕೌ ಇವಳಿಗೆ ಐ. ಸಿ. ಎಸ್ । ಸಾಕೆನಿತಿವಳಲ್ಲಿದೆ ಹುಮ್ಮಸ್ ||ಪ||
ಇವಳಿಗೆ ಬೇಕೌ ಐ. ಸಿ. ಎಸ್ ||

ನೋಡುವುದೀಕೆಯ ಸೂಕ್ಷ್ಮದ ಯಷ್ಟಿ ।
ಕುಡಿದಿಹ ಚಹದಿಂ ಬೆಳೆದಿದೆ ಕಾಂತಿ ।
ಕಣ್ಗಳಿಗಿದೆ ಕನ್ನಡಕದ ಜ್ಯೋತಿ ।
ಹವ್‌ನಾಯಿಸ್, ಇವಳಿಗೆ ಬೇಕೌ ಐ. ಸಿ. ಎಸ್ ||೧||

ಶಿಕ್ಷಿತ ಸಶಕ್ತ ತರುಣರನೆಲ್ಲಾ ।
ಈಕ್ಷಿಸುತೆಂಬಳು ರಾಕ್ಷಸರೆಲ್ಲಾ ।
ಸೂಕ್ಷ್ಮತೆಯಿಲ್ಲಾ ಮ್ಯಾನರ್ಸಿಲ್ಲಾ ।
ಇದಲೌ ಚಾಯಿಸ್, ಇವಳಿಗೆ ಬೇಕೌ ಐ. ಸಿ. ಎಸ್ ||೨||

ಸೂಟು ಬೂಟಲಿ ಪ್ರಿಯಕರ ಸನಿಹದಿ ।
ಮೋಟಾರಿಲಿ ನಾವ್ ಮೆರೆವೆವು ಥಾಟದಿ ।
ನೋಟವನಿದನೆ ಕಾಂಬಳು ನಿತ್ಯದಿ ।
ಗುಡ್ ಗ್ರೇಶಸ್, ಇವಳಿಗೆ ಬೇಕೌ ಐ. ಸಿ. ಎಸ್ ||೩||

ಗಳಿಸಿದ ಹಣವನು ಜನಕನು ಹಾಕುತೆ ।
ಅಳಿಯಗೆ ಮೋಟರು ದಕ್ಷಿಣೆ ನೀಡುತೆ ।
ಉಳಿಯದೆ ದಾಸ್ಯವ ಪೊಂದಲು ಪೂರ್ಣತೆ ।
ಇಲ್ಲೌ ವ್ಹಾಯಿಸ್, ಆದರು ಬೇಕೌ ಐ. ಸಿ. ಎಸ್ ||೪||
ಮಡಮ್ಮಳ ಸೆರೆಗೆದೆ ಹಣವದು ಹಾಳು ।
ಪಡೆಯುಳು ಖಿನ್ನತೆ ಆದರು ಕೇಳು ।
ಬಡೆತಗಳೆನಿತೊ ಸಹಿಸುವಳಿವಳು ।
ಇಲ್ಲೌ ಏನೂ ಸೆನ್ಸ, ಇವಳಿಗೆ ಬೇಕೌ ಐ. ಸಿ. ಎಸ್ ||೫||

ಈ ಹಾಡನ್ನು ಹಾಡಿದ ಬಳಿಕ ಅವರ ಮೇಲೆ ಕೆಲವು ಜನ ಕನ್ಯೆಯರು ಭಾಷ್ಯಗೆಯ್ಯಲಾರಂಭಿಸಿದರು. "ಹಾಡುವವಳೇನೋ ಗುಂಡು ಹೊಡೆದಳು; ಆದರೆ ಅದು ಬಡಿಯಲಿಲ್ಲವ್ವಾ!" ಎಂದು ಒಬ್ಬಳಂದಳು.

ಇನ್ನೊಬ್ಬಳು: "ಅದು ಹೇಗೇ?"

"ಶರಯೂಳ ಅಂಗಯಷ್ಟಿಗೆ ನಾಜೂಕವೆಂದಾರು ಅಂದಾರು? ಮೊದಲನೇ ನುಡಿಯಲ್ಲಿ ಹೇಳಿದಂತೆ ಈಕೆಯು ಎಂದೂ ಚಹವನ್ನೇ ಕುಡಿಯುವದಿಲ್ಲ. ಅದರಿಂದ ಇವಳ ದೇಹದಲ್ಲಿ ಕಾಂತಿಯೇ ಉಂಟಾಗಿದ್ದರೆ, ಅದು ಚಹದ್ದಾಗಿರದೆ, ತಾರುಣ್ಯ-ಸೌಂದರ್ಯಗಳದಾಗಿದೆ; ಮತ್ತು ಇವಳು ಕಣ್ಣಿಗೆ ಸ್ಪೆಕ್ಸಗಳನ್ನು ಹಚ್ಚುವುದಿಲ್ಲ. ಅವನ್ನಿವಳು ಹವ್ಯಾಸಕ್ಕೂ ಹಚ್ಚುವದಿಲ್ಲ; ಅವಶ್ಯವೆಂದೂ ಹಚ್ಚುವದಿಲ್ಲ. ಅದರಿಂದ ಈ ಗೀತವು ನಮ್ಮ ಶರಯೂಗೆ ಸಂಬಂಧಪಡುವುದಿಲ್ಲ."

ಮೂರನೆಯುವಳೊಬ್ಬಳು—"ಈ ಗೀತದ ಎರಡನೇ ನುಡಿಯಾದರೂ ಅದೆಲ್ಲಿ ಸಂಬಂಧಿಸುವದು?" ಇವಳ ಲಗ್ನದ ವಿಷಯ ಹೊರಟಾಗಿನಿಂದ ವಿಲಾಯತಿಗೆ ಹೋಗಿದ್ದ ಒಬ್ಬ ಯುವಕನ ಹೆಸರೇ ಕೇಳಲಾಗುತ್ತದೆ. ನಾವಂತೂ ಬೇರೆ ಯಾರ ಹೆಸರನ್ನೂ ಎಂದೂ ಕೇಳಿಲ್ಲ. ಆಂದಬಳಿಕ ಇವಳು ಇಲ್ಲಿಯ ಸಶಕ್ತ ತರುಣರಿಗೆ "ಮ್ಯಾನರ್ಸ" ಇಲ್ಲೆಂದು ಹಳಿವ ವರ್ಣನವು ಸುಳ್ಳೆಂದು ಸಿದ್ಧವಾಗುತ್ತವೆ. ಇನ್ನು ಹಾಡೆಂದರೆ ಹಾಡೇ! ಅದಕ್ಕೆ ತುದಿ-ಬುಡಗಳ ನಿಜವಾದ ಅವಶ್ಯಕತೆಯೆಂದಾದರೂ ಬೇಕಾಗುವುದೇ?"

ಮತ್ತೊಬ್ಬಳು—"ಆ ಮೂರನೇ ನುಡಿಯೂ ನಮ್ಮ ಶರಯೂಗೆ ಸಂಬಂಧಪಡುವುದಿಲ್ಲ. ಮನೆಯ ಮೋಟರವಿರಲಿಕ್ಕೆ ಶರಯೂ ಅದರಲ್ಲಿ ಕುಳಿತು ತಿರುಗಾಡಿದ್ದನ್ನು ನೀವು ಯಾರಾದರೂ ಹೆಚ್ಚಾಗಿ ನೋಡಿರುವಿರಾ? ಎಂದೂ ಕಂಡಿಲ್ಲ. ಹೀಗಿರಲು, ಗಂಡನ ಮೋಟರಿನಲ್ಲಿ ಕುಳಿತು ಅವನೊಡನೆ ತಿರುಗಾ

ಡಿದ ಕನಸು ಇವಳಿಗೆ ಬೀಳುವುದಂತೆ! ಈ ಸಂಗತಿ ಸುಳ್ಳು! ಶೀರ ಸುಳ್ಳು!!"

ಇಂಥದೇ ಆಕ್ಷೇಪವನ್ನು ಇನ್ನೊಬ್ಬಳು ನಾಲ್ಕನೇ ನುಡಿಯ ಬಗ್ಗೆಯೂ ತೆಗೆದಳು—"ಸರ ಗಂಗಾರಾಮರ ಮನೆಯಲ್ಲಿ ಅಳಿಯನಿಗೆ ಸ್ವಂತ ಮೋಟರರಿರದಿದ್ದರೆ ಮಾವನು ಮೋಟರ ಕೊಟ್ಟು ಮಗಳನ್ನು ಕೊರಳಲ್ಲಿ ಕಟ್ಟುವ ಮಾತು! ಮಾವನಿಂದ ಆತನ ಮಗಳೊಡನೆ ವರದಕ್ಷಿಣೆಯು ಅಗಣಿತ ದ್ರವ್ಯ ಮತ್ತು ಮೋಟರಗಳನ್ನು ಎತ್ತುತ್ತಿರುವ ಪೋರರು ತಮ್ಮ ಮನೆಯಿಂದ ದರಿದ್ರರಿರುತ್ತಾರೆಂಬದು ನಿಮಗೆ ಗೊತ್ತಿಲ್ಲವೊ? ಚುರುಕುಬುದ್ಧಿಯೆಂದು ಮೊದಲು ಇತ್ತ ಕಡೆಯ ದೊಡ್ಡ ದೊಡ್ಡ ಪರೀಕ್ಷೆಗಳು ಪಾಸಾಗುವವು; ಬಳಿಕ ಹುಡುಗನು ಬುದ್ಧಿವಂತನೆಂದು ಕೆಲವು ಮಂದಿ ಧನಿಕರು ಅವನ ಮೇಲೆ ಕೃಪೆಯಿಟ್ಟು ಅವನಿಗೆ ಸಹಾಯ ಇಲ್ಲವೆ ಸಾಲಕೊಡುತ್ತಾರೆ. ಆಗ ಆತನು ಎಷ್ಟು ದೀನನಾಗಿರುತ್ತಾನೆ? ವಿಲಾಯತಿಗೆ ಹೋದ ಬಳಿಕ ಅಲ್ಲಿಯೂ ದೈವವು ಅವನಿಗೆ ಕೈಕೊಟ್ಟು ಅವನ ಆಯ್. ಸಿ. ಎಸ್. ಪರೀಕ್ಷೆ ಪಾಸಮಾಡಿಸುತ್ತದೆ; ಆದರೆ ಮುಂದೇನು? ಅವನಾಗುವನು ಸೊಕ್ಕಿನ ಜಗದಳಿಯನು! ಲಗ್ನದ ಸಂತೆಯಲ್ಲಿ ಒಳ್ಳೇ ಅಂಗಡಿಯೇ ಹೂಡಿ ಕೂರುವನು! ಭಾವೀ ಮಾವನ ವರದಕ್ಷಿಣೆಯ ಲಿಲಾವು ಮಾಡಿ, ಬಳಿಕ ಈ ದರಿದ್ರನಾರಾಯಣನು ಲಕ್ಷಾಧಿಪತಿಯಾಗಬೇಕು! ಆದರೇನ್ರೇ, ಗರ್ಭಶ್ರೀಮಂತರ ಪಾಸಂಗಕ್ಕಾದರೂ ಅವನು ಹತ್ತುವನೇ? ಗಂಗಾರಾಮಸಾಹೇಬರ ಚಂದೂಲಾಲರು ವಿಲಾಯತಿಗೆ ಹೋಗುವಾಗ ಅವರೇನೂ ಭಿಕ್ಷೆಬೇಡಿ ಇಲ್ಲವೆ ಸಾಲಕೊಯ್ದು ಹೋಗಲಿಲ್ಲ. ನಾಲ್ಕುವರ್ಷಗಳವರೆಗೆ ತಂದೆಯು ಮಗನ ಮೇಲೆ ದುಡ್ಡಿನ ಅಭಿಷೇಕವನ್ನೇ ನಡೆಸಿದ್ದನು! ಅಂದರೇನು? ತಂದೆಯುಮನೆಯ ದುಡ್ಡು ಸುರುವಿ, ಮೋಟರಿನ ವರದಕ್ಷಿಣೆ ಕೊಟ್ಟು, ಗುಲಾಮಳಂತೆ ತನ್ನನ್ನು ಮಾರಿಕೊಳ್ಳುವ ಹುಡುಗಿಯು ನಮ್ಮ ಶರಯೂ ಅಲ್ಲವೇ ಅಲ್ಲವೆಂಬದನ್ನು ಎಲ್ಲರೂ ಖಂಡಿತವಾಗಿ ತಿಳಿಯಿರಿ!"

ಗಂಗಾರಾಮಸಾಹೇಬರು ಮೊದಲೇ ಅತಿ ಧನಾಢ್ಯರಿರುವದರಿಂದ, ಅವರಿಗೆ ಯಾವ ಧನಿಕ ಮಾವನ ಮನೆಯ ವರದಕ್ಷಿಣೆಯ ಲೋಭವೂ ಇಲ್ಲ; ಮತ್ತು ಯಾವ ಹುಡುಗನು ಗರ್ಭಶ್ರೀಮಂತನಿರುವನೋ, ಆತನು ಕೈಗಡದ ದುಡ್ಡಿನ ಮದದಿಂದ ಕೊಬ್ಬಿ ತನ್ನ ಹೆಂಡತಿಯನ್ನು ಗುಲಾಮರಂತೆ ನಡೆಸಿಕೊಳ್ಳುವುದೂ ಇಲ್ಲ. ಇವೆರಡೂ ಮನೆತನಗಳು ಒಂದೇ ಬಗೆಯ ಶ್ರೀಮಂತಿಕೆಯುವಾಗಿವೆ. ಇನ್ನು ಶರಯೂಗೆ ಹೊಸಮನೆಯಲ್ಲಿ 'ವ್ಹಾಯಿಸ್' ಎಷ್ಟಿದ್ದೀತೆಂಬದು ತನ್ನಷ್ಟಕ್ಕೆ ತಾನೇ ಗೊತ್ತಾಗುವದು; ಆದರೆ ಈಕೆಯ ಕೈಯ ಪೆಟ್ಟುಗಳನ್ನು ನಿಮ್ಮ-ನಮ್ಮಗಳಲ್ಲಿಯ ಯಾರ್‍ಯಾರು ಆಗಾಗ್ಗೆ ತಿಂದಿರುವೆವೋ ಅಥವಾ ಕಿವಿ

ಗಳನ್ನು ಹಿಂಡಿಸಿಕೊಂಡಿರುವೆವೋ ಅವರೆಲ್ಲರಿಗೆ ಶರಯೂ ಕೇವಲ ಬೆಟ್ಟೇಬೆನಕ ಳಲ್ಲವೆಂಬದು ಚೆನ್ನಾಗಿ ಅವಗತವಾಗಿದ್ದೀತು; ಮತ್ತು "ವ್ಹಾಯಿಸ" ಅಂದರೆ ಬರಿಯ ಸಪ್ಪಳ-ಧ್ವನಿ. ಇದು ಇಬ್ಬರಲ್ಲಿ ಯಾರದು ದೊಡ್ಡದೆಂಬದು ಲಗ್ನದಲ್ಲಿ ಗಂಡ ಹೆಂಡಿರು ಹೆಸರು ಹೇಳುವಾಗ ತಾನೇ ಗೊತ್ತಾದೀತು."

ಕಡೆಗೊಬ್ಬ ಚುಚುಂದ್ರಿಯಾದ ಕನ್ಯೆಯು ಮುಂಬಂದು—"ಇನ್ನು ಕೊನೆಯ ನುಡಿಯ ಬಗ್ಗೆ ನಾನು ಹೇಳುವೆನು" ಎಂದಂದಳು. ಶರಯೂ ಇದುವರೆಗೂ ಸುಮ್ಮನಿದ್ದಳು. ಅವಳು ತನ್ನಲ್ಲಿಯೇ ನಗುತ್ತಿದ್ದಳು. "ಖೋಡಿ ಹುಡುಗರಿವು! ತೂಗುಮಣೆಯ ಮೇಲೆ ಕುಳಿತದ್ದರಿಂದ, ಇವರ ಬಾಯಿ ಬೇಕಾದ ಹಾಗೆ ಬೊಗಳಹತ್ತಿದೆ. ಇವರ ಬಾಯಿಗೆ ಯಾರು ಹತ್ತಬೇಕು?" ಎಂದಂದು ಸುಮ್ಮನಿದ್ದಳು; ಆದರೆ ಆ ಹಾಡಿನ ಮೇಲಿನ ಭಾಷ್ಯವಿನ್ನೂ ಮುಗಿಯದ್ದನ್ನು ನೋಡಿ, ಅವಳು ತೂಗುಮಣೆಯಮೇಲೆ ಕುಳಿತಿದ್ದ ಹುಡುಗೆಯರ ಎದುರಿಗೆ ಹೋಗಿ ನಿಂತುಕೊಂಡಳು; ಮತ್ತು ಈ ಮೊದಲಿನ ಹುಡುಗೆಯು ಹೇಳಿದಂತೆ ತಾನು ನಿರುಪದ್ರವೀ ಬೆಟ್ಟೇಬೆನಕಳಲ್ಲೆಂಬದನ್ನು ಅವಳು ಪ್ರತ್ಯಕ್ಷ ತೋರಿಸಿಕೊಟ್ಟಳು. ಸಾಲಿನೊಳಗಿನ ಎಲ್ಲ ಹುಡುಗೆಯರ ಗಲ್ಲಗಳ ಮೇಲೆ ಒಬ್ಬರ ಹಿಂದೊಬ್ಬರಂತೆ ತಪರಾಕಿ ಕೊಟ್ಟಳು; ಗಲ್ಲ ಹಿಂಡಿದಳು; ಕಿವಿ ಹಿಂಡಿದಳು; ಹಾಗು ನಕ್ಕು—"ನೀವೆಲ್ಲರೂ ಸೇರಿ ಹೀಗೆ ನನ್ನ ಚೇಷ್ಟೆ ಮಾಡಹತ್ತಿರುವಿರಾ ಸೆಟವಿಯಿರಾ! ಇದಕ್ಕಾಗಿಯೇ ಇಂದು ನಿಮ್ಮನ್ನಿಲ್ಲಿ ಕರೆಯಿಸಲಾಗಿದೆಯೊ?" ಎಂದಂದು, ಅತ್ತಿತ್ತ ಹೊರಳಿ ನೋಡಿ:"ನನಗೆ ಆಯ್. ಸಿ. ಎಸ್. ಬೇಕಾಗಿರಬಹುದು; ಅಥವಾ ಬೇಡಾಗಿರಬಹುದು. ನಾನು ಆತನ ಗುಲಾಮಳಾದೇನು; ಇಲ್ಲವೆ ಅವನನ್ನೇ ನನ್ನ ಗುಲಾಮನನ್ನಾಗಿ ಮಾಡೇನು. ನಾನು ಮೋಟರಿನಲ್ಲಿ ತಿರುಗಾಡಲಿಕ್ಕೆ ಹೋದೇನು; ಅಥವಾ ನಡೆದು ಹೋ-ದೇನು ನನ್ನ ಆ ಭಾವೀ ಚರಿತ್ರವರ್ಣನದ ಅಧಿಕಾರವನ್ನು ನಿಮಗಾರು ಕೊಟ್ಟರೀ? ಬಾಯಿಗೆ ಯಾವುದೊಂದು ಹಾಡು ಬಂದಿತೆಂದು, ಅದನ್ನು ಸಹಜ ವಿನೋದದಿಂದ ಮೋಜಿಗಾಗಿ ಅಂದಾರೆಂದು ನಾನಿದುವರೆಗೆ ಸುಮ್ಮನೆ ಕುಳಿತು ಕೇಳಿಕೊಂಡೆನು; ಆದರೆ ಈ ಖೋಡಿಗಳು ಆ ಹಾಡಿನ ಹಾಗು ಅದರೊಡನೆಯೇ ನನ್ನ ಛಲನವನ್ನೇ ನಡಿಸಿಬಿಟ್ಟರಲ್ಲ!" ಎಂದಂದು ಅವಳು ಖೊಳ್ಳೆಂದು ನಕ್ಕಳು; ಹಾಗು ತಾನೂ ಆ ತೂಗುಮಣೆಯ ಮೇಲಿನ ಹುಡುಗೆಯರ ಗುಂಪಿನಲ್ಲಿ ಸೇರಿ ಕುಳಿತು, ಎರಡು ಕೈಗಳನ್ನು ಚಾಚಿ, ಅವುಗಳಲ್ಲಿ ದೊರೆತಷ್ಟು ಮಂದಿ ಹುಡುಗೆಯರನ್ನು ತಬ್ಬಿಕೊಂಡಳು. ಆ ಹಾಡು ಮುಗಿದ ಬಳಿಕ ಯಾವಳು ಮೊಟ್ಟಮೊದಲು ಮಾತಾಡಿದ್ದಳೋ ಅವಳೇ ಮುಂಬಂದು,

ನಾನು ನಿಮಗೆ "ಹಾಡಿನ ಗುಂಡು ಹೊಡೆದಿರಿ; ಆದರೆ ಗುರಿ ತಪ್ಪಿತೆ"ಂದು ಹೇಳಿರಲಿಲ್ಲವೆ? ಎಂದಂದಳು.

ಆದರೆ ಇವೆಲ್ಲ ಆ ಹಾಡಿನ ಉಪಾಖ್ಯಾನವಾಯಿತು. ಮುಖ್ಯ ಆಖ್ಯಾನ ವೆಂದರೆ, ಯಾವ ಒಂದು ಸಂಗತಿಯ ಮೂಲಕ ಚಂದೂಲಾಲ ಮತ್ತು ಶರಯೂ ಇವರ ಲಗ್ನವಾಗುವದು ತಡೆದು ನಿಂತಿದ್ದಿತೋ ಆ ಸಂಗತಿಯೆಂದರೆ, ವರನ ಆಯ್. ಸಿ. ಎಸ್. ಪರೀಕ್ಷೆ ಪಾಸಾಗೋಣವು. ಈಗ ಅದು ಆಗಿ ಹೋಗಿತ್ತು. ಅದರಿಂದ ಲಗ್ನ ಸಮಾರಂಭವಿನ್ನು ನಿಶ್ಚಯಪೂರ್ವಕ ಆಗುವದು. ಮುಹೂರ್ತ ಹೊರಡಲಿಕ್ಕೆ ನಾಲ್ಕು ದಿನ ಹಿಂದುಮುಂದಾದೀತಷ್ಟೇ. ಅದರಿಂದ ಲಗ್ನಕ್ಕೆ ಮುಂಚೆ ಗಡಿಗೆನೀರು ಮಾಡುವಂತೆ, ಶರಯೂಳ ಗೆಳತಿಯರು ಮೇಲೆ ಮೇಲೆ ನೋಡುವವರಿಗೆ ಸರ್ವಸಾಧಾರಣವಾದ ಅರಿಷಿಣ-ಕುಂಕುಮವೆಂದೂ ಮನಸ್ಸಿನಿಂದ ಈ ಗಡಿಗೆನೀರೆಂದೂ ಯೋಜಿಸಿ, ಈ ಸಮಾರಂಭವೆಸಗಿದ್ದರು; ಮತ್ತು ಅದನ್ನು ಮಾಡಲಿಕ್ಕೆ ತಮ್ಮ ವಾಡೆಯೇ ಯೋಗ್ಯವು. ಏಕೆಂದರೆ, ಹುಡುಗರ ಸಮೂಹವು ಕೂಡಲಿಕ್ಕೂ, ಆಡಲಿಕ್ಕೂ, ವಿಹರಿಸಲಿಕ್ಕೂ, ಊಟ-ಶಿಂಡಿಗಳಿಗೂ ತಮ್ಮಲ್ಲಿಯೇ ಚೆನ್ನಾಗಾದೀತೆಂದು ಆ ಸಮೂಹಕ್ಕೆ ಗಡಿಗೆನೀರಿನ ನಾಮಧೇಯವೆಸಗದೆ, ಆದರೆ ಮನಸ್ಸಿನಲ್ಲಿ ಮಾತ್ರ ಅದೇ ಕಲ್ಪನೆಯನ್ನು ಯೋಜಿಸಿ, ಶರಯೂಳ ತಾಯಿಯು ಆ ಸಮಾರಂಭವನ್ನು ತಮ್ಮ ಮನೆಯಲ್ಲೇ ಜರುಗಿಸಿದ್ದಳು.

---

### ಮೋದ ಹೊಡಹಾಉಸಳ ಪತ್ರ

ಚಂದೂನ ಅಭಿನಂದನಕ್ಕಾಗಿ ಗಂಗಾರಾಮರಿಗೆ ಏನು ಮಾಡಲಿ-ಏನು ಬಿಡಲಿ ಎಂಬಂತಾಗಿತ್ತು. ಆ ಎಲ್ಲ ಕಾರ್ಯಕ್ರಮದ ಸೂತ್ರಗಳನ್ನು ಅವರು ತಮ್ಮ ಕೈಯಲ್ಲಿಯೇ ಇಟ್ಟುಕೊಂಡಿದ್ದರು. ಮಾಸಾಹೇಬರು ಭಾವಿಕರು. ಅವರ ಆನಂದವೇನೂ ಕಡಿಮೆಯಾಗಿರಲಿಲ್ಲ; ಆದರೆ ಅವರ ಭಾವನೆಗಳು ಉಚ್ಛೃಂಖಲವಾಗಿರಲಿಲ್ಲ. ಯಾರಿಗೂ ತಿಳಿಯದಂತೆ ಅವರು ಚಂದೂನನ್ನು ಒತ್ತಟ್ಟಿಗೆ ಕರೆದು, ಅವನ ದೃಷ್ಟಿ ತೆಗೆದರು! ಪೂಜಾರಿಯಿಂದ ದೇವರಿಗೆ ಮಹಾ ಪೂಜೆ ಮಾಡಿಸಿದರು. ಪಂಚಾಮೃತದ ಮಹಾನೈವೇದ್ಯ ತೋರಿಸಿದರು. ಅದಕ್ಕಾಗಿ ಮನೆಯೊಳಗಿನ ಬೆಳ್ಳಿಯ ಕೊಡ ಮೊದಲು ಮಾಡಿಕೊಂಡು ಎಲ್ಲ ಸಲಕರಣೆಗಳು ಸಿದ್ಧವಾಗಿರಿಸಲ್ಪಟ್ಟಿದ್ದವು. ಅವರು ಕೆಲವು ದಾನ-ದಕ್ಷಿಣೆ ಗಳನ್ನೂ ಹಂಚಿದರು, ಸುವಾಸಿನಿಯರಿಗೆ ಸೀರೆ ಖಣಗಳನ್ನೂ ಕೊಟ್ಟರು; ಆದರೆ ಅವನ್ನೆಲ್ಲ ಅವರು ಹೆಚ್ಚಾಗಿ ಗುಲ್ಲು ಎಬ್ಬಿಸದಂತೆ ಮಾಡಿದರು. ತಮ್ಮ

ಗಂಡ ಮತ್ತು ಮಗ ಇವರ ಮೇಲಿನ ಪ್ರೇಮದ ಹೊರತು ಮಿಕ್ಕ ಎಲ್ಲ ಬಾಬು ಗಳಲ್ಲಿ ತಿಳಿವಳಿಕೆಯುವರಿಗೆ ಒಪ್ಪುವಂತೆ ಅವರಲ್ಲಿಯ ಸುಗುಣಗಳು ಕಂಡು ಬರುತ್ತಿದ್ದವು. ಅವರಿಗೆ ಅಡಿಗೆಮನೆ-ನಡುಮನೆಗಳ ಹೊರಗಿನ ಸಮಾರಂಭ ಗಳಲ್ಲಿ ಹೆಚ್ಚಾಗಿ ಲಕ್ಷ್ಯಗೊಡಲಿಕ್ಕೆ ಸರ ಗಂಗಾರಾಮರು ಅವಕಾಶವಿತ್ತಿರಲಿಲ್ಲ; ಅದರಿಂದಲೇ ಅವರು ಜೊಯ್ಸನನ್ನು ಕರೆಯಿಸಿ ಚಂದೂನ ಲಗ್ನಕ್ಕೆ ಒಳ್ಳೇ ಮುಹೂರ್ತವಾವುದು? ಹಳೇ-ಹೊಸ ಒಡವೆಗಳ ಯೋಜನೆಯನ್ನು ಹೇಗೆ ಮಾಡಬೇಕು? ಉಪಯೋಗಿಸುವ ಹಾಗು ಮುಯ್ಯದ ಯಾವ ಯಾವ ಸನಗುಗಳನ್ನು ಕೊಳ್ಳಬೇಕು? ಮುಂತಾದ ಸಂಗತಿಗಳ ಕಡೆಗೆ ತಮ್ಮ ಲಕ್ಷ್ಯ ವಿರಿಸಿದ್ದರು.

ಸರ ಗಂಗಾರಾಮರು ಮಾತ್ರ ಒಂದೇಸವನೆ ಗೊಂದಲವನ್ನೇ ಎಬ್ಬಿಸಿ ಬಿಟ್ಟಿದ್ದರು. ಇಡಿ ವಾಡೆಯು ಶೃಂಗರಿಸಲಾಯಿತು. ಮಂಟಪಗಳು ನಿಲ್ಲಿಸ ಲಾದವು. ಹಳೇ-ಹೊಸ ಚಾವಡಿಗಳ ಯೋಜನೆಗೆ ಪ್ರಾರಂಭವಾಯಿತು. ತಂತಿ, ಕಾಗದಗಳು ಬರಹೋಗಹತ್ತಿದವು. ಸರ ಗಂಗಾರಾಮರಿಗೆ ಬೇರೆ ಕಡೆ ಯುವರಿಂದ ಬರುವ ಅಭಿನಂದನದ ತಂತಿಗಳಿಗಿಂತ ಅವರು ಸ್ವತಃ ಹೊರಗೆ ಕಳಿ ಸಿದ ಆನಂದಪ್ರದರ್ಶಕ ತಂತಿಗಳ ಸಂಖ್ಯೆಯೇ ಹೆಚ್ಚಾಗಿತ್ತು. ನಂದಭುವನ ಪ್ರಾಸಾದದ ಮ್ಯಾನೇಜರನು ಹೊರಗಿನ ವ್ಯವಸ್ಥೆ ಮಾಡುವದಕ್ಕೆ ತೊಡಗಿದ್ದರೆ, ಒಳಗೆ ಸರ ಸಾಹೇಬರೂ ಚಂದೂಲಾಲನೂ ತಮ್ಮ ತಮ್ಮ ಕಚೇರಿಗಳ ಕೋಣೆಗಳಲ್ಲಿ ಕುಳಿತು, ಬಂದ ಕಾಗದ-ಪತ್ರಗಳನ್ನು ಓದಿ ನೋಡುವಲ್ಲಿ ಹಾಗು ಬರೆಯುವಲ್ಲಿ ಮಗ್ನರಾಗಿದ್ದರು

ಸರ ಸಾಹೇಬರು ಚಂದೂಲಾಲನ ಪರೀಕ್ಷೆ ಪಾಸಾದ ತಂತಿಗಳನ್ನು ಕಳಿಸಿದ್ದರಲ್ಲದೆ, ಕೆಲವು ಪತ್ರಗಳನ್ನು ಕಳಿಸುವದೂ ಅವರಿಗೆ ಆವಶ್ಯಕವೆನಿಸು ತ್ತಿತ್ತು; ಮತ್ತು ಅವುಗಳನ್ನೇ ಅವರು ಆಗ ಬರೆಯುತ್ತಿದ್ದರು. ಎಲ್ಲಕ್ಕೂ ಮುಖ್ಯವಾದ ಪತ್ರವೆಂದು ತಮ್ಮ ಪ್ರಾಂತದ ಗವರ್ನರನಿಗೆ ಅವರು ಬರೆದ ಪತ್ರವು ಹೀಗಿತ್ತು:—

My dear respected Your Excellency,

I am graciously pleased to congratulate you for the conquest of my son Chandulal in the I. C. S. examination. He is a third in the class. God gives me great son, and now gives British Government great officer. He will face Your Excellency

in few days and get orders of appointment. I hope he will receive your benefactions and stimulants.

ಬಳಿಕ ಅವರು ತಮ್ಮ ಸಲಿಗೆಯುವನಾದ ಆ ಜಿಲ್ಹೆಯ ಕಲೆಕ್ಟರನಿಗೆ ಹೀಗೆಂದು ಬರೆದರು:—

Dear Mr. Osborn,

Congratulations, my dear man, for my son passing your own examination. I hope you will one day come right-about-turn to Chodyapura, and make me opportunist for introducing him to you. Bring with you large party for entertainment. My palace will give you full commode for any number. There will be grand feast and afterwards combustibles in all colours. If no tour progrmme fixed, you can easily manufacture special business to please me. My son may become your Assistant Collector, and then you will be his father and not me. Give my salams and secret inquiries to madam sab.

ಅವರು ಮೂರನೇ ಪತ್ರವನ್ನು ಪೋಲೀಸ ಚೀಫ ಸಾಹೇಬನಿಗೆ ಬರೆದರು. ಅದರ ನಕಲನ್ನು ಇಲ್ಲಿ ಕೊಟ್ಟಿದೆ:—

Oh Bhai Simcox,

Shake hands with this your Pagal friend. my son has toppled the ladder of glory and made me his father bahoot-khoosh, bahoot-khoosh! Surely you never want special iavitation to come to my house for any importent occasion and eat, drink and make merry. Your badmash police work go hang for that day. D'ont forget to bring your sweet young wife with you. My son also is going soon to take a bridesmaid to his bed. Send my boy all

your gratitude and good feeling for a brother Dist. Officer, though remember he is I. C. S. man, and may have a right to tup you as superior one of these days.

(ಮೇಲಿನ ಮೂರೂ ಪತ್ರಗಳನ್ನು ಮೂಲ ಇಂಗ್ಲಿಷಿನಲ್ಲಿಯೇ ಓದದ ಹೊರತು ಅವುಗಳ ಸ್ವಾರಸ್ಯವು ತಿಳಿಯಲಿಕ್ಕಿಲ್ಲ. ಅಂತೆಯೇ ಅವುಗಳ ಭಾಷಾಂತರವನ್ನು ಇಲ್ಲಿ ಕೊಟ್ಟಿರುವುದಿಲ್ಲ. ಬರಿಯ ಕನ್ನಡ ವಾಚಕರು ಇವುಗಳಿಗೆ ಎರವಾಗಬಹುದು; ಆದರೆ ಅದಕ್ಕೆ ನಮ್ಮ ಉಪಾಯವಿಲ್ಲದಾಗಿದೆ.)

ಖುದ್ದ ಗಂಗಾರಾಮರ ಹೆಸರಿಗೆ ಬಂದ ತಂತಿ-ಕಾಗದಗಳನ್ನು ಅವರ ಕಡೆಗೇ ಒಯ್ದು ಕೊಡಲಾಗುತ್ತಿತ್ತು. ಅವುಗಳಲ್ಲಿಯ ಪ್ರತಿಯೊಂದು ಓದಿಯಾದ ಕಾಗದವನ್ನು ಅವರು ಹಣೆಗೆ ಹಚ್ಚಿಕೊಂಡು ತಂತಿಯ ಫೈಲಿಗೆ ಸೇರಿಸುತ್ತಿದ್ದರು. ಎಲ್ಲವನ್ನೂ ಓದಿ ಓದಿ ಸೇರಿಸಿದ ಬಳಿಕ ಅವನ್ನು ಚಂದೂಲಾಲನಿಗೆ ತೋರಿಸಿ, ನಂತರ ಅವುಗಳ ಬಗ್ಗೆ ಏನು ಮಾಡಬೇಕೋ ಅದನ್ನು ಮಾಡುವದವರ ವಿಚಾರವಿದ್ದಿತು.

ಚಂದೂಲಾಲನ ಹೆಸರಿಗೆ ಬರುತ್ತಿದ್ದ ತಂತಿ ಮತ್ತು ಕಾಗದಗಳು ನೆಟ್ಟಗೆ ಅವನ ಕಡೆಗೇ ಒಯ್ದು ಕೊಡಲ್ಪಡುತ್ತಿದ್ದವು. ಔಪಚಾರಿಕ ಅಭಿನಂದನದ ತಂತಿಗಳನ್ನೂ ಕಾಗದಗಳನ್ನೂ ತಟ್ಟನೆ ಓದಿ, ಅವುಗಳನ್ನೆಲ್ಲ ಮೇಜಿನ ಮೇಲಿನ ಒಂದು ಮುಚ್ಚಳಿರದ ಬೆತ್ತದ ಬಾಸ್ಕೇಟಿನಲ್ಲಿ ಅವನು ತುಸ ತುಚ್ಛತೆಯಿಂದಲೇ ಚೆಲ್ಲುತ್ತಿದ್ದನು. ಅನೌಪಚಾರಿಕಗಳಾದ ಕೆಲವು ಪತ್ರಗಳೂ ಬಂದಿದ್ದವು. ಅವುಗಳನ್ನು ಅವನು ಲಕ್ಷ್ಯಪೂರ್ವಕವಾಗಿ ಓದಿದನು; ಮತ್ತು ಅವುಗಳನ್ನು ಒಂದು ಪಕ್ಕದಲ್ಲಿ ಇರಿಸಿದನು; ಆದರೆ ಇಂದು ವಿಲಾಯತಿಯಿಂದ ಟಪಾಲು ಬರುವ ದಿನವಾಗಿತ್ತೆಂಬದು ಸಂಪೂರ್ಣ ಲಕ್ಷ್ಯದಲ್ಲಿದ್ದ ಮೂಲಕ, ಆ ಟಪಾಲಿನಿಂದ ಬರುವ ಕಾಗದಗಳ ಕಡೆಗೇ ಆತನು ಟಕ್ಕುಹಿಡಿದು ಕುಳಿತುಕೊಂಡಿದ್ದನು. ಪರೀಕ್ಷೆ ಪಾಸಾದ ತಂತಿಯು ವಿಲಾಯತಿಯೊಳಗಿನ ಒಬ್ಬ ಹಿಂದೀ ಮಿತ್ರನಿಂದ ಅಂದರೆ, ಉದಯಶಂಕರನಿಂದ ಬಂದ ಮೇಲೆ ಇವನು ತತ್‍ಕ್ಷಣವೇ ಒಂದು ಆಭಾರಪ್ರದರ್ಶಕ ತಂತಿಯನ್ನು ಅವನಿಗೆ ಕಳಿಸಿದನು; ಆದರೆ ಅದರೊಡನೆಯೇ ಮತ್ತೊಂದು ಬಹು ಮಹತ್ವದ ತಂತಿಯನ್ನು ವಿಲಾಯತಿಯೊಳಗಿನ ಬೇರೊಂದು ವ್ಯಕ್ತಿಗೆ ಇವನು ಕಳಿಸಿದನು. ಅವನು ಅದರ ಉತ್ತರದ ನಿರೀಕ್ಷಣೆಯನ್ನೇ ಈದಿನ ಆತುರದಿಂದ ಮಾಡುತ್ತಲಿದ್ದನು; ಆದರೆ ೧೭-೧೮ ದಿನಗಳ ಮುಂಚೆ ವಿಲಾಯತಿಯಿಂದ ಹೊರಟಿರಬೇಕಾದ ಹಾಗು ಅಂಥ ಮಹತ್ವದ್ದೇ

ಆದ ಆ ಎರಡನೇ ವ್ಯಕ್ತಿಯ ಪತ್ರವು ಇಂದಿಗೆ ಬರಬೇಕಾಗಿತ್ತು; ಮತ್ತು ಚಂದೂಲಾಲನ ದೃಷ್ಟಿಯು ಅದರ ಕಡೆಗೇ ಹೆಚ್ಚಾಗಿ ವೇಧಿಸಿತ್ತು.

ಆತನು ಆ ವ್ಯಗ್ರಮನಃಸ್ಥಿತಿಯಲ್ಲಿ ಕೊಂಚ ತ್ರಸ್ತನಾಗಿದ್ದನು. ಅದರಿಂದ ಯಾರಾದರೂ ಬೇರೆ ಕೆಲಸದ ಬಗ್ಗೆ ಆತನನ್ನು ಬಂದು ಕೇಳಿದರೆಂದರೆ, ಅವನು ಕವ್ ಬವ್ ಎಂದಂದು ಮತ್ತು 'ದುರುತ್ತರಗಳನ್ನು ಕೊಟ್ಟು, ಅವರನ್ನು ದಾರಿಗೆ ಹಚ್ಚುತ್ತಿದ್ದನು.

"ಸಾಹೇಬ, ಕುದುರೆ ಸಿದ್ಧವಾಗಿದೆ. ತರಲೋ?"

" ಆ ಕುದುರೆಯೂ ನೀನೂ ಸಾಯಿರಿ! ಈಗ ಇಲ್ಲಿ ಬರಲಿಕ್ಕೆ ನಿನಗಾರು ಹೇಳಿದರು? ಸವಾರಿಗೆ ಹೋಗುವ ವೇಳೆಯು ಆಗಲೇ ಮೀರಿಹೋಗಿದೆಯೆಂಬದು ಕತ್ತೇ, ನಿನಗೆ ತಿಳಿಯುವದಿಲ್ಲವೆ? ಕಣ್ಣು ಕಿತ್ತಿ ಆ ಗಡಿಯಾರದ ಕಡೆಗೆ ನೋಡು; ಅಂದರೆ ತಿಳಿದೀತು."

ಕುದುರೇ ಜವಾನನು ಹೊರಟುಹೋದನು. ಬಟ್ಲರನು-ಚಹ ತರಲೇ? ಎಂದು ಕೇಳಲು, ಅವನಿಗೆ ದೊರೆತ ಉತ್ತರವೇನಂದರೆ 'ಯೂ ಬ್ರೂಟ! ನಾನು ಹಗಲೆಲ್ಲ ಒಂದೇಸವನೆ ಚಹವನ್ನೇ ಕುಡಿಯುತ್ತ ಕುಳಿತಿರುತ್ತೇನೇನೊ? ಸವಾರಿಗೆ ಹೋಗದೆ ಇದ್ದ ನನ್ನನ್ನು ಕಂಡ ಇವನು ಚಹ ಕೇಳಲಿಕ್ಕೆ ಬಂದನು! ಮಾಡಿಬಿಟ್ಟದ್ದರೆ ಟಾಮಿಗೆ (ನಾಯಿಗೆ) ಕುಡಿಸು ಹೋಗು!"

ಬಿಂಬೆಯು ಸಹಜವಾಗಿ ಬಂದು ಇಣುಕಿ ನೋಡಿ—"ಅಣ್ಣಾ, ಇಂದು ಹೊರಗೆಲ್ಲಿಯೂ ಅಡ್ಡಾಡಲಿಕ್ಕೇಕೆ ಹೋಗಿಲ್ಲ? ನಿನ್ನ ಮೋಟರು ತೆರವಿದ್ದರೆ ನಾನು ಶರಯೂಳೆಡೆಗೆ ಹೋಗಿ ಬರಬೇಕೆಂದಿದ್ದೇನೆ"

ಅವಳಿಗೆ ದೊರೆತ ಉತ್ತರವು ತುಸ ಸೌಮ್ಯವೇ ಆಗಿತ್ತು: "ತಕ್ಕೊಂಡು ಹೋಗು, ಮೋಟರು ತೆರವೇ ಇದೆ; ಆದರೆ ಹಗಲೆಲ್ಲ ಶರಯೂಳ ಹತ್ತರ ಏನು ಕೆಲಸ? ಗೆಳತಿಯ ಬಳಿಗಾದರೂ ನಿಯಮಿತವಾಗಿಯೇ ಹೋಗುತ್ತಿರಬೇಕು."

"ಹೌದೋ; ಆದರೆ ಅವ್ವನು ಅವರ ಮನೆಗೆ ಹೋಗಿ, ಮುತ್ತಿನ ಬಳೆಗಾಗಿ ಶರಯೂಳ ಕೈ ಅಳತೆ ತಕ್ಕೊಂಡು ಬಾ, ಎಂದು ಹೇಳಿದ್ದರಿಂದ ಹೋಗಬೇಡವೇ?"

"ಹೀಗೆ ಏನು? ಹಾಗಾದರೆ ಹೋಗಲೇಬೇಡವೆಂದು ನಾನು ಹೇಳುತ್ತೇನೆ. ಬಳೆ-ಗಿಳೆಗಳ ಬಗ್ಗೆ ಯಾರ ಯಾವ ಅಳತೆಗಳನ್ನೂ ಈಗಾಗಲೇ ತಕ್ಕೊಳ್ಳುವ ಹಾಳು ಉಸಾಬರಿಯನ್ನೇಕೆ ನಡೆಸಿದ್ದೀರಿ? ಮತ್ತು ನಮ್ಮ ಮನೆಯಲ್ಲಿ ಮುತ್ತಿನ ಹಳೇ ಬಳೆಗಳೇನು ಕಡಿಮೆಯಾಗಿವೆಯೆಂದು ಹೊಸವು ಮಾಡಿಸುವುದೆ? ಇದಕ್ಕಾಗಿ ಹೋಗುವುದೇ ಬೇಡ; ಮತ್ತೂ ತಂಗೀ, ನಿನಗೆ ತಿಳಿಸಲಿಕ್ಕೆ

ಮರೆತೆನು. ಅಲ್ಪಾವಧಿಯಲ್ಲೇ ನನಗೆ ಕ್ಲಬ್ಬಿಗೆ ಹೋಗಬೇಕಾದೀತು. ಅದಕ್ಕಾಗಿ ಮೋಟರಬೇಕಾಗುವುದು ಕಾರಣ ನೀನದನ್ನೀಗ ಒಯ್ಯಬೇಡ."

ಕೆಲ ಹೊತ್ತಿನ ಮೇಲೆ ಸ್ವಂತ ಮಾಸಾಹೇಬರೇ ಅಲ್ಲಿಗೆ ಬಂದರು. ತನ್ನ ತಾಯಿಯು ಕೋಣೆಯೊಳಗೆ ಬಂದು ಖುರ್ಚಿಯ ಮೇಲೆ ಕುಳಿತು ಮಾತಾಡಹತ್ತಿದರೆ, ಹೆಚ್ಚು ವೇಳೆ ಹಿಡಿದೀತೆಂದು, ತಾಯಿಯನ್ನು ಕಂಡ ಕೂಡಲೆ ಅವನು ತನ್ನ ಖುರ್ಚಿಯಬಿಟ್ಟೆದ್ದನು; ಮತ್ತು ಸ್ವಾಭಾವಿಕವೆಂದು ಕಾಣುವ ಹಾಗೆ ಕೋಣೆಯ ಬಾಗಿಲಲ್ಲಿ ನಿಂತುಕೊಂಡೇ ಮಾತಾಡಹತ್ತಿದನು: "ಏಕೆ ಮಾಸಾಹೇಬ, ಇಂದು ಶಿವಮಂದಿರದ ಕಡೆಗೆ ಹೋಗಲಿಲ್ಲವೇನು?"

"ಹೋಗಲಿಲ್ಲಪ್ಪಾ." ಎಂದಂದು ಮಾಸಾಹೇಬರು "ಈಗ ಮನೆಯ ಕೆಲಸಗಳೇ ಬೆಳೆಯಹತ್ತವೆ. ಅವೆಲ್ಲ ಬಗೆಹರಿಯುವ ವರೆಗೆ ಶಿವಮಂದಿರದ ಕಡೆಗೆ ಬಿಡುವಾದಾಗಲೇ ಹೋಗಬೇಕಾಗುವದು. ಅದಿರಲಿ. ಬಿಂಬೆಯನ್ನು ಶರಯೂಳ ಮನೆಗೆ ಕಳಿಸಬೇಕೆಂದಿದ್ದೆನು. ಅವಳ ಕೈಯ ಅಳತೆ ತರಲಿಕ್ಕೆ ನೀನು ಆಕೆಗೆ ಬೇಡವೆಂದೇಕೆ? ನಿನ್ನ ಮೋಟರ ತೆರವಿದಯೋ ಹೇಗೆ? ಕೇಳಿ ಬಾ ಎಂದು ನಾನೇ ಅವಳನ್ನು ನಿನ್ನಲ್ಲಿಗೆ ಕಳಿಸಿದ್ದೆನು. ನೀನೇನು ಹೇಳಿದೆಯೋ ಅದು ಅವಳಿಗೆ ಚೆನ್ನಾಗಿ ತಿಳಿಯಲಿಲ್ಲ. ಆದ್ದರಿಂದ ನಾನೇ ಹೋಗಿ ಕೇಳಬೇಕೆಂದು ಬಂದಿರುತ್ತೇನೆ. ಎಲೋ, ಮನೆಯಲ್ಲಿ ಮುತ್ತಿನ ಹಳೇ ಬಳಿಗಳಿರುವುದು ನಿಜ; ಆದರೆ ಲಗ್ನಸಮಾರಂಭದಲ್ಲಿ ಹಳೇ ಆಭರಣಗಳನ್ನಾರಾದರೂ ಉಪಯೋಗಿಸುವರೇ? ವಾಸ್ತವವಾಗಿ ನಿನ್ನತನಕ ಈ ಮಾತು ಬರುವ ಕಾರಣವೇ ಇರುವದಿಲ್ಲ; ಆದರೆ ಕಾರಣಾಂತರದಿಂದ ಆ ಮಾತೇ ಹೊರಟಿರುವದರಿಂದ ಮನಬಿಚ್ಚಿಕೇಳುತ್ತಿರುವೆನು; ನೀನಾದರೂ ಬಿಚ್ಚುಮನದಿಂದ ಹೇಳಬೇಕು. ನಿನಗೆ ಮುತ್ತಿನ ಬಳೆಗಳು ಸೇರದಿದ್ದರೆ ವಜ್ರದಿಂದ ಮಾಡಿಸಲೋ? ನನ್ನಲ್ಲಿ ಅದೂ ಸಿದ್ಧವಿದೆ. ಇಂಥ ಜೀನಸುಗಳನ್ನು ಒಮ್ಮೊಮ್ಮೆಯೇ ಮಾಡಿಸತಕ್ಕದ್ದಿರುತ್ತದೆ; ಯಾಕಂದರೆ, ಶರಯೂಳ ಮುಂಗೈ ಬೆಳವಣಿಗೆಯು ಇನ್ನು ಹೆಚ್ಚಾಗಲಾರದು."

'ಅವ್ವಾ' ಚಂದೂಲಾಲನು ಅನ್ನುತ್ತಾನೆ: 'ಈ ಪ್ರಶ್ನೆ ನನ್ನತನಕ ತಲುಪಿದ್ದರಿಂದಲೇ ನಾನಾದರೂ ತುಸ ಸ್ಪಷ್ಟವಾಗಿಯೇ ನಿನಗೆ ತಿಳಿಸುವುದೇನಂದರೆ, ನೀವು ಯೋಚಿಸಿರುವ ಈ ಬೇತನ್ನು ತುಸ ಮುಂದೂಡುವದೇ ವಿಹಿತವು.'

"ಭಲೆ! ಇನ್ನು ತಡೆಯುವ ಆವಶ್ಯಕತೆಯೇ ಇಲ್ಲೆಂದು ನನಗೆ ತೋರುತ್ತದಲ್ಲ! ಪರೀಕ್ಷೆಯ ರಿಝಲ್ಟಿನ ತಂತಿ ಬರಬೇಕೆಂದು ನೀನು ಹೇಳಿದ ಮಾತು ಯೋಗ್ಯವಾಗಿತ್ತು; ಆದರೆ ಆ ತಂತಿ ಬಂದ ನಂತರವೂ ಸುಮ್ಮನೆ

ವೇಳೆಗಳೆಯುವದು ವಿಹಿತವಲ್ಲ. ಬರಿಯ ನಾನೊಬ್ಬಳೇ ಏಕೆ, ಶರಯೂಳ ತಾಯಿಯೂ ಉತ್ಸುಕಳೇ ಆಗಿರುವಳೆನ್ನು; ಮತ್ತು ಅದಾದರೂ ಯೋಗ್ಯವೇ ಆಗಿದೆ. ನಾಲ್ಕು ವರ್ಷಗಳ ಮುಂಚೆ ನೀನು ವಿಲಾಯತಿಗೆ ಹೊರಡುವಾಗಲೇ ನಾವು ಈ ಕಾರ್ಯ ನೆರವೇರಿಸಿಕೊಳ್ಳಬೇಕಾಗಿತ್ತು; ಆದರೆ ಆಗ ಅಂಥ ಅಭಾವಿತ ಅಡಚಣಿಗಳೇ ಉಂಟಾದವು. ಈಗ ಆ ಮಾತು ಮಾತಾಡಿದರೆ ಉಪಯೋಗವೇನು? ಆದರೆ ಅಪ್ಪಾ, ಚಂದೂ! ನಿಮ್ಮೇ ಇಚ್ಛೆಯಂತೆ ಕಾರ್ಯ ನೆಸಗಲಿಕ್ಕೆ ನೀನಿನ್ನು ವಿಲಂಬಗೊಳಿಸಬೇಡ. ನಿಮ್ಮಂಥ ವಿಲಾಯತಿಗೆ ಹೋಗಿ ಬಂದ ಹುಡುಗರಿಗೆ ನಮ್ಮ ಹಳೇ ಪೀಳಿಗೆಯ ಹುಡುಗರಂತೆ ಲಗ್ನದ ಬಗ್ಗೆ ಔತ್ಸುಕ್ಯವಿರುವುದಿಲ್ಲೆಂಬದು ನಮಗೆ ಗೊತ್ತಿದೆ; ಆದರೆ ನಾವು ಹಳೇ ಪೀಳಿಗೆಯ ನಿನ್ನ ಹಿರಿಯರು ಜೀವಂತವಿರುವೆವಲ್ಲವೆ? ಅದರಿಂದ ನೀನು ಒಂದಿಷ್ಟು ನಮ್ಮ ಮನಸ್ಸಿನಂತೆಯೂ ನಡೆ. ಅದರಿಂದೇನೂ ಕೆಡುವದಿಲ್ಲ ಕಂಡೆಯಾ! ಮುಂದಿನ ಶುಕ್ಲಪಕ್ಷದಲ್ಲಿ ಒಳ್ಳೇ ಮುಹೂರ್ತಗಳಿರುವವೆಂದು ನಮ್ಮ ಉಪಾಧ್ಯಾಯರು ನನಗೆ ಈಗಲೆ ತಿಳಿಸಿ ಹೋದರು.''

"ಅವ್ವಾ, ಆದರೆ ಮನೆಯಲ್ಲಿ ಲಗ್ನವಾಗುವ ಮಗ ಮತ್ತು ಲಗ್ನವಾಗುವ ಮಗಳು ಹೀಗೆ ಇಬ್ಬರಿದ್ದರೆ, ಮೊದಲು ಮಗಳ ಲಗ್ನಮಾಡಿ, ಬಳಿಕ ಮಗನ ಕಾರ್ಯಕ್ಕೆ ಪ್ರವೃತ್ತರಾಗಬೇಕೆಂಬ ರೀತಿಯು ಇದೆಯೋ ಇಲ್ಲವೋ? ಅದರಿಂದ ಬಿಂಬೆಯ ಲಗ್ನವನ್ನು ಮೊದಲು ಮಾಡೋಣ. ಬಳಿಕ........''

ಹೀಗೆ ಮಾತನಾಡುವಾಗ ಚಂದೂಲಾಲನು ಮುಗುಳು ನಗೆ ನಗುತ್ತಿದ್ದನು; ಆದರೆ ಈ ತನ್ನ ನಗೆಯು ಮೋಸದ್ದಿದೆ, ಮನಃಪೂರ್ವಕವಲ್ಲ; ತಾನು ಅದೊಂದು ವೇಷ ಹಾಕಿರುವೆನು; ಕೇವಲ ಕಣ್ಣುಮುಚ್ಚಿನಾಟ ನಡೆಸಿರುವೆನು, ಎಂಬದರ ಅರಿವು ಅವನ ಮನಸ್ಸಿನಲ್ಲಿ ಅವನಿಗೆ ಚುಚ್ಚುತ್ತಿತ್ತು.

ಮಾಸಾಹೇಬರು ತುಸ ಪೇಚಿಗೆ ಬಿದ್ದರು; ಆದರೆ ಅವರಿಗೂ ಸಕಾಲಕ್ಕೇ ಉತ್ತರ ಹೊಳೆಯಿತು:—"ತೀರ ಸಮವಯಸ್ಸಿನ ಉಪವರ ಕನ್ಯೆಯ ಲಗ್ನವನ್ನು ಮೊದಲು ಮಾಡುವ ರೀತಿಯಿದೆ; ಆದರೆ ಅದು ಏಕುಂಟಾಯಿತೆಂದರೆ, ಹೆಣ್ಣುಮಕ್ಕಳ ಲಗ್ನ ನಿಶ್ಚಯಿಸಲಿಕ್ಕೆ ಶ್ರಮ ಹಿಡಿಯುತ್ತದೆ. ಆ ಕೆಲಸವು ಸಂಕಟಪ್ರಾಯವಾಗಿಯೇ ತೋರುವದು. ಅದರಿಂದ ಅದನ್ನು ಮೊದಲು ಬಗೆಹರಿಸಿಕೊಂಡಿತೆಂದರೆ, ಬಳಿಕ ಮಗನ ಲಗ್ನದ ಉಸಾಬರಿ. ಅದಕ್ಕೆ ಶ್ರಮವಿಲ್ಲ, ಚಿಂತೆಯಿಲ್ಲ. ವರಶೋಧನೆಗಾಗಿ ಕನ್ಯಾಪಕ್ಷದವರು ದೂರದೂರಿನಿಂದ ಬರುವರು; ಆದರೆ ನಮ್ಮ ಬಿಂಬೆಯ ಲಗ್ನದ ಬಗ್ಗೆ ಯಾರಿಗಾದರೂ ಚಿಂತೆಯೆನಿಸುವದೇ? ಎಲೋ, ನಿನಗೆ ಗೊತ್ತಿಲ್ಲ. ನಾವು ಅವಳ

ಗಾಗಿ ಮನೆತನ ನೋಡುವ ಮೊದಲೇ ಖಾಸ ಗುಪ್ತರೀತಿಯಿಂದ ಅವಳನ್ನು ತಮ್ಮಲ್ಲಿಗೆ ಕೊಡಬೇಕೆಂದು ಕೇಳುವ ಹಲವು ಬೇಡಿಕೆಗಳು ನಮ್ಮೆಡೆಗೆ ಬಂದಿರುತ್ತವೆ. ನಮ್ಮ ಬಿಂಬೆಯು ನಕ್ಷತ್ರದಂತೆ ಚೆಲುವೆ! ಆದರೆ ಬಿಂಬೆಯೇ ಹಟದಿಂದ ಹೇಳುತ್ತಿರುವುದೇನಂದರೆ, ಅಣ್ಣನ ಲಗ್ನವಾಗದ ಹೊರತು ನಾನು ಲಗ್ನಕ್ಕೆ ನಿಲ್ಲತಕ್ಕವಳಲ್ಲ! ಮತ್ತು ನಿನ್ನ ಲಗ್ನವಂತೂ ನಾಲ್ಕು ವರ್ಷಗಳ ಮುಂಚೆಯೇ ನಿಶ್ಚಿತವಾದದ್ದು ನಿಂತಿರುವುದು. ಅದರಿಂದ ನಿನ್ನ ಲಗ್ನವನ್ನೇ ಮುಂಚೆ ಮಾಡಿ, ಬಳಿಕ ಬಿಂಬೆಗೆ ಮಾಡೋಣ."

"ಅವ್ವಾ, ಅದೆಲ್ಲ ನಿಜ; ಆದರೆ ಈ ಕಾರ್ಯ ಮುಂದೂಡಲಿಕ್ಕೆ ನನ್ನ ಕೆಲ ಬೇರೆ ಕಾರಣಗಳೂ ಇವೆ. ಅವನ್ನೆಲ್ಲ ನಿನಗೆ ಸ್ವಲ್ಪದರಲ್ಲಿ ತಿಳಿಸಬರುವಂತಿಲ್ಲ. ಆದರಿಂದ ಸದ್ಯಕ್ಕೆ ನನ್ನ ಲಗ್ನ ಬೇಡ ಎಂಬುದು ಮಾತ್ರ ಖಂಡಿತ."

"ನಿನ್ನ ಆ ಕಾರಣವನ್ನು ನನ್ನೆದುರಿಗೆ ಹೇಳಲಿಕ್ಕೇಕೆ ಸಂಕೋಚ? ಮತ್ತು ಅದಕ್ಕೆ ವೇಳೆಯಾದರೂ ಎಷ್ಟು ಬೇಕು? ಬಾ, ಬರುತ್ತಿದ್ದರೆ ಈಗಲೆ ನನ್ನೊಡನೆ ನನ್ನ ಅಟ್ಟಕ್ಕೆ ಬಾ. ನಾವು ಅಲ್ಲಿ ಮಾತಾಡುತ್ತ ಕೂಡ್ರೋಣ. ಈಗ ನನಗೂ ಬೇರೆ ಅವಸರದ ಕೆಲಸಗಳಿಲ್ಲ; ಆದರೆ ನನ್ನೆದುರು ಹೇಳಲಿಕ್ಕೆ ನಿನಗೆ ಸಂಕೋಚವೆನಿಸುತ್ತಿದ್ದರೆ. ಅದನ್ನು ನಿನ್ನ ಹಿರಿಯರ ಬಳಿ ತಿಳಿಸು. ನೀನು ಅವರ ತೊಡೆಗೆ ತೊಡೆಯಾನಿಸಿ ಕುಳಿತು ಬೀಡಿ ಸೇದುವಷ್ಟು ಪ್ರತಿಷ್ಠಿತನಿರುವದರಿಂದ ಅವರ ಮನಸಿಗೆ ಮನಸನ್ನು ಹಚ್ಚಿ ಮನ ಬಿಚ್ಚಿ ಮಾತಾಡುವಷ್ಟು ಸರಿಕದ ಸಲಿಗೆಯುವನಂತೂ ಆಗಿಯೇ ಬಿಟ್ಟಿರುವೆ."

ತಾನು ತಾಯಿಯೊಡನೆ ಮನಬಿಚ್ಚಿ ಮಾತಾಡಲಿಕ್ಕೆ ಇಚ್ಛಿಸುವದಿಲ್ಲೆಂದು ಅವಳಿಗನಿಸಗೊಡುವುದು ಸರಿಯಲ್ಲವೆಂಬದು ಚಂದೂಲಾಲನ ಧ್ಯಾನದಲ್ಲಿ ಬಂದದ್ದರಿಂದಲೇ ಆತನು:—"ಇಲ್ಲ-ಇಲ್ಲ. ಅವ್ವಾ, ಹಾಗೇನೂ ಇಲ್ಲ. ನಿನ್ನೊಡನೆ ನಾನು ಮನಬಿಚ್ಚಿ ಮಾತಾಡದಿರುವೆನೇ? ಆದರೆ ಈಗಲೇ ನಾನು ಅದನ್ನು ಹೇಳೆನು. ನಾನು ಟಪಾಲಿನ ನಿರೀಕ್ಷಣೆ ಮಾಡುತ್ತಾ ಕುಳಿತಿರುತ್ತೇನೆ; ಅದರಿಂದ ನನಗೀಗ ಸಮಯವಿಲ್ಲವಿಷ್ಟೇ."

"ಆದರೆ ಇಂದು ಭಾನುವಾರವಲ್ಲವೆ?"

"ವಿಲಾಯತಿ ಟಪಾಲಿನ ಮಟ್ಟಿಗೆ ರವಿವಾರವೂ ಕೆಲಸ ಮಾಡುವರು."

ಮಾಸಾಹೇಬರ ಮನಸ್ಸಿನಂತಾಗಲಿಲ್ಲ; ಆದರೆ ಅವರಾದರೂ ಮಾಡುವದೇನು? 'ಟಪಾಲ' ಎಂದ ಕೂಡಲೆ ಯಾವ ಕೆಲಸಗಳೂ ಅದನ್ನು ಅಡ್ಡಿ ಮಾಡಲಾರವು; ಅದರಲ್ಲಿಯೂ 'ವಿಲಾಯತಿ ಟಪಾಲ' ಅಂದಬಳಿಕ ಕೇಳುವುದೇನು?

ಮೂಸಾಹೇಬರು ಅಲ್ಲಿಂದ ಹೊರಟು ಹೋದರು; ಕೂಡಲೆ ಚಂದೂಲಾಲನು ತನ್ನ ಕೋಣೆಯೊಳಗೆ ಹೋಗಿ ಕುರ್ಚಿಯ ಮೇಲೆ ಕುಳಿತನು. ಅಷ್ಟರಲ್ಲಿಯೇ ಸಿಪಾಯಿಯು ವಿಲಾಯತಿ ಟಪಾಲಿನ ಕಾಗದಗಳನ್ನು ತಂದು ಅವನ ಮೇಜಿನಮೇಲಿಟ್ಟನು. ಚಂದೂಲಾಲನು ಅವುಗಳನ್ನು ಅವಸರದಿಂದ ತಿರುವಿ ಹಾಕಿದನು; ಮತ್ತು ಅಕ್ಷರಗಳ ವಿಶೇಷ ಗುರ್ತಿನ ಒಂದು ಗುಲಾಬೀ ಬಣ್ಣದ ಪಾಕೀಟನ್ನು ಎತ್ತಿಕೊಂಡು, ತುಟಿಯಿಂದ ಹಿಡಿದು ಅದನ್ನು ಹರಿದನು. ಒಳಗೆ ಹೆಂಗಸು ಬರೆದ ಸುಂದರ ಅಕ್ಷರಗಳ ಕಾಗದವೊಂದು ಇದ್ದಿತು. ಅವನು ಅದನ್ನು ಬಿಚ್ಚಿ ಓದತೊಡಗಿದನು. ಅದು ಇಂತಿದ್ದಿತು:

ತಾರೀಖು ೧೨ನೇ ಅಗಸ್ಟ ೧೯೪೦

“ನನ್ನ ಮಧುಮಧುರ ಮತ್ತು ಪ್ರಿಯೋತ್ತಮ ಪ್ರಿಯಕರಾ!

ನೀನು ಇಂಗ್ಲಂಡವನ್ನೂ ನನ್ನನ್ನೂ ಬಿಟ್ಟು ಹೋದಾಗಿನಿಂದ ನನ್ನ ಜೀವವು ಅಥವಾ ಆತ್ಮವು ಯಾವುದೊಂದು ಹಕ್ಕಿಯಂತಾಗಿದೆ; ಅಂದರೆ ಅದಕ್ಕೆ ರೆಕ್ಕೆಗಳುದ್ಭವಿಸಿವೆ; ಅದರಿಂದ ಅದು ಯಾವಾಗಲೂ ಹವೆಯಲ್ಲೇ ಸಂಚರಿಸುತ್ತಿದೆ; ಕೆಳಗೆ ಬರುವುದೇ ಇಲ್ಲ. ವಿಶ್ರಾಂತಿಕೂಡ ಪಡೆಯದೆ. ಅದು ಮೇಲೆ ತಾರಕಾಂಕಿತ ಗಗನಕ್ಕೆ ಹೋಗುತ್ತದೆ. ಅಷ್ಟು ನಿರೀಕ್ಷಿಸ ಹೋದರಾದರೂ ನಿನ್ನ ಮುಸಕು ದರ್ಶನವಾದರೂ ತಪ್ಪಿ ಆದೀತೇ? ಮತ್ತು ನಿನ್ನ ಸಂಬಂಧದ ಒಂದಿಷ್ಟು ಸಂಗತಿಯಾದರೂ ತಿಳಿದೀತೇ? ನಿನ್ನ ಆಯ್. ಸಿ. ಎಸ್. ಪರೀಕ್ಷೆಯ ರಿಝಲ್ಟಿನ ಸಲುವಾಗಿ ನೀನು ಎಷ್ಟು ಉತ್ಸುಕತೆಯಿಂದಲೂ ಚಿಂತೆಯಿಂದಲೂ ದೃಷ್ಟಿಯಿರಿಸಿ ಕುಳಿತಿರುವೆಯೋ, ನಾನಾದರೂ ಇಲ್ಲಿ ಹಾಗೆಯೇ ಕುಳಿತಿರುತ್ತೇನೆ; ಆದರೆ ಬರೆಯುವಾಗ ತುಸ ತಪ್ಪಿಬಿಟ್ಟೆನಪ್ಪಾ! ಯಾಕಂದರೆ ಉತ್ಸುಕತೆಯಿರಬಹುದು; ಆದರೆ ಹುಚ್ಚೀ, ಚಿಂತೆಯೇತರದು, ಎಂದಂದೀ? ಮತ್ತೂ ಅದಾದರೂ ನಿಜವೇ ಇದೆ. ಯಾಕಂದರೆ ಪರೀಕ್ಷೆಯಲ್ಲಿಯ ನಿನ್ನ ಯಶದಬಗ್ಗೆ ಒಂದಿಷ್ಟಾದರೂ ಸಂದೇಹಪಡುವುದೆಂದರೆ, ಅದು ನಿನ್ನ ತೇಜಸ್ವೀ ಬುದ್ಧಿಮತ್ತೆಗೆ ಅವಮಾನವಿತ್ತಂತೆಯೇ ಸರಿ; ಆದರೆ ಏನು ಮಾಡಬೇಕಪ್ಪಾ! ಪ್ರೇಮವು ಮನುಷ್ಯನನ್ನು ಅತ್ಯಂತ ಅಂಜುಬುರುಕನನ್ನಾಗಿ ಮಾಡುತ್ತದೆ.

ನೀನು ಈಗ ಹಿಂದುಸ್ತಾನಕ್ಕೆ ಮರಳಿಹೋಗಿರುವದರಿಂದ, ನನಗೂ ಆ ದೇಶದ ಕನಸುಬೀಳಹತ್ತಿವೆ; ಅತ್ತ ಕಡೆಯ ಸಂಗತಿಗಳ ಕಲ್ಪನಾಚಿತ್ರಗಳು ಮನಃಚಕ್ಷುಗಳೆದುರು ಬಂದು ನಿಲ್ಲಹತ್ತಿರುತ್ತವೆ; ಯಾಕಂದರೆ ಇನ್ನು ಬೇಗನೆ ಆ ದೇಶವು ನನ್ನದೂ ಆಗತಕ್ಕದಿದೆಯಲ್ಲವೆ? ಪ್ರೊಫೇಸರ ಮ್ಯಾಕ್ಸ ಮೂಲರನೆಂಬ ಪಂಡಿತನು ಇಡಿ ಜನ್ಮವೆಲ್ಲ ಹಿಂದುಸ್ತಾನದ ಮೇಲೆ ಪ್ರೇಮ

ಮಾಡಿದರೂ ಹಿಂದುಸ್ತಾನವೆಂತಿರುವದೆಂಬದನ್ನು ಕಣ್ಣಾರೆ ನೋಡಲಿಕ್ಕೆ ಆತ ನಿಗೆ ದೊರೆಯಲಿಲ್ಲೆಂದು ಹೇಳುತ್ತಾರೆ. ಭಾರತೀಯ ಸಂಸ್ಕೃತಿಯ ಮೂಲಕ ಪಂಡಿತ ಮ್ಯಾಕ್ಸಮೂಲರನ ಪ್ರೇಮವು ಹಿಂದುಸ್ತಾನದ ಮೇಲಿದ್ದಂತೆ, ಆ ದೇಶದ ಮೇಲಿನ ನನ್ನ ಪ್ರೇಮವಾದರೂ ನಿನ್ನ ಮೇಲಿನ ಪ್ರೇಮದ ಸಲು ವಾಗಿಯೇ ಇದೆ; ಆದರೆ ಆ ಪಂಡಿತನಿಗಿಂತಲೂ ನಾನೆಷ್ಟೋ ಭಾಗ್ಯಶಾಲಿನಿ ಯಳಲ್ಲವೇ? ಯಾಕಂದರೆ, ಇನ್ನು ಮುಂದೆ ನನಗೆ ನನ್ನ ಆಯುಷ್ಯವನ್ನು ಹಿಂದುಸ್ತಾನದಲ್ಲಿ ಮತ್ತು ನಿನ್ನ ಸಹವಾಸದಲ್ಲಿ ಕಳೆಯಲಿಕ್ಕೆ ಬಂದೀತು.

ಆದರೆ ನನ್ನ ನಿನ್ನ ಲಗ್ನವಾದ ಬಳಿಕ ನನ್ನ ಮೇಲೆ ಝೋಟಿಂಗ ಶಾಹಿಯ ಆಗ್ರಹವನ್ನು ಎಷ್ಟು ಮಾಡಬೇಕೆಂದು ನಿನ್ನ ಯೋಜನೆಯಿದೆ? ಎಂಬದನ್ನು ನೀನು ನನಗೆ ಮೊದಲು ತಿಳಿಸು; ಅಂದರೆ ಉದಾಹರಣೆಗಾಗಿ ನಾನು ಅಲ್ಲಿಯ ಯಾವ ಬಗೆಯ ಉಡುಪು ಧರಿಸಿದರೆ ನಿನಗೆ ರುಚಿಸೀತು! ಮತ್ತುನಾನು ನಿನ್ನ ಮದುವೆಯ ಮಡದಿಯೆಂದು ಜಗಜ್ಜಾಹೀರು ಮಾಡುವ ಆ ಕೇಶರೀ ತಿಲಕವನ್ನು ನಾನು ಹಚ್ಚಲೇಬೇಕೋ? ಇನ್ನು ಉಡುಪಿನ ಬಗ್ಗೆ ಹೇಳುವುದಾದರೆ, ಹಿಂದುಸ್ತಾನದ ಸ್ತ್ರೀಯರು ಯಾವ ಉದ್ದುದ್ದನ್ನ ಸೀರೆ ಯುಡುವರೋ ಮತ್ತು ಯಾವುಗಳ ನೀರಿಗೆಗಳು ನೆಲದ ಮೇಲೆ ಕೊಂಚ ಕೊಂಚ ಎಳೆಯುವವೋ ಅವು ನನಗೆ ನಿಜವಾಗಿಯೂ ಸೇರುತ್ತವೆ; ಆದರೆ ಹಣೆಯ ಮೇಲಿನ ಕೇಶರೀ ಕುಂಕುಮದ ಮಾತು ಹಾಗಲ್ಲ; ಆದರೆ ನಿನಗಾಗಿ ಅದನ್ನೂ ನಾನು ಹಚ್ಚೇನು. ಮಾಡುವದೇನಪ್ಪಾ! ಒಂದು ಬಂತು, ಒಂದು ಹೋಯಿತೆನ್ನಬೇಕಿಷ್ಟೇ! ನಿನ್ನ ಆ ಕೇಶರೀ ತಿಲಕವನ್ನು ನಾನು ಹಚ್ಚೇನು; ಹಾಗು ಅದಕ್ಕೆ ಬದಲು ನನ್ನ ತುಟಿಗಳನ್ನು ರಂಗಿಸುವ ಕೆಂಪು ಖಡೂದ ಕಡ್ಡಿಯನ್ನು ಚೆಲ್ಲಿಕೊಟ್ಟೇನು. ಅಂದರಾಯಿತಲ್ಲವೇ? 'ಯಾಕಂದರೆ, ರೋಮಿಗೆ ಹೋಗಬೇಕಾದರೆ ರೋಮನ್ನರಂತೆ ನಡೆಯುವ ಸಿದ್ಧತೆ ಇರಬೇಕು' ಎಂದೆ ನ್ನುವಂತೆ ಮತ್ತು ನಿಜವಾಗಿ ಹೇಳುವದಾದರೆ, ಪರಿಸ್ಥಿತಿಯೊಡನೆ ಸಮರಸ ವಾಗುವದೂ ಅದರ ಧ್ವನಿಗೆ ಧ್ವನಿಗೂಡಿಸುವದೂ ಇವೇ ಸಂಸ್ಕೃತಿಯ ಆತ್ಮ ವಲ್ಲವೇ?

ಅದಿರಲಿ. ನೀನು ತಂತಿಯ ಮೂಲಕ ಕಳಿಸಿದ್ದ ಮುನ್ನೂರು ಪೌಂಡು ಗಳು ಎಂದೋ ತೀರಿದವು. ಮತ್ತೆ ಬೇಗನೆ ಅಷ್ಟೇ ಕಳಿಸಿದರೆ, ಅನುಕೂಲ ವಾದೀತು. ನಾನು ನಿನಗೆ ಯಾವ ಬಗೆಯ ಅವಸರವನ್ನೂ ಪಡಿಸಲಿಚ್ಛಿಸುವ ದಿಲ್ಲ. ಆದರೂ ನನಗನಿಸುವದೇನಂದರೆ, ನಿನ್ನ ಪರೀಕ್ಷೆಯ ರಿಝಲ್ಟಾಗಿ, ನಿನ್ನ ಕಾಗದ ಬಂದ ಕೂಡಲೆ, ಅದನ್ನೇ ಒಂದು ಸುಗ್ರೀವಾಜ್ಞೆಯೆಂದು ಭಾವಿಸಿ,

ನಾನು ತತ್ಕ್ಷಣವೇ ಹಿಂದುಸ್ಥಾನಕ್ಕೆ ಹೊರಡುವ ಸಿದ್ಧತೆಯಿರಿಸುವ ದೊಳ್ಳೇದು.

ಮೋಸಗೊಳಿಸದೆ ಎಸಗಿದ ಚುಂಬನಗಳು ನನಗೆ ರುಚಿಸುವದಿಲ್ಲ; ಮತ್ತು ಮೋಸಪಡಿಸಿ ಅವನ್ನು ಪಡೆಯುವದೆಂದರೆ, ನೀನು ಸಮಕ್ಷ-ಸಮೀಪ ದಲ್ಲಿರಬೇಕು. ನನಗಿರಲಿ, ಆದರೆ ನಿನಗಾದರೂ ಅಂಥ ಚುಂಬನಗಳು ಸೇರುವವೇ ಎಂಬದನ್ನು ಹೇಳು! ಅಂದರೆ ಮೇಲೆ ಬರೆದಿರುವಹಾಗೆ ನನ್ನ ಪ್ರಾಣರೂಪೀ ಪಕ್ಷಿಯು ಮೇಲೆ ಆಕಾಶದಲ್ಲಿ ಸಂಚರಿಸುತ್ತಿರುವಂತೆ ಸಂಚ ರಿಸಿ, ನಿನಗೆ ತಿಳಿಯದ ಹಾಗೆ ನಿನ್ನ ಹಾಸುಗೆಯ ಮೇಲೆ ನನ್ನ ಚುಂಬನಗಳನ್ನು- ಬಿಳಿಯ ಗಡ್ಡದ ಖ್ರಿಸ್ತಮಸ್ 'ಬಾಬಾ' ಪ್ರತಿವರ್ಷವೂ ಖ್ರಿಸ್ತಮಸ್ಸಿನ ರಾತ್ರಿ ಯಲ್ಲಿ ಸಣ್ಣ ಹುಡುಗರ ಕಾಲುಚೀಲಗಳೊಳಗೆ ಚಾಕ್‌ಲೆಟ್ಟಿನ ವಡಿಗಳನ್ನು- ಚಲ್ಲುವಂತೆ ಒಯ್ದು ಚಲ್ಲೆಂದು ನಾನದಕ್ಕೆ ತಿಳಿಸುವೆನು.

ನಿನ್ನ ಅಖಂಡ ಪ್ರಿಯಕರಿಣಿ,
ಮೇರೀ ಮೊಡಹಾಊಸ"

ಚಂದೂಲಾಲನು ಆ ಪತ್ರವನ್ನು ಕೆಳಗಿಡದ ಹಾಗೆ ಮೂರು ಮೂರು ಸಾರೆ ಓದಿದನು. ಅದರಲ್ಲೇ ಆತನ ದೃಷ್ಟಿಯು ನೆಟ್ಟುಬಿಟ್ಟಿತ್ತು. ಪತ್ರವನ್ನೋ ದುವದಾದ ಬಳಿಕ ಅದನ್ನು ಅವನು ತನ್ನ ಜೇಬಿನ ಒಳಗಿಸೆಯಲ್ಲಿಟ್ಟು, ಬಳಿಕ ಮುಂದಿನ ಕೆಲಸಗಳಿಗೆ ಸಿದ್ಧನಾದನೆಂಬದನ್ನು ದರ್ಶಿಸುವ ಸಲುವಾಗಿ ತನ್ನ ಬೂಟುಗಳನ್ನು ಕಾಲ್ಕೆಳಗಿನ ಫರ್ಸುಗಲ್ಲ ಮೇಲೆ ಅಪ್ಪಳಿಸಿದನು; ಮತ್ತು ಸಿಗರೇಟು ಹೊತ್ತಿಸಿಕೊಂಡು ಹೊಗೆ ಬಿಡುತ್ತ, ತನ್ನ ಕೋಣೆಯಿಂದ ಹೊರ ಬಿದ್ದನು.

---

ವಜ್ರಾಘಾತ!

ಇಂದು ಸಂಜೆಗೆ ನಂದಭುವನದಲ್ಲಿ ಅಭಿನಂದನ ಸಮಾರಂಭದ ಮೊದ ಲನೇ ಖಾಸಗೀ ಔತಣವಿದ್ದಿತು. ಅದರ ಎಲ್ಲ ಸಿದ್ಧತೆಯೂ ಆಯಿತು. ದೇಶೀ- ವಿದೇಶೀ, ಸ್ವಜಾತೀಯ-ಪರಜಾತೀಯರಾದ ಸುಮಾರು ಮೂವತ್ತು ಮಂದಿ ಅಭ್ಯಾಗತರು ಭೋಜನ ಶಾಲೆಗೆ ಹೊಂದಿ ಇದ್ದ ಚಾವಡಿಯೊಳಗಿನ ಹಾಲಿ ನಲ್ಲಿ ಖುರ್ಚಿಗಳ ಮೇಲೆ ಬಂದು ಕುಳಿತಿದ್ದರು; ಮತ್ತು ರಾತ್ರಿಯ ಊಟಕ್ಕೆ ಮೊದಲು ಚೆನ್ನಾಗಿ ಹೊಟ್ಟೆ ಹಸಿಯುವದಕ್ಕೆಂದು ಯುರೋಪೀಯ ಪದ್ಧತಿ ಯಿಂದ ಯಾವಮದ್ಯಪ್ರಾಶನಾದಿ ಪ್ರಕಾರಗಳನ್ನು ಮಾಡುವರೋ ಅವುಗಳನ್ನು ಕೆಲವರು ನಡೆಸಿದ್ದರು. ಮದ್ಯವನ್ನು ತಿರಸ್ಕರಿಸತಕ್ಕಂಥವರೂ ಕೆಲವರಿದ್ದರು.

ಅದನ್ನು ಕಂಡು ಅವರಿಗೆ ಹೇಗೆ ! ಹೇಗೋ ಅನಿಸಿದ್ದರಿಂದ ಅವರು ಕಿಟಕಿಯು ಹೊರಗೆ ನೋಡುವ ನೆವ ಮಾಡಿ ಅತ್ತ ಮೋರೆ ತಿರುವುತ್ತಿದ್ದರು. ಧೂಮ್ರ ಪಾನವು ಯಥೇಚ್ಛವಾಗಿ ನಡೆದಿತ್ತು; ಆದರಿಂದ ಯಾರಿಗೆ ಆ ಪಾನವು ಸೇರುತ್ತಿರಲಿಲ್ಲವೋ, ಅವರಾದರೂ ಬೇರೆ ಏನೋ ನೆವ ಮಾಡಿ ಕಿಟಕಿಯು ಕಡೆಗೆ ಮೋರೆ ತಿರುವಿ ನಿಂತುಕೊಂಡಿದ್ದರು.

ಸರ ಗಂಗಾರಾಮರೂ ಚಂದೂಲಾಲನೂ ಆ ಕೋಣೆಗೆ ಆಗಾಗ್ಗೆ ಬರುತ್ತಿದ್ದರು. ಯಾರಿಗೆ ಏನು ಬೇಕೆಂಬ ವಿಚಾರಣೆ ಮಾಡುತ್ತಿದ್ದರು. ನಡು ನಡುವೆ ಯಾರಿಂದಲಾದರೂ ಬಂದ ಚೀಟ-ಚಪಾಟಿಗಳಿಗೆ ಬಾಯಿಮಾತಿನ ಉತ್ತರ ಇಲ್ಲವೆ ನಿಂತು ನಿಂತಿರುವಾಗಲೇ ಬರೆಹ ಮೂಲಕ ಉತ್ತರಗಳು ಹೋಗುತ್ತಿದ್ದವು; ಆದರೆ ಎಲ್ಲ ಜನರೂ ಕಲೆತ ಬಳಿಕ ತಮಗೆ ಬೇರೆ ಕೆಲಸ ವಿದೆಯೆಂದು ಹೇಳಿ, ಸರ ಗಂಗಾರಾಮರು ಅಲ್ಲಿಂದ ಅದೃಶ್ಯರಾದರು. ಆ ತರುಣರ ಔತಣಕ್ಕೆ ಸಂಪೂರ್ಣ ಸ್ವಾತಂತ್ರ್ಯ ಕೊಡಬೇಕೆಂದೇ ಅವರು ಹಾಗೆ ಬೇಕಂತ ಅಲ್ಲಿಂದ ಕಾಲ್ತೆಗೆದಿದ್ದರು.

ಚಂದೂಲಾಲ ಮತ್ತು ಸರ ಗಂಗಾರಾಮ ಇವರುಗಳ ಧಾರ್ಮಿಕ ಮತಗಳಲ್ಲಿ ಎರಡು ಪೀಳಿಗೆಗಳ ಅಂತರವು ಸಹಜವಾಗಿಯೇ ಬಿದ್ದಿತ್ತು; ಮತ್ತು ಆ ಹಿಂದೂ ಕುಟುಂಬದಲ್ಲಿ ಮಾಸಾಹೇಬರ ಸಮಾವೇಶವೂ ಆಗಿತ್ತಾದ್ದರಿಂದ, ಸಾಮಾಜಿಕ ರೀತಿ-ರಿವಾಜುಗಳು ಅಲ್ಲಿಶಬ್ದಶಃ ಮುಕ್ಕಾಪಟ್ಟಿಯಾದದ್ದು ಒಡೆದು ಕಾಣಿಸುತ್ತಿತ್ತು. ಹೀಗಿದ್ದರೂ ಕೂಡ ಒಂದು ಪ್ರೇಮಜನ್ಯ ಸಹಿಷ್ಣುತೆಯ ಆಧಾರದ ಮೇಲೆ ಎಲ್ಲ ಕೌಟುಂಬಿಕ ವ್ಯವಹಾರಗಳೂ ಬೊಬ್ಬಾಟವಿಲ್ಲದಂತೆ ನಡೆದಿದ್ದವು.

ಸರ ಗಂಗಾರಾಮರ ಕುಟಂಬದೊಳಗೆ ಮುಖ್ಯವಾಗಿ ಮೂರೇ ಜನರಿದ್ದರೂ ಆ ಮೂವರೂ ಕೂಡಿ ನಾಲ್ಕು ಕಾಲಿನ ಹೊರಸು ಆದಂತಾಗಿದ್ದರು. ಅಂದರೆ ಹೊರಸಿನ ಒಂದೇ ಕಾಲು ಹಿಡಿದು ಎಳೆದರೂ ಅದರ ಮಿಕ್ಕ ಮೂರು ಕಾಲುಗಳು ಅದರೊಡನೆ, ಅದೇ ದಿಕ್ಕಿಗೆ ತೆರೆಯುತ್ತ ಹೋಗುತ್ತವೆ. ಅದರಂತೆ ಆ ಪ್ರತಿಯೊಂದು ಕಾಲಿಗೂ ಅದೇ ಸಂಧಿ ದೊರೆಯುವ ಹಕ್ಕೂ ಸಂಭವವೂ ಇರುತ್ತದೆ. ಹೊಸಯುಗದೊಳಗಿನ ಆ ಸಂಯುಕ್ತ ಹಿಂದೂ ಕುಟುಂಬವು ಇಂಥದೇ ಒಂದು ನಾಲ್ಕುಕಾಲಿನದಾಗಿತ್ತು! ಸರ ಗಂಗಾರಾಮರ ಕುಟುಂಬದೊಳಗಿನ ಆ ಮೂವರು ಮುಖ್ಯರೂ ಆ ನಾಲ್ಕುಕಾಲಿನ ಹೊರಸಿನಂತೆಯೇ ತಮ್ಮ ಜೀವನ ಸಾಗಿಸಿದ್ದರು.

ಚಂದೂಲಾಲನು ಕ್ಷತ್ರಿಯನೆಂದು ಮಾಂಸಭಕ್ಷಕನು; ಆದರೆ ವಿಲಾ

ಯುತಿಗೆ ಹೋಗಿಬಂದವನಾದ್ದರಿಂದ ಗೋಮಾಂಸಕ್ಕೂ ಆತನ ಸಿದ್ಧತೆಯೇ ಇತ್ತು. ಆತನು ವಿದೇಶದಿಂದ ಬಂದೊಡನೆಯೇ ಒಬ್ಬ ಚಟೀಗಾರ(ಕ್ರಿಸ್ತೀ) ನೌಕರನನ್ನು ಮನೆಯಲ್ಲಿಟ್ಟನು. ತಾಜಾ ತತ್ತಿಗಳ ಖಾದ್ಯಗಳು ಸಿಗಬೇಕೆಂದು ತೋಟದ ಒಂದು ಮೂಲೆಯಲ್ಲಿ ಕೋಳಿಯದೊಂದು ಗೂಡೂ ಕಟ್ಟಲಾಗಿತ್ತು. ಒಬ್ಬಿಬ್ಬರ ಮಾಂಸಭಕ್ಷಣಕ್ಕಾಗಿ ಮನೆಯಲ್ಲಿ ಮಟನ್‌ಮಾರ್ಕೇಟ ನಿರ್ಮಿಸಲಾಗುವುದಿಲ್ಲ. ಚಂದೂನ ಚಟೀಗಾರ ಆಳು ಮಟನ್‌ಮಾರ್ಕೇಟಿಗೆ ಹೋಗಿ, ಒಡೆಯನಿಗೆ ಬೇಕಾದ ಪದಾರ್ಥಗಳನ್ನು ತಂದು ಬೆಯ್ಯಿಸಿ ಅವುಗಳನ್ನು ಯಜಮಾನನ ಕೋಣೆಯಲ್ಲೇ ತಂದು ನೀಡುತ್ತಿದ್ದನು. ಇದರಂತೆಯೇ ಚಂದೂಲಾಲನ ಖಾಸ ಕಪಾಟಿನಲ್ಲಿ ಮದ್ಯದ ಸೀಸೆಗಳ ಸಂಗ್ರಹವಿರುತ್ತಿತ್ತು.

ಸರ ಗಂಗಾರಾಮರಾದರೂ ಕ್ಷತ್ರಿಯರೇ; ಆದರೆ ಅವರು ಮಾಂಸಾಹಾರವನ್ನು ನಿಷೇಧವೆಂದು ತಿಳಿದಿರಲಿಲ್ಲವಷ್ಟೇ. ಪ್ರಾಯಶಃ ಅವರು ದಿನಾಲು ಶಾಕಾಹಾರವನ್ನೇ ಮಾಡುತ್ತಿದ್ದರು; ಆದರೆ ಮಾಂಸಭಕ್ಷಕರ ಸಂಗಡ ಒಂದೇ ಮೇಜಿನ ಮೇಲೆ ಕುಳಿತು ಉಣ್ಣಲಿಕ್ಕೆ ಅಂದರೆ, ಮಾಂಸದ ಪದಾರ್ಥಗಳನ್ನು ಎದುರಿಗೆ ತಂದು ಯಾರಾದರೂ ತಿನ್ನುತ್ತಿರುವದನ್ನು ನೋಡಲಿಕ್ಕೆ ಅವರ ಸಿದ್ಧತೆಯಿತ್ತು. ಸರ ಸಾಹೇಬರು ಶಾಕ್ತಪಂಥೀಯ ಕ್ಷತ್ರಿಯರಿದ್ದುದರಿಂದ, ಶಕ್ತಿದೇವಿಯ ಪ್ರಸಾದವೆಂದು ಅವರು ಮದ್ಯವನ್ನು ಸೇವಿಸುತ್ತಿದ್ದರು. ಆ ಪ್ರಸಾದದ ಪಾತ್ರೆಯು ಪುಟ್ಟ ಬೆಳ್ಳೀ ಬಟ್ಟಲವಿದ್ದದ್ದು ಒಮ್ಮೊಮ್ಮೆ ದೊಡ್ಡ ಬೆಳ್ಳೀ ಬಟ್ಟಲದಷ್ಟಿದ್ದರೂ ಅವರಿಗೆ ಸಾಗುತ್ತಿತ್ತು. ಅವರು ಸ್ವತಃ ಧೂಮ್ರಪಾನ ಮಾಡುತ್ತಿದ್ದರೆಂದು ಹಿಂದೆಯೇ ಹೇಳಿದೆ. ಅವರಿಗೆ ಸಾಹೇಬ ಜನರಮಟ್ಟಿಗೆ ಸ್ಪೃಶ್ಯಾಸ್ಪೃಶ್ಯದ ಭೇದವು ತೋರುತ್ತಿರಲಿಲ್ಲ; ಆದರೆ ಚಂದೂನಿಟ್ಟಿದ್ದ ಚಟೀಗಾರ ನೌಕರನಿಂದ ಅವರು ತಮ್ಮ ಯಾವ ಕೆಲಸವನ್ನೂ ಮಾಡಿಸಿಕೊಳ್ಳುತ್ತಿರಲಿಲ್ಲ; ಮತ್ತು ಅವನನ್ನು ಪಡಸಾಲೆಯ ಹೊರಗಡೆಯಲ್ಲೇ ಇರಿಸುತ್ತಿದ್ದರು!

ಮಾಸಾಹೇಬರಿಗೆ ತಾವು ಕ್ಷತ್ರಿಯರೂ ತಮ್ಮ ಧರ್ಮವು ಶಾಕ್ತಪಂಥದ್ದೂ ಎಂಬದು ಮಾನ್ಯವಿತ್ತು; ಆದರೆ ನವರಾತ್ರಿಯಲ್ಲಿ ದುರ್ಗಾಷ್ಟಮಿಯ ದಿವಸ ತೀರ್ಥವೆಂದು ಒಂದು ಉದ್ಧರಣೆಯಷ್ಟು ಮದ್ಯವನ್ನು ಅವರು ಪ್ರಾಶನ ಮಾಡುತ್ತಿದ್ದರೇ ಹೊರತು, ಅದಕ್ಕೆ ಮಿಕ್ಕಿ ಅವರು ಎಂದೂ ವರ್ಶಿಸಿರಲಿಲ್ಲ. ಮಾಂಸಾಹಾರವನ್ನಂತೂ ಅವರು ಎಂದೂ ಸ್ಪರ್ಶಿಸಿರಲಿಲ್ಲ. ಅವರು ಕೇವಲ ಸನಾತನಿ ಮತದವರು. ಆದರಿಂದ ಧಾರ್ಮಿಕ ಬಾಬಿನ ತಮ್ಮ ಕೆಲಸಗಳಲ್ಲಿ ಅವರು ತಮ್ಮ ಗಂಡನಿಗೂ ಮಗನಿಗೂ ಎಂದೂ ಕೈಯಿಕ್ಕಗೊಡುತ್ತಿದ್ದಿಲ್ಲ; ಮತ್ತು ಅಂಥ ಬಾಬುಗಳಲ್ಲಿ ಅವರ ಧರ್ಮನಿಷ್ಠೆಯು ಪ್ರೇಮಕ್ಕಿಂತಲೂ

ಹೆಚ್ಚು ಕಠೋರವಾಗಿ ತೋರುತ್ತಿತ್ತು. ಆದರಿಂದ ಸಂದಭುವನದಲ್ಲಿ ವರ್ಷ ದೊಳಗಿನ ಬೇರೆ ಬೇರೆ ನೈಮಿತ್ತಿಕ ಕಾರ್ಯಕ್ರಮಗಳಲ್ಲಿ ಬೇರೆ ಬೇರೆ ಕಾಲಕ್ಕೆ ಮೂರು ಮೂರು ಪ್ರಕಾರದ ಪಂಕ್ತಿಗಳೇಳುತ್ತಿದ್ದವು. ಇರಲಿ.

ಇಂದಿನ ಔತಣದ ಪ್ರಸಂಗವು ಸರ ಸಾಹೇಬರು ಹಾಗು ಚಂದೂಲಾಲ ಇವರಿಬ್ಬರಿಗೂ ತಾಳಗೊಡತಕ್ಕಂತಹದಾಗಿತ್ತು; ಆದರೆ ಮಾಸಾಹೇಬರಿಗೆ ಅದು ಸೇರತಕ್ಕಂಥದ್ದಿರದ್ದರಿಂದ, ಅವರು ಒಬ್ಬಿಬ್ಬ ತಮ್ಮ ಖಾಸ ನೌಕರರ ಹೊರತು ಮಿಕ್ಕವರನ್ನೆಲ್ಲ ಆ ಔತಣದ ನೆರವಿಗೆ ಕಳಿಸಿದ್ದರು; ಆದರೆ ಸ್ವಂತಕ್ಕೆ ಆ ಔತಣದ ದರ್ಶನ ಕೂಡ ಅಪ್ರಿಯವೆಂದು, ಅವರು ನಡುಮನೆಯ ಬಾಗಿಲ ವನ್ನಿಕ್ಕಿಕೊಂಡು ಸಂಪೂರ್ಣ ಆಸಕ್ತವಾಗುವಂಥ ತಮ್ಮ ಬೇರೆ ಕೆಲಸಗಳಲ್ಲಿ ತೊಡಗಿದರು.

ರಾತ್ರಿಯ ಎಂಟುಗಂಟೆಗೆ ಊಟದ ಸೂಚನೆಯಾಯಿತು. ಆ ಕೂಡಲೆ ಹೊರ ಪಡಸಾಲೆಯೊಳಗಿನ ಅಭ್ಯಾಗತರು ಒಬ್ಬೊಬ್ಬರೇ ಭೋಜನಶಾಲೆಯ ಕಡೆಗೆ ಸಾವಕಾಶವಾಗಿ ನಡೆದರು. ಚಂದೂಲಾಲನು ತನ್ನೊಬ್ಬ ಜೀವನ್ಮಿತ್ರ ನೊಡನೆ ಮಾತಾಡಲಿಕ್ಕೆಂದು ಒಂದು ಕೋಣೆಯ ತುದಿಗೆ ಆತು ನಿಂತುಕೊಂಡಿ ದ್ದನು. ಇಷ್ಟರಲ್ಲಿ ತಂತಿ ಇಲಾಖೆಯ ಜವಾನನೊಬ್ಬನು ಒಂದು ತಂತಿ ತಕ್ಕೊಂಡು ಬಂದನು. ಅದು ಚಂದೂಲಾಲನ ಹೆಸರಿಗೇ ಇದ್ದುದರಿಂದ, ಅವನು ಅದನ್ನು ತಕ್ಕೊಂಡು ತನ್ನ ಕಚೇರಿಯ ಕೋಣೆಗೆ ಹೋದನು. ಅಲ್ಲಿ ರಸೀದಿಗೆ ಸಹಿ ಮಾಡಿ ಕೊಡಲು, ಆ ತಂತಿ ತಂದ ಜವಾನನು ಹೊರಟು ಹೋದನು. ಚಂದುವು ಆ ತಂತಿ ಕಾಗದದ ಲಕ್ಕೋಟೆ ಹರಿದು ಒಳಗಿನ ಕಾಗದದ ಮೇಲೆ ದೃಷ್ಟಿಯಿರಿಸುತ್ತಲೆ ಅದೇನಾಯಿತೋ ಯಾರಿಗೆ ಗೊತ್ತು? ಆತನು ಕುರ್ಚಿಯ ಮೇಲಿಂದ ಉರುಳಿ ನೆಲಕ್ಕೇ ಬಿದ್ದನು! ಅದು ದೂರಿನಿಂದ ಕಾಣಿಸಿದೊಡನೆಯೇ ಆತನ ಒಬ್ಬ ಗೆಳೆಯನಾದ ಡಾಕ್ಟರ ಜಾಲಂದರನು ಅವ ನೆಡೆಗೆ ಧಾವಿಸಿ ಬಂದನು. ಅವನು ಚಂದೂಲಾಲನನ್ನು ಸಾವರಿಸಿ ಹಿಡಿದು, ಅವನ ತಲೆಯ ಕೆಳಗೆ ಕೈಹಾಕಿದನು; ಮತ್ತು ಇದೇನು ಗೊಂದಲವೆಂಬ ದನ್ನು ನೋಡುವ ಸಲುವಾಗಿ ಆತನ ಕೈಯೊಳಗಿನ ಆ ತಂತಿಯ ಕಾಗದ ತೆಗೆದುಕೊಳ್ಳಲಿಕ್ಕೆ ಪ್ರಯತ್ನಿಸಿದನು. ಆ ಕೂಡಲೆ ಚಂದುವು ಅವಸರದಿಂದ ತನ್ನ ಕೈ ಮುಚ್ಚಿ, ಆ ತಂತಿಯ ಕಾಗದವನ್ನು ಮುಡಚಿ ಮುದ್ದೆ ಮಾಡಿ ತನ್ನ ಜಾಕೀಟಿನ ಒಳಗಿಸೆಯಲ್ಲಿ ತುರುಕಿಕೊಂಡನು. ಆ ತಂತಿಯನ್ನು ಬಚ್ಚಿಡುವ ಪ್ರಯತ್ನದಿಂದ ಉಂಟಾದ ಲಘುಬಲದಿಂದಲೇ ಆತನು ನೆಟ್ಟಗೆ ಎದ್ದುನಿಂತನು; ಮತ್ತು 'ನೀನು ಹೋಗು; ನಾನು ಅಲ್ಪಾವಕಾಶದಲ್ಲಿಯೇ ಬರುತ್ತೇನೆ'

ಹೀಗೆಂದು ತನ್ನ ಮಿತ್ರನಿಗೆ ಹೇಳಿ, ಕೂಡಲೆ ಅಟ್ಟದ ಸಾವಟಿಗೆಗಳನ್ನು ಹತ್ತಿ ಮೇಲಂತಸ್ತಿನೊಳಗಿನ ತನ್ನ ಕೋಣೆಗೆ ಹೋಗಿ ಒಳಗಿನಿಂದ ಬಾಗಿಲವನ್ನಿಕ್ಕಿ ಕೊಂಡು ಆರಾಮ ಖುರ್ಚಿಯ ಮೇಲೆ ಅಡ್ಡಾದನು.

ಔತಣಕ್ಕೆ ನಿಮಂತ್ರಿತರಾದ ಜನರು ಭೋಜನಶಾಲೆಗೆ ಹೋಗಿ ಮೇಜಿನ ಎದುರು ಕುಳಿತಿದ್ದರು; ಮತ್ತು ತಮ್ಮ ತಮ್ಮ ಕರವಸ್ತ್ರಗಳನ್ನು ಬಿಚ್ಚಿ ತೊಡೆಯ ಮೇಲೆ ಚಲ್ಲಿಕೊಂಡು ಊಟಕ್ಕೆ ಸಿದ್ಧರಾಗಿದ್ದರು. ಡಾಕ್ಟರ ಜಾಲಂದರನೂ ಬಂದು ಮೇಜಿನ ಬಳಿ ತನ್ನ ಸ್ಥಳದಲ್ಲಿ ಕುಳಿತನು. 'ನೀನು ಹೋಗು; ನಾನು ಇಷ್ಟರಲ್ಲೇ ಬರುತ್ತೇನೆ' ಎಂದು ಚಂದುವು ಹೇಳಿದ್ದರಿಂದ, ಈಗ ಬಂದಾನು; ಇಷ್ಟರಲ್ಲೇ ಬಂದಾನು, ಎಂದು ಈತನು ದಾರಿಕಾಯುತ್ತ ಕುಳಿತನು; ಆದರೆ ತಾನು ಕಂಡ ದೃಶ್ಯದ ಉಚ್ಚಾರವನ್ನು ಮಾತ್ರ ಯಾರ ಮುಂದೂ ಮಾಡದೆ ಮನಸ್ಸಿನಲ್ಲಿಯೇ ನುಂಗಿಕೊಂಡನು. ಅದರ ಬೊಬ್ಬಾಟವಾಗಬಾರದೆಂದು ಆತನ ಇಚ್ಛೆಯಿದ್ದಿತು; ಆದರೆ ಎಂಟು ಹತ್ತು ನಿಮಿಷಗಳು ಕಳೆದರೂ ಚಂದೂ ಬಾರದ್ದನ್ನು ಕಂಡು, ಡಾಕ್ಟರ ಜಾಲಂದರನು:—"ನಾನು ಹೋಗಿ ಆತನನ್ನು ಕರೆತರುವೆನು. ನೀವೆಲ್ಲರೂ ಊಟಕ್ಕೆ ಪ್ರಾರಂಭಿಸಿರಿ. ಅವನು ಯಾವುದೊಂದು ಅತ್ಯವಸರದ ಚೀಟಿ ಬರೆಯುಲಿಕ್ಕೆಂದು ಅಟ್ಟಕ್ಕೆ ಹೋಗಿರಬಹುದು" ಎಂದು ಹೇಳಿ, ಆತನು ಅಟ್ಟಕ್ಕೆ ಹೋದನು. ಅವನು ಚಂದೂನ ಕೋಣೆಯ ಬಾಗಿಲ ಬಡಿದನು ಆಗ ಚಂದುವು ಎದ್ದು ಬಂದು ಬಾಗಿಲ ತೆರೆದನು. ಚಂದೂನ ಮುಖಚರ್ಯೆಯು ಅತ್ಯಂತ ಇಳಿದುಹೋಗಿತ್ತು. ಆಗ ಅವನ ಕಣ್ಣೊಳಗಿಂದ ನೀರು ಹರಿಯುತ್ತಿತ್ತೆಂಬದು ಜಾಲಂದರನಿಗೆ ಕಂಡಿತು.

ಆಗ ಜಾಲಂದರ—"ಏಲೋ, ಹೀಗೇಕೆ? ನಿನಗೇನಾಯಿತು? ನಿನಗೆ ಒಮ್ಮೆಲೆ ಬವಳಿ ಬರಲಿಕ್ಕೆ ಕಾರಣವೇನಾಯಿತು? ಏತಕ್ಕಾಗಿ ನಿನಗೆ ದುಃಖವೆನಿಸಿದೆ?"

ಚಂದೂ:—"ನಾನು ಅದಾವುದನ್ನೂ ಹೇಳಲಾರೆನು; ಮತ್ತು ನಾನು ಕೆಳಗಿಳಿದೂ ಬರುವದಿಲ್ಲ. ಈಗ ನನ್ನ ಕಾಲಲ್ಲಿ ಅಟ್ಟವನ್ನಿಳಿದು ಬರುವಷ್ಟು ಶಕ್ತಿ ಕೂಡ ಇಲ್ಲ."

ಜಲಂದರ—"ಹೀಗೇಕೆ ಮಾಡಬೇಕೋ ಹುಚ್ಚಹುಡುಗಾ! ನಾನು ನಿನ್ನನ್ನು ಸಾವರಿಸಿಕೊಂಡೊಯ್ಯುತ್ತೇನೆ. ಕೆಳಗೆ ಎಲ್ಲ ನಿಮಂತ್ರಿತರೂ ಟೇಬಲ್ಲಿನೆದುರಿಗೆ ಕುಳಿತು ನಿನ್ನ ನಿರೀಕ್ಷಣೆ ಮಾಡುತ್ತಿರುವರು. ಅದರಿಂದ ಈಗ ನೀನು ಹೀಗೆಂದರೆ ಹೇಗೆ ನಡೆದೀತು? ಅವರದೆಲ್ಲ ವಿರಸವಾಗಬಾರದಂತೆ ಮಾಡಬೇಕಾದರೆ ನೀನು ಪ್ರಯತ್ನಪೂರ್ವಕವಾದರೂ ಸಾಕಷ್ಟು ಧೈರ್ಯ ತಾಳಿ ಕೆಳಗಿಳಿದು

ಬಂದು ಈ ಔತಣದ ಕೆಲಸವನ್ನು ಬಗೆಹರಿಸಬೇಕು. ನಿನ್ನ ಬೇನೆಯ ಕಾರಣ ವನ್ನು ನೀನು ನನಗೆ ಕೂಡ ಈಗ ತಿಳಿಸಬೇಡ. ಅದನ್ನು ಗುಪ್ತವಾಗಿಯೇ ಇರಿಸು; ಆದರೆ ನೀನೀಗ ಕೆಳಗಡೆ ಬಾರದಿದ್ದರೆ, ಈ ಸಾಧಾರಣ ಗೌಪ್ಯದ ಬೊಬ್ಬಾಟವು ಭಯಂಕರವಾಗುವದು. ಮುಂದೆ ಅದು ನಿನ್ನದು ನಿನಗೇ ಸಹಿಸಲಶಕ್ಯ ವಾದೀತು. ಇದೊಂದು ಪ್ರಸಂಗವನ್ನು ಹೇಗಾದರೂ ಸಾವರಿಸಿ ಮುಗಿಸಿಬಿಡು. ಬಳಿಕ ಮುಂದೇನು ಮಾಡಬೇಕೆಂಬದನ್ನು ವಿಚಾರಮಾಡಲಿಕ್ಕೆ ನಿನಗೆ ಇಡೀ ರಾತ್ರಿಯು ನಿವಾಂತವಾಗಿ ಲಭಿಸುವದು ನಿನಗೆ ಯಾವ ಸಂಕಟವುಂಟಾಗಿದೆ ಯೆಂಬದು ನನಗೆ ತಿಳಿಯಲೊಲ್ಲದು; ಆದರೆ ಪ್ರಸ್ತುತ ಪ್ರಸಂಗದ ಮಹತ್ವವು ಮಾತ್ರ ನನಗೆ ತಿಳಿಯುತ್ತದೆ. ನೀನು ಸಮಂಜಸನಿರುತ್ತೀ. ಆದರಿಂದ ಇದಕ್ಕಿಂತಲೂ ಹೆಚ್ಚು ನಾನು ನಿನಗೇನು ಹೇಳಲಿ?"

ಇಷ್ಟು ಹೇಳಿದರೂ ಕೂಡ ಚಂದುವು ಎಷ್ಟೋ ಹೊತ್ತಿನವರೆಗೆ ಕೆಳಗಿಳಿದು ಬರಲಿಕ್ಕೆ ಸಿದ್ಧನಾಗಲೊಲ್ಲನು. ಆಗ ಆತನು– "ಏನೇ ಆದರೂ ನನ್ನಿಂದ ಈ ನನ್ನ ಕಂಬನಿಗಳನ್ನು ತಡೆಯಲಾಗುವುದಿಲ್ಲ; ಮತ್ತು ಅಲ್ಲಿ ಇವು ಯಾರಿಗಾದರೂ ಕಂಡರೆ, ಅದರ ವಿಚಾರಣೆ ನಡೆಯತಕ್ಕದ್ದೇ. ಆದರಿಂದ ಇನ್ನಾರೂ ಮೇಲೆ ಬರುವ ಮುಂಚೆ ನೀನೇ ಕೆಳಗಿಳಿದು ಹೋಗು; ಅಲ್ಲಿಯವರಿಗೆ ಏನು ಬೇಕಾದ ನೆವ ಹೇಳು; ಆದರೆ ನನ್ನ ದಾರಿ ಕಾಯದೆ, ನೀವೆಲ್ಲರೂ ಊಟ ತೀರಿಸಿಕೊಳ್ಳಿರಿ."

ಜಾಲಂದರ: –"ಚಂದೂಲಾಲ, ನೀನು ಹುಚ್ಚನಾಗಿರುತ್ತೀ. ಬವಳಿ ಬಂದ ನಿನ್ನನ್ನು ಇಲ್ಲಿಯೇ ಬಿಟ್ಟು, ಮಿಕ್ಕವರು ಊಟವನ್ನು ಹೇಗೆ ಮಾಡಿಯಾರು? ನಿನ್ನ ಬವಳಿಯ ಸಂಗತಿ ತಿಳಿದು, ನಿನ್ನ ಹಿರಿಯರು ಮೊದಲು ಮಾಡಿಕೊಂಡು ಬಹು ಜನರು ನಿನ್ನ ಸಮಾಚಾರಕ್ಕೆಂದು ಇಲ್ಲಿಗೆ ಬರಹತ್ತುವರು; ಮತ್ತು ಆ ಮೇಲೆ ಎಷ್ಟು ಗೊಂದಲವೆದ್ದೀತು? ಯೋಚಿಸು. ಅದಕ್ಕಿಂತ ಗಟ್ಟಿ ಮನಸ್ಸು ಮಾಡಿಕೊಂಡು ನೀನೇ ಕೆಳಗಿಳಿದು ಬಾ; ಮೇಜಿನ ಬಳಿ ಕುಳಿತುಕೋ. ಅಲ್ಲಿ ನೀನು ಏನೂ ತಿನ್ನದಿದ್ದರೂ ಅಡ್ಡಿಯಿಲ್ಲ. ಸಿಗರೇಟಿನ ಹೊಗೆಯು ಎದೆಗೆ ಬಡೆದಿದ್ದರಿಂದ, ನಿನಗೆ ಕೊಂಚ ಬವಳಿ ಬಂದಿತ್ತೆಂದು ಹೇಳಿ, ನಾನು ಇದನ್ನೆಲ್ಲ ಹೇಗಾದರೂ ಸಾವರಿಸಿಕೊಳ್ಳುವೆನು. ಈ ಔತಣವು ತೀರಿ ಎಲ್ಲ ಜನರು ತಂತಮ್ಮ ಮನೆಗೆ ಹೊರಟು ಹೋದ ಬಳಿಕ ನೀನೂ ನಾನೂ ಕೂಡಿ ಇಲ್ಲಿ ಕುಳಿತು ಮಾತಾಡೋಣವಂತೆ."

ಎಂದು ಹೇಳಿ ಡಾಕ್ಟರ ಜಾಲಂದರನು ತನ್ನ ಜೇಬಿನೊಳಗಿನ ಕರವಸ್ತ್ರವನ್ನು ನೀರಿನಲ್ಲಿ ಅದ್ದಿ, ಚಂದೂನ ಕಣ್ಣು ಮತ್ತು ಗಲ್ಲಗಳನ್ನು ಒರಿಸಿದನು;

ಹಾಗು ಅವನನ್ನು ಒತ್ತಾಯದಿಂದಲೇ ಎಬ್ಬಿಸಿ, ಬಗಲಲ್ಲಿ ಕೈಯಿರಿಸಿಕೊಂಡು ಕೆಳಗೊಯ್ದು ಆತನ ಖುರ್ಚಿಯ ಮೇಲೆ ಕೂಡ್ರಿಸಿದನು; ಮತ್ತು ಬೇರೆಯವರಿಂದಾಗುವ ಪ್ರಶ್ನೆಗಳ ಸುರಿಮಳೆಯ ಸಂಕಟದೊಳಗಿಂದ ಒಮ್ಮೆಲೆ ಪಾರಾಗಿ ಹೋಗುವದಕ್ಕೆಂದು ಗಟ್ಟಿದನಿಯಿಂದ-"ಇತ್ತ ನೋಡಿರಿ. ಎದೆಯೊಳಗೆ ಸಿಗರೇಟಿನ ಹೊಗೆ ಸೇರಿದ್ದರಿಂದ ನಮ್ಮ ಚಂದೂನಿಗೆ ಬವಳಿ ಬರಹತ್ತಿದೆ; ಆದರೆ ಡಾಕ್ಟರ ನಾತೆಯಿಂದ ನಾನು ತಿಳಿಸುವುದೇನಂದರೆ, ಆ ಬಗ್ಗೆ ಗಾಬರಿ ಪಡುವ ಕಾರಣವಿಲ್ಲದ್ದರಿಂದ ನೀವೆಲ್ಲರೂ ನಿಮ್ಮ ಊಟವನ್ನು ಯಥಾಕ್ರಮವಾಗಿ ಸಾಗಿಸಬೇಕು. ಈತನೊಡನೆ ಸದ್ಯಕ್ಕೆ ಮಾತನಾಡುವ ಪ್ರಯತ್ನವನ್ನು ಯಾರೂ ಮಾಡಬಾರದು; ಅಂದರೆ ಕೆಲ ನಿಮಿಷಗಳಲ್ಲೇ ಹೆಚ್ಚು ಹುಷಾರಾಗಿ, ಈತನು ಮೇಲೆ ತನ್ನ ಕೋಣೆಗೆ ಹೋಗಿ ಮಲಗುವನು. ನಿದ್ದೆಯಾದ ಬಳಿಕ ಇವನು ಮತ್ತೆ ಮೊದಲಿನಂತಾಗುವನು."

ನಡೆದ ನಿಜ ಸಂಗತಿಯನ್ನು ಆ ಡಾಕ್ಟರ ಮಿತ್ರನ ಹೊರತು ಬೇರೆ ಯಾರೂ ಕಂಡಿರಲಿಲ್ಲ; ಮತ್ತು ಬವಳಿಯ ಕಾರಣವೆಂದು ಡಾಕ್ಟರನು ಹೇಳಿದ ಆ ಸಂಗತಿಯು ಸರ್ವರಿಗೂ ದಿಟವೆಂದು ತೋರಿತು. ಏನೇ ಆದರೂ ಔತಣದ ಆನಂದವು ಲುಪ್ತವಾಯಿತು. ಏನೂ ಮಾತನಾಡದೆ ಉಂಡರೆ ವಿಹಿತವಲ್ಲೆಂದು ಬಗೆದು, ಕೆಲಕೆಲವರು ಏನೇನೋ ಅಲ್ಪಸ್ವಲ್ಪ ಮಾತನಾಡಿದರು. ತನ್ನ ಪ್ರಯತ್ನದಿಂದಾದರೂ ಚಂದೂಲಾಲನ ವಿನೋದ ಬುದ್ಧಿಯು ಕೊಂಚಮಟ್ಟಿಗೆ ಜಾಗ್ರತವಾಗಬೇಕು; ಮತ್ತು ಆತನಿಗೆ ನಗುವು ಉಂಟಾಗಿ, ಆತನ ಬವಳಿ ಹರಿದು ಹೋಗಬೇಕೆಂದು ಒಬ್ಬನು:—'ಇಂದು ಪೇಟೆಯಲ್ಲಿ ಒಂದು ಮಂಗವು ಅಂಗಡಿಯೊಳಗಿನ ಸನಗನ್ನು ಗೌಪ್ಯವಾಗಿ ಎತ್ತಿಕೊಂಡು ಹೋಯಿತು; ಮತ್ತು ಕಳ್ಳರ ಹೂಲಿಯೆಬ್ಬಿಸಲಿಕ್ಕೆ ಅದೊಂದು ಕಾರಣವಾಯಿತು' ಎಂಬ ಸಂಗತಿಯನ್ನು ಬಹು ಮೋಜಿನಿಂದ ವರ್ಣಿಸಿದನು. ಮತ್ತೊಬ್ಬನು ಕೋರ್ಟಿನೊಳಗಿನ ಮೋಜುಗಳನ್ನು ಹೇಳಿದನು:—'ಇಂದು ಮೂರು ಗಂಟೆಯ ವರೆಗೂ ಕೋರ್ಟಿನ ಕೆಲಸಕ್ಕೆ ಪ್ರಾರಂಭವೇ ಆಗಲೊಲ್ಲದು; ಆಗ ಶಿರಸ್ತೆದಾರನು ಬಾರ ರೂಮಿಗೆ ಬಂದು:—"ಇಂದು ಕೋರ್ಟಿನ ಹೆಂಡತಿ ಬೆನೇ ತಿನ್ನುತ್ತಿರುವಳು. ಕಾರಣ ಕೋರ್ಟ ಮುಚ್ಚಲಾಗಿದೆ" ಎಂದು ತಿಳಿಸಿದನು. ಕೂಡಲೆ ಬಾರ ರೂಮಿನೊಳಗಿನ ಚೇಷ್ಟೆಗಾರರಿಗೇನು? 'ಮುನಸೀಫರ ಹೆಂಡತಿ' ಎನ್ನುವ ಬದಲು 'ಕೋರ್ಟಿನ ಹೆಂಡತಿ' ಎಂಬ ಶಬ್ದಪ್ರಯೋಗವು ತಪ್ಪಿನಿಂದಾದ್ದರಿಂದ ವಿನೋದೀ ಬುದ್ಧಿಗೆ ಅದರ ಮೇಲೆ ಹಲವು ಕಲ್ಪನೆಗಳು ಉಂಟಾದವು. ಪ್ರತಿಭಾಸಂಪನ್ನ ಹಾಸ್ಯಲಹರಿಗಳು ಎಷ್ಟು ಉಂಟಾಗಲು ಶಕ್ಯ

ವೋ ಅಷ್ಟು ಮತ್ತೂ ಹಾಗೆ ಉಂಟಾದವು; ಮತ್ತು ಇದಾದ ಬಳಿಕ ಯಾವ ನೊಬ್ಬನು ಬಹುರೂಪಿಯ ವೇಷದಿಂದ ತಾನು ಈ ದಿನ ಹೇಗೆ ಮೋಸಹೋದ ನೆಂಬುದನ್ನೇ ಹೇಳಿದನು. ಒಬ್ಬನು ತನ್ನ ಹೆಂಡತಿಯು ಮರವಿನಿಂದ ಉಪ್ಪುಕಾರಗಳ ಅತ್ಯಾಚಾರ ಹೇಗೆ ನಡೆಸಿದಳೆಂಬದನ್ನು ಮತ್ತಿಷ್ಟು ಉಪ್ಪು-ಕಾರ ಹಚ್ಚಿ ಹೇಳಿದನು. ಜಾಲಂದರನ ಖುರ್ಚಿಯು ಚಂದೂಲಾಲನ ಬಳಿಗೇ ಇದ್ದುದರಿಂದ, ಅವನು ಮಾತ್ರ ಆ ವಿನೋದದಲ್ಲಿ ಭಾಗವಹಿಸುತ್ತಿರ ಲಿಲ್ಲ. ಚಂದೂನ ಧೈರ್ಯ ಕುಗ್ಗಿದ ಪ್ರದರ್ಶನವಾಗಬಾರದು, ಅವನಿಗೆ ಆಶ್ವಾಸನ-ಉತ್ತೇಜನಗಳು ದೊರೆಯಬೇಕು ಎಂದು ಅವನು ಯಾವುದೊಂದು ಶಬ್ದವನ್ನು ಆಗಾಗ್ಗೆ ಯಾರಿಗೂ ಕೇಳಬಾರದ ರೀತಿಯಲ್ಲಿ ಬಹು ಮೆಲ್ಲನೆ ಚಂದೂಲಾಲನಿಗೆ ಹೇಳುತ್ತಿದ್ದನು. ಸುದೈವದಿಂದ ಸರ ಸಾಹೇಬರು ಆ ಕಾಲಕ್ಕೆ ಪ್ರಾಂತಸಾಹೇಬರೊಡನೆ ತೋಟದೊಳಗೆ ಹೋಗಿದ್ದರು; ಮತ್ತು ತಾವು ಅವರ ಮನೆಗೇ ಊಟಕ್ಕೆ ಹೋಗಬೇಕಾಗಿದೆಯೆಂದು ಹೇಳಿ ಮನೆಯು ಔತಣಕ್ಕೆ ಗೈರಹಾಜರ ಆಗಿದ್ದರು. ಚಂದೂನ ಖಾಸ, ಸಮವಯಸ್ಕ ಗೆಳೆಯರ ಔತಣ; ಅದರಲ್ಲಿ ತಾಪಿರಬಿರುವುದೇ ವಿಹಿತವೆಂದು ತಿಳಿದು, ಅವರು ತಾವಾ ಗಿಯೇ ಇಂದು ಆ ಬೇರೆ ಮಾರ್ಗವನ್ನು ಹಿಡಿದಿದ್ದರು. ಅದರಿಂದ ಹೆಚ್ಚು ವಿಚಾರಣೆ, ಹೆಚ್ಚು ಗೊಂದಲಗಳುಂಟಾಗುವದು ಮಾತ್ರ ತಪ್ಪಿತು; ಮತ್ತು ಡಾಕ್ಟರ ಜಾಲಂದರನ ಸಮಯಸೂಚಕತೆಯ ಮೂಲಕ ಎಲ್ಲವೂ ಸರಿಯಾಗಿ ಸಾಗಿ, ಅಭ್ಯಾಗತರೆಲ್ಲರೂ ತಮ್ಮ ತಮ್ಮ ಮನೆಗೆ ಹೊರಟು ಹೋದರು.

ಬಳಿಕ ಅವರಿಬ್ಬರೂ ಮತ್ತೆ ಅಟ್ಟದ ಮೇಲೆ ಹೋದರು ಆಗ ಚಂದುವು: "ಡಾಕ್ಟರ, ನಿನ್ನ ಸಮಯಸೂಚಕತೆಯ ಬಗ್ಗೆ ನಾನು ನಿನಗೆ ಅತ್ಯಂತ ಆಭಾರಿ ಯಾಗಿರುತ್ತೇನೆ; ಆದರೆ ನಿನ್ನೊಡನೆಯೂ ಈಗ ನನ್ನಿಂದ ಹೆಚ್ಚು ಮಾತ ನಾಡುವುದಾಗುವುದಿಲ್ಲ; ಆದರೆ ನೀನು ನನ್ನ ಸಲುವಾಗಿ ಯಾವ ಕೆಲ ವಿಶಿಷ್ಟ ನೆವ ಮುಂದುಮಾಡಿದೆಯೋ, ಅದರಂತೆ ನನಗೆ ಸೂಚಿಸುವುದೂ ಇಲ್ಲ; ಮತ್ತು ಅದು ಕರ್ತವ್ಯವೂ ಅಲ್ಲ. ಆದರಿಂದ ನಾನು ನಿನಗೆ 'ನನ್ನ ದುಃಖಕ್ಕೆ ಕಾರಣವು ಇದೊಂದು ನನ್ನ ಗುಪ್ತರಹಸ್ಯವಿದೆ' ಎಂದಿಷ್ಟೇ ತಿಳಿಸುತ್ತೇನೆ; ಮತ್ತು ನೀನು ನನ್ನ ಪ್ರಿಯಮಿತ್ರನಾಗಿದ್ದರೂ ಕೂಡ ಅದನ್ನು ನಿನ್ನೆದುರು ಸಹ ಪ್ರಕಟಗೊಳಿಸ ಲಿಕ್ಕೆ ನನ್ನ ಇಚ್ಛೆ ಇಲ್ಲ. ಇಷ್ಟು ಸ್ಪಷ್ಟ ನನ್ನ ಬಾಯಿಂದ ಹೊರಟ ಬಳಿಕ, ನೀನು ಆ ಬಗ್ಗೆ ಪುನಃ ನನ್ನೊಡನೆ ಪೃಚ್ಛಾಪೃಚ್ಛ ಮಾಡಲಿಕ್ಕಿಲ್ಲ. ತಮ್ಮ ರಹಸ್ಯಗಳನ್ನು ಗುಪ್ತವಾಗಿರಿಸಲೇಬೇಕೆಂಬ ಅಧಿಕಾರವು ನಿಮ್ಮ ಡಾಕ್ಟರ ಜನ ರಿಗೆ ತಮ್ಮ ರೋಗಿಗಳ ಬಗ್ಗೆ ಹೇಗಿದೆಯೋ, ಅದರಂತೆಯೇ ವ್ಯಕ್ತಿಮಾತ್ರರಿಗೆ

ಸ್ವಂತದ ಸಂಬಂಧದಲ್ಲಿ ಆ ಅಧಿಕಾರವಿರುವದಿಲ್ಲವೇ? ನೀವು ಶರೀರ ಭಾವನೆಗಳಿಗೆ ಉಪಚಾರ ಮಾಡತಕ್ಕ ಡಾಕ್ಟರರು; ಆದರೆ ಮನೋಭಾವನೆಯ ರೋಗ ವುಂಟಾದವನ ಡಾಕ್ಟರನು ಸ್ವತಃ ಅವನೇ ಆಗಬಲ್ಲನು; ಬೇರೆ ಯಾರೂ ಆಗಲಾರರು. ಆದರಿಂದ ದಯವಿಟ್ಟು ಇನ್ನು ಇಲ್ಲಿಂದ ಹೊರಡು. ನನಗೆ ತೀರ ಸಾದಾ ಸ್ಮೆಲ್ಲಿಂಗ ಸಾಲ್ಟದ ಹೊರತು ಬೇರೆ ಯಾವ!ಹೆಚ್ಚಿನ ಉಪಚಾರಗಳೂ ಬೇಕಿಲ್ಲ. ನಿದ್ದೆಯೂ ಹತ್ತೀತು; ಆದರೆ ತುಸ ತಡವಾಗಿ ಹತ್ತೀತಿಷ್ಟೇ. ಮಾ ಸಾಹೇಬರು ನಡುಮನೆಯ ಕದವನ್ನು ಮುಚ್ಚಿಂಜೆಯಿಂದಲೇ ಇಕ್ಕಿಕೊಂಡಿರುನರು. ಯಾವ ಔತಣಗಳ ನಂತರವೂ ಅವರು ರಾತ್ರಿ ನನ್ನ ವಿಚಾರಣೆಯನ್ನು ಮಾಡುವ ಉಸಾಬರಿಗೆ ಹೋಗಬಾರದೆಂಬದು ಅವರಿಗೆ ಗೊತ್ತಿದೆ; ಮತ್ತು ತಂದೆಯವರಾದರೂ ಇಂದು ತಡವಾಗಿಯೇ ಮನೆಗೆ ಬರತಕ್ಕವರು. ತಾತ್ಪರ್ಯವೇನಂದರೆ, ಇನ್ನು ನನ್ನಷ್ಟಕ್ಕೆ ನಾನಿರುತ್ತೇನೆ. ಕಾರಣ ನೀನು ನನ್ನನ್ನು ಕ್ಷಮಿಸು.''

ಚಂದುವು ಇಷ್ಟು ಸ್ಪಷ್ಟವಾಗಿ ತಿಳಿಸಿದ ಬಳಿಕ ಇನ್ನು ಇಲ್ಲಿ ಹೆಚ್ಚು ವೇಳೆ ಮಾತಾಡುತ್ತ ನಿಲ್ಲುವುದು ಸರಿಯಲ್ಲವೆಂಬುದು ಡಾಕ್ಟರ ಜಾಲಂದರಸಿಗೆ ಗೊತ್ತಾಯಿತು. ವೈದ್ಯಕ ದೃಷ್ಟಿಯಿಂದಲೂ ಇನ್ನು ಏಕಾಂತವೇ ಚಂದೂ, ನಿನಗೆ ಔಷಧವೇ ಆದೀತು, ಎಂದಂದು ಡಾಕ್ಟರನು ಎದ್ದನು. ಆತನು ಪ್ರೇಮಭರದಿಂದ ಚಂದೂನ ಬೆನ್ನ ಮೇಲೊಮ್ಮೆ ಚಪ್ಪರಿಸಿದನು; ಮತ್ತು:-''ಸಂಕಟಗಳು ಎಲ್ಲರಿಗೂ ಬರುತ್ತಿರುತ್ತವೆ; ಮತ್ತು ಒಬ್ಬರ ಸಂಕಟಗಳ ಬಗ್ಗೆ ಇನ್ನೊಬ್ಬರು ಹೆಚ್ಚು ಚಿಕಿತ್ಸೆ ಮಾಡಬಾರದೆಂಬದೂ ನಿಜವಿದೆ; ಆದರೆ 'ಧೀರ ಸೋ ಗಂಭೀರ' ಎಂದಿಷ್ಟನ್ನೇ ಗೆಳೆಯನೆಂದು ನಾನು ನಿನಗೆ ತಿಳಿಸುತ್ತೇನೆ'' ಎಂದಂದು ಎಲ್ಲಿಂದ ಹೊರಬಿದ್ದನು; ಹಾಗು ಬಾಗಿಲವನ್ನಿಕ್ಕಿಕೊಂಡನು.

---

### ಗುರುಸಂಶೋಧನೆ

ಅಂದು ರಾತ್ರಿಯಲ್ಲಿ ಚಂದೂಲಾಲನಿಗೆ ತನ್ನ ಕೋಣೆಯ ಚಿಲಕ ತೆಗೆಯಬೇಕಾಗಲಿಲ್ಲ. ಅವನನ್ನು ಯಾರೂ ಎಬ್ಬಿಸಲಿಲ್ಲ; ಅವನಾದರೂ ಎದ್ದು ಯಾರನ್ನೂ ಕರೆಯಲಿಲ್ಲ. ಅವನು ಹಾಸುಗೆಯ ಮೇಲೆ ಬಿದ್ದು ಒಂದೇಸವನೆ ತಳಮಳಿಸುತ್ತ ಹೊರಳಾಡುತ್ತಿದ್ದನು. ತನ್ನ ಕಂಬನಿಗಳಿಂದ ಆತನು ಒಂದಲ್ಲ, ಎರಡು ತಲೆಗಿಂಬುಗಳನ್ನು ನೆನೆಸಿದನು. ಈ ಮಗ್ಗಲಿನಿಂದ ಆ ಮಗ್ಗಲಿಗೆ, ಆದರಿಂದ ಇದಕ್ಕೆ ಹೀಗೆ ಆತನು ಏಕೋಪ್ರಕಾರವಾಗಿ ಹೊರಳಾಡುತ್ತಿದ್ದನು. ನಡುನಡುವೆ ಎದ್ದು, ಬಾಯಿ ಮುಕ್ಕುಳಿಸಿ, ತಲೆಯ ಮೇಲೆ

ನೀರು ಸಿಂಪಡಿಸಿಕೊಂಡು ಬಂದು ಮತ್ತೆ ಹಾಸುಗೆಯ ಮೇಲಡ್ಡಾಗುತ್ತಿದ್ದನು.

ಇನ್ನು ತನ್ನೆಡೆಗೆ ಯಾರೂ ಬರಲಾರರೆಂದು ತಿಳಿದು, ಅಂದು ಸಂಜೆಗೆ ಬಂದಿದ್ದ ತಂತಿಯ ಕಾಗದದ ಮುದ್ದೆಯನ್ನು ಜಾಕೀಟಿನ ಜೇಬಿನಿಂದ ಹೊರ ತೆಗೆದು, ಬಿಚ್ಚಿ ಸರಿಪಡಿಸಿ ಮೇಜಿನ ಮೇಲಿಟ್ಟನು. ಅದರ ಹತ್ತರವೇ ವಿಲಾಯತಿಯಿಂದ ಕೆಲ ತಾಸುಗಳ ಮುಂಚೆ ಬಂದಿದ್ದ ಮೇರೀ ವೊಡಹಾಊಸಳ ಪತ್ರವನ್ನೂ ಇಟ್ಟನು.

ನಡುರಾತ್ರಿಯ ಹೊತ್ತಿಗೆ ತುಸ ತೂಕಡಿಕೆ ಬಂದು ಮಲಗಿ ಎಚ್ಚತ್ತ ನಂತರ ದೀಪಹೊತ್ತಿಸಿ ಟೇಬಲ್ಲ ಬಳಿ ಬಂದು ಕುಳಿತನು; ಹಾಗು ಯೋಚಿಸ ತೊಡಗಿದನು. ಈವನು ಆ ತಂತಿಯ ಕಾಗದವನ್ನು ತನ್ನ ಮನಸ್ಸಿನಲ್ಲಿಯೇ ಗಟ್ಟಿ ಗಟ್ಟಿಯಾಗಿ ಓದಿದನು. ಆ ತಂತಿಯ ಸಂಗತಿಯೇನಂದರೆ:—

Sorry to inform you that Mary Wodehouse suddenly died of heart disease at 3-30 A. M. on Wednesday 28th August, and was buried in the Union Church Thursday morning. Mary died with your name on her lips.

ಆದರೆ ಎರಡೇ ಗಂಟೆಗಳ ಮುಂಚೆ ಸ್ವಂತ ಮೇರಿಯ ಕೈಬರವಣಿಗೆಯ ಪತ್ರವು ಅವನ ಕೈಗೆ ಬಂದಿತ್ತು! ಆದರಿಂದ ಅವನು ಅದನ್ನು ಮತ್ತೆ ಮತ್ತೆ ಓದಿನೋಡಿದನು. ಪತ್ರದ ತಾರೀಖು ೧೨ನೇ ಅಗಸ್ಟವೆಂದಿತ್ತು. ಅದುವರೆಗೆ ಆಯ್. ಸಿ. ಎಸ್ಸಿನ ರಿಝುಲ್ಟಾಗಿರಲಿಲ್ಲವೆಂಬದು ಆ ಪತ್ರದೊಳಗಿನ ಒಂದೆರಡು ವಾಕ್ಯಗಳಿಂದ ಸ್ಪಷ್ಟವಾಗುತ್ತಿತ್ತು; ಅಲ್ಲದೆ ಅವಳು ಆ ರಿಝುಲ್ಟಿನ ಕಡೆಗೇ ಕಣ್ಣು ಇರಿಸಿ ಕುಳಿತಿದ್ದಳೆಂಬದೂ ತಿಳಿಯುತ್ತಿತ್ತು. ಆ ರಿಝುಲ್ಟಾದ ಕೂಡಲೆ ಚಂದ್ರೂನಿಂದ ಬರೆಸು ಹೋಗುವ ವರೆಗೆ ಹಿಂದುಸ್ತಾನಕ್ಕೆ ಹೊರಡುವ ಸಿದ್ಧತೆಯನ್ನು ಆಕೆ ನಡೆಸಿದ್ದಳೆಂಬದು ಆ ಪತ್ರದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿತ್ತು. ಆ ರಿಝುಲ್ಟು ೨೭ನೇ ಅಗಸ್ಟಿಗೆ ಆಯಿತು; ಯಾಕಂದರೆ ಅದು ಆದ ಕೂಡಲೆ ಅದೇ ದಿನವೇ ಚಂದ್ರೂನ ಮಿತ್ರನಾದ ಉದಯಶಂಕರನು ಚೋದ್ಯಪುರಕ್ಕೆ ತಂತಿಕೊಟ್ಟಿದ್ದನು; ಆದರೆ ಆ ದಿನ ಮೇರಿಯು ಒಂದುವೇಳೆ ಲಂಡನ್ನ ಬಿಟ್ಟು ಪರಸ್ಥಳಕ್ಕೆ ಹೋಗಿದ್ದರೆ ಅವಳಿಗೆ ಆ ರಿಝುಲ್ಟು ತಿಳಿದಿರಲಿಕ್ಕಿಲ್ಲ; ಅಥವಾ ಅದು ತಿಳಿಯಲಿಕ್ಕೂ ಮತ್ತು ಆಕೆಗೆ ಹೃದಯವಿಕಾರವಾಗಲಿಕ್ಕೂ ಗಂಟೇ ಬಿದ್ದಿರಬೇಕು; ಇಲ್ಲವೆ ಆ ರಿಝುಲ್ಟಿನ ಆನಂದದ ವಾರ್ತೆಯು ಅವಳ ಆ ಬೇನೆಯನ್ನು ವಾಸಿಪಡಿಸುವ ಬದಲು ವೃದ್ಧಿಗೇ ಕಾರಣವೇಕಾಗಿರಬಾರದು!

ಕೊನೆಗುಳಿದ ಸಂಗತಿಯೆಂದರೆ, ತಂತಿಯಲ್ಲಿ ಬರೆದ ಮೇರಿಯ ನಿಧನದ ಸ್ಪಷ್ಟ ವೇಳೆ. ಬುಧವಾರ ತಾ|| ೨೮ರ ನಸಕಿನ ವಿಲಾಯತಿಯೊಳಗಿನ ಮೂರೂವರೆ ಗಂಟೆಯೆಂದರೆ, ಚೋದ್ಯಪುರದ ಎಷ್ಟು ಗಂಟೆಯಾಗುವದು? ಚೋದ್ಯಪುರದ ಸೂರ್ಯೋದಯಕ್ಕಿಂತ ಮುಂಚೆಸರಾಸರಿ ಐದೂವರೆ ತಾಸಿಗೆ ಲಂಡನ್ನಿನಲ್ಲಿ ಸೂರ್ಯೋದಯವಾಗುತ್ತದೆ. ಅರ್ಥಾತ್ ಬುಧವಾರ ತಾ|| ೨೮ನೇ ನಸಕಿನ ಮೂರುವರೆ ಅಂದರೆ, ಚೋದ್ಯಪುರದಲ್ಲಿ ಬುಧವಾರ ತಾ|| ೨೮ರ ಬೆಳಗಿನ ಒಂಬತ್ತು ಗಂಟೆಯಾಗುತ್ತದೆ!

ಹಾಯ! ಹಾಯ! ಆ ಗಣಿತವು ಲಕ್ಷ್ಯದಲ್ಲಿ ಬಂದ ಕೂಡಲೆ ಚಂದುವಿಗೆ ಏನೋ ಆಕಸ್ಮಿಕ ಸ್ಮರಣವಾಗಿ, ಅವನು ಧಡಲ್ಲೆಂದು ಹಿಂದಕ್ಕೆ ಬಿದ್ದುಬಿಟ್ಟನು!

ಚಂದೂಲಾಲನು ಬುಧವಾರ ತಾ|| ೨೮ ಕ್ಕೆ ಬೆಳಗಿನ ಒಂಬತ್ತು ಗಂಟೆಯ ಸಮಯದಲ್ಲಿ ತಮ್ಮ ಮನೆಯ ಹಿಂದಿನ ತೋಟದಲ್ಲಿ ಬೇಟೆಗೆ ಹೋದಾಗ ಅಲ್ಲಿಯ ದೊಡ್ಡ ಬೇವಿನ ಮರದ ಮೇಲೆ ಕುಳಿತ ಕಪೋತ ಪಕ್ಷಿಗಳ ಜೋತೆಯನ್ನು ತನ್ನ ತುಬಾಕಿಯ ಒಂದೇ ಬಾರಿನಿಂದ ಕೊಂದು ನೆಲಕ್ಕೆ ಕೆಡಹಿದ್ದನೆಂಬದು ನಮ್ಮ ವಾಚಕರಿಗೂ ಗೊತ್ತಿದ್ದ ಸಂಗತಿಯಾಗಿದೆ. ಅಷ್ಟರಲ್ಲಿ ಬೇರೆ ಕಡೆಯಿಂದ ಆಕಸ್ಮಿಕವಾಗಿ ಬರುತ್ತಿದ್ದ ಒಬ್ಬ ಬೈರಾಗಿಯು ಆ ಬಗ್ಗೆ ಇವನನ್ನು ನಿಷೇಧಿಸಿದ್ದನು. ಆ ಹಿಂಸೆಯ ಬಗ್ಗೆ ಅವನು ಚಂದುವಿಗೆ ಶಾಪ ಕೊಟ್ಟದ್ದನಿಷ್ಟೇ ಅಲ್ಲ; ಆ ಶಾಪದ ನೆನಪು ಚನ್ನಾಗಿ ಉಳಿಯುವದಕ್ಕೆಂದು "ಮದಾಂಧಾ, ನಿರ್ದಯಾ, ದೇವರು ನಿನ್ನನ್ನು ನೋಡಿಕೊಂಡಾನು; ನಿನ್ನ ನ್ಯಾಯನಿರ್ಣಯ ಮಾಡಿಯಾನು. ಇಂದಿನ ಈ ದಿನ ಮತ್ತು ಈ ವೇಳೆಗಳನ್ನು ನೆನಪಿಟ್ಟುಕೋ. ಮರೆಯಬೇಡ'' ಎಂದು ಆತನು ಸಿಟ್ಟಿನಿಂದ ಹೇಳಿದ್ದನು; ಮತ್ತು ಚಂದುವು ಅವನನ್ನು ಹಳಿಯುತ್ತ "ಹಾಗೆಯೇ ಆಗಲಿ ನಾನು ಈ ದಿನ, ಈ ವೇಳೆಗಳನ್ನು ಲಕ್ಷ್ಯದಲ್ಲಿಟ್ಟಿರುತ್ತೇನೆ. ನೀನು ಸುಮ್ಮನೆ ನಿನ್ನ ದಾರಿ ಹಿಡಿದು ಹೋಗು ನಾನೂ ದೇವರೂ ನೋಡಿಕೊಳ್ಳುತ್ತೇವೆ." ಎಂದಂದಿದ್ದನು.

ಇತ್ತ, ಚೋದ್ಯಪುರದಲ್ಲಿ ತನ್ನ ತೋಟದೊಳಗೆ ಬುಧವಾರ ತಾ|| ೨೮ಕ್ಕೆ ಬೆಳಗಿನ ಯಾವ ವೇಳೆಗೆ ಚಂದುವು ಆ ಕಪೋತಪಕ್ಷಿಗಳನ್ನು ಕೊಂದು ಕೆಡಹಿದ್ದನೋ, ಅಂದೇ ಅದೇ ವೇಳೆಗೆ ಅತ್ತ ವಿಲಾಯತಿಯಲ್ಲಿ ಚಂದುವು ಮನಸ್ಸಿನಿಂದ ವರಿಸಿದ್ದ ಕುಮಾರಿಕೆಯು ಹೃದಯ ರೋಗದಿಂದ ಅಕಸ್ಮಾತ್ ಮೃತ್ಯುವಿಗೀಡಾಗಿದ್ದಳು! ಎಂಥ ಭಯಂಕರ ಚಮತ್ಕಾರಿಕ ದಾರುಣ ದುಃಖ ಕಾರಕವಾದ ಯೋಗಾಯೋಗವಿದು!

ಆತನು ಬಿಕ್ಕಿ ಬಿಕ್ಕಿ ಅಳತೊಡಗಿದನು. 'ಬಡ ಮೇರಿಯು ನನ್ನನ್ನು

ನೆನೆ-ನೆನೆಸುತ್ತ ಸತ್ತಳಲ್ಲವೆ? ಮದುವೆಗೆ ಮೊದಲೇ ಅವಳು ಪಾತಿವ್ರತ್ಯವನ್ನು ದಿಟಪಡಿಸಿದಳು! ಮತ್ತು ನಾನು? ನಾನು ಆಕೆಯ ಮರಣವಾರ್ತೆಯನ್ನು ಕೇಳೀ ಕೇಳಿಯೂ ಜೀವಿಸಿರುವೆನಲ್ಲವೆ? ನನಗೆ ಧಿಃಕಾರವು! ಮತ್ತು ನಾನೇ ಅಲ್ಲವೆ ಆಕೆಯ ಮರಣಕ್ಕೆ ಕಾರಣನಾದವನು? ನಾನು ಆ ಜೋಡು ಹಕ್ಕಿಗಳನ್ನು ವಧಿಸದಿದ್ದರೆ, ನನ್ನ ಮೇರಿಗೆ ಖಂಡಿತವಾಗಿಯೂ ಮರಣವುಂಟಾಗುತ್ತಿರಲಿಲ್ಲ! ಆ ಗುಂಡನ್ನು ನಾನು ಆ ಹಕ್ಕಿಗಳಿಗೆ ಹೊಡೆಯುವ ಬದಲು, ಮೇರಿಗೇ ನಿಜವಾಗಿ ಹೊಡೆದೆನು! ದೇವರು ನಿಜವಾಗಿಯೂ ನನ್ನ ನ್ಯಾಯ ನಿರ್ಣಯಮಾಡಿದನು. ಆ ಬೈರಾಗಿಯ ವಾಣಿಯು ದಿಟವಾಯಿತು. ಅವನು ಸೇಡಿನ ಹವ್ಯಾಸದ ದುಷ್ಟಬುದ್ಧಿಯಿಂದ ನನ್ನನ್ನು ಶಪಿಸಿಲ್ಲ; ಆದರೆ ಅಂತಜ್ಞಾನದಿಂದ ತೋಚಿದ್ದನ್ನೇ ಹೇಳಿರುವನೆಂಬದಕ್ಕೆ ಸಂಶಯವಿಲ್ಲ. ನಾನೀಗ ನನ್ನ ಜೀವಕೊಟ್ಟರೂ ಮೇರಿ ಬೇರೆ ಮತ್ತೆ ಜೀವಿಸಲಿಕ್ಕಿಲ್ಲ. ಆದ್ದರಿಂದ ನನ್ನ ಶೇಷಾಯುಷ್ಯವನ್ನು ಆ ಬೈರಾಗಿಯ-ಸಾಧುವಿನ ಸ್ವಾಧೀನಪಡಿಸುವದೇ ಉತ್ತಮ ಮಾರ್ಗವು. ಇನ್ನು ನನಗೆ ಈ ಆಯ್. ಸಿ. ಎಸ್ಸಿನ ದರಿದ್ರ ನೌಕರಿ ಏತಕ್ಕೆ ಬೇಕಾಗಿದೆ?" ಇಂಥ ಮತ್ತು ಬೇರೆ ಹಲವು ಕರುಣವಿಲಾಪಗಳಿಂದ ಆತನು ತನ್ನ ದುಃಖವನ್ನು ಹಗುರುಮಾಡಿಕೊಳ್ಳುವ ಪ್ರಯತ್ನ ಮಾಡಿದನು; ಹಾಗು ಆ ಪ್ರಯತ್ನಕ್ಕೆ ಕೊಂಚ ಯಶವೂ ದೊರೆದಂತೆ ತೋರಲು, ಅವನು ಆ ತಂತಿ ಮತ್ತು ಪತ್ರಗಳನ್ನು ಮತ್ತೆ ಕೀಲಿಯಲ್ಲಿ ತೆಗೆದಿರಿಸಿದನು; ಮತ್ತೂ ಮತ್ತೆ ಹೋಗಿ ಹಾಸುಗೆಯ ಮೇಲೆ ಬಿದ್ದುಕೊಂಡನು. ಹೆಚ್ಚಾದ ಮಾನಸಿಕ ಶ್ರಮದಿಂದ ನಿದ್ದೆ ಬಾರದಿರುವಂತೆ, ಒಮ್ಮೊಮ್ಮೆ ಅದು ಬಂದೂ ಬರುತ್ತದೆ. ಚಂದೂವಿಗಾದರೂ ಈಗ ಹಾಗೆಯೇ ನಿದ್ದೆಹತ್ತಿತು.

ಆ ಹೊಸ ನಿಶ್ಚಯದಿಂದ ಚಂದುವು ಮರುದಿನ ಬೆಳಿಗ್ಗೆ ಪ್ರಸನ್ನವಲ್ಲದಿದ್ದರೂ ನಿರ್ವಾಣದ ಮನಸ್ಸಾಮರ್ಥ್ಯದಿಂದ ಎಚ್ಚತ್ತು ಎದ್ದನು. ಆತನು ಚಟ್ಟನೆ ಮೋರೆ ತೊಳಕೊಂಡನು; ಮತ್ತು ತನ್ನ ತಂದೆ-ತಾಯಿಗಳು ರಾತ್ರಿಯು ತನ್ನ ಬವಳಿಯ ಸಂಗತಿ ತಿಳಿದು ಕದಾಚಿತ್ ಮೇಲೆ ತನ್ನ ಸಮಾಚಾರಕ್ಕೆ ಬಂದಾರೆಂದು, ಅವರಿಗಿಂತ ಮೊದಲೇ ತಾನು ಕೆಳಗಿಳಿದು ಹೋಗಿ, ಅವರಿಂದುಂಟಾಗುವ ಅಡಚಣಿಯ ಪ್ರಶ್ನೋತ್ತರಗಳನ್ನು ತಡೆಯಬೇಕೆಂದು ಅವನು ನಿರ್ಧರಿಸಿದನು. ಆ ಪ್ರಶ್ನೋತ್ತರಗಳನ್ನು ತಡೆಯುವದಕ್ಕಾಗಿ ಆತನು ತನ್ನಿಂದ ಶಕ್ಯವಾದಷ್ಟೂ ಪ್ರಯತ್ನಿಸಿದನು. ಆದರೂ ಕೂಡ ಸ್ವಲ್ಪಾದರೂ ಪ್ರಶ್ನೋತ್ತರಗಳು ನಡೆದೇಬಿಟ್ಟವು. ಚಂದೂಲಾಲನು ಚಹದ ಟೇಬಲ್ಲಿನ ಬಳಿಗೆ ಎಲ್ಲರಿಗಿಂತಲೂ ಮೊದಲು ಬಂದದ್ದರಿಂದ, ಮೊದಲನೇ ರಾತ್ರಿಯ ಆತನ

ಬವಳಿಯು ಸಂಗತಿ ತಮಗೆ ತಿಳಿದಿದ್ದರೂ ಕೂಡ ಸರ ಗಂಗಾರಾಮರಿಗೂ ಮಾಸಾಹೇಬರಿಗೂ ಇನ್ನು ಅದರ ಅಂಜಿಕೆಯು ಕಾರಣವುಳಿದಿರಲಿಲ್ಲ. ಇತ್ತಿಂದ ಸರ ಗಂಗಾರಾಮರು ಬಂದು ತೂಗಮಣೆಯ ಮೇಲೆ ಕುಳಿತರು. ಅತ್ತಿಂದ ಮಾಸಾಹೇಬರೂ ಬಂದು ಕುರ್ಚಿಯ ಮೇಲೆ ಕುಳಿತರು. ಅಂದಿನಂತೆ ಇಂದು ಚಂದುವು ಸಿಗರೇಟ ಸೇದಲಿಕ್ಕೆ ತೆಗೆಯದ್ದರಿಂದ ಮಾಸಾಹೇಬರ ನಿಷೇಧಕ್ಕೆ ಕಾರಣವುಂಟಾಗಲಿಲ್ಲ; ಆದರೆ ಮುನ್ನಾ ದಿನದ ಬವಳಿಗೆ ಸಿಗರೇಟಿನ ಹೊಗೆಯೇ ಕಾರಣವೆಂದು ತಿಳಿದಿದ್ದರಿಂದ, ಸರ ಸಾಹೇಬರು ಸಿಗರೇಟಿನ ಮಾತನ್ನೇ ಎತ್ತಿದರು. "ಚಂದೂ, ಈ ಕಾಗದದ ಸಿಗರೇಟುಗಳನ್ನು ಸೇದ ಬೇಡವೆಂದು ನಾನು ಮೊನ್ನೆ ನಿನಗೆ ಹೇಳಿರಲಿಲ್ಲವೆ?" ಎಂದರು.

ಮಾಸಾಹೇಬರಿಗೆ ಈ ಸದುಪದೇಶವು ತಮ್ಮ ಅರ್ಥದಿಂದ ಸರಿಹೋಗಲು, ಅವರು ಆನಂದದಿಂದ:-"ಹಿರಿಯರು ಹೀಗೆಯೇ ಹುಡುಗರನ್ನು ವ್ಯಸನಗಳಿಂದ ಪರಾವೃತ್ತಗೊಳಿಸುವ ಪ್ರಯತ್ನ ಮಾಡಬೇಕು. ತದ್ವಿರುದ್ಧವಾಗಿ ಮೊನ್ನೆಯಂತೆ ತಾವೇ ಕಡ್ಡಿ ಕೊರೆದು ಅವರ ಬೀಡಿ ಹಚ್ಚಿಕೊಡಬಾರದು."

ಸರ ಸಾಹೇಬರಿಗೆ ಈ ಟೀಕೆಯು ಅಪ್ರಸ್ತುತವೂ ಹಾಸ್ಯಾಸ್ಪದವೂ ಅನಿಸಿತು; ಮತ್ತು ಮಾಸಾಹೇಬರ ಮನಸ್ಸಿನಲ್ಲಿ ಸಂದೇಹಕ್ಕೆ ಅವಕಾಶವುಳಿಯಬಾರದೆಂದು ಅವರು "ಭಲೆ, ಮಾಸಾಹೇಬ, ನಾನು ಚಂದೂನಿಗೆ ಆ ಅರ್ಥದಿಂದ ಸಿಗರೇಟು ಸೇದಬೇಡವೆಂದು ಹೇಳಿಲ್ಲ! ನಾನು ಹೇಳಿದ್ದು 'ಸಿಗರೇಟಿನ ತಂಬಾಕು ಕಾಗದದಲ್ಲಿ ಸುತ್ತಿರುತ್ತದೆ; ಹಾಗು ಕಾಗದದ ಹೊಗೆಯಿಂದ ಡಗ್ಗು ಹತ್ತುತ್ತದೆ, ಬವಳಿ ಬರುತ್ತದೆ; ಅದ್ದರಿಂದ ಸಿಗರೇಟಿನ ಬದಲು ಚಿರೂಟವನ್ನೇ ಸೇದು' ನನ್ನ ಕುತ್ತಿಗೆಗೆ ಸಿಗರೇಟಿನ ಹೊಗೆಯು ರೂಢಿಯಾಗಿದ್ದರೂ ಕೂಡ ನಾನು ಶಕ್ಯವಾದಷ್ಟು ಚಿರೂಟವನ್ನೇ ಸೇದುವೆನು. ಚಂದುವಾದರೂ ಹಾಗೆಯೇ ಮಾಡಬೇಕು; ಯಾಕಂದರೆ ಆತನ ಕಂಠವಿನ್ನೂ ಎಳಬಿವೆ. ಅವನಿಗೆ ದೇಶೀ ಚಿರೂಟ ಸೇರರಿದ್ದರೆ ಆತನು ವಿಲಾಯತೀ-ಪರದೇಶೀ ಚಿರೂಟ ಸೇದಲಿ. ಒಳ್ಳೇ 'ಹವಾನಾ' ಚಿರೂಟು ಎಂಟು ರೂಪಾಯಿಗೆ ಡಝುನ್ನಿನಂತೆ ದೊರೆಯುತ್ತವೆ! ಅಂದರೇನೂ ಹೆಚ್ಚು ತುಟ್ಟಿಯಲ್ಲ."

ಈ ಅಕಲ್ಪಿತ ಭಾಷ್ಯವನ್ನು ಕೇಳಿದ ಕೂಡಲೆ ಮಾಸಾಹೇಬರು ಬೆಪ್ಪರಂತಾಗಿ ಸುಮ್ಮನೆ ಕೂಡ್ರದೆ ಹೊರತು ಗತ್ಯಂತರವೇ ಇರಲಿಲ್ಲ. ತನ್ನ ಬವಳಿಗೆ ನಿಜವಾದ ಕಾರಣವು ಆ ತಂತಿಯೆಂದು ಸುದೈವದಿಂದ ಬೊಬ್ಬಾಟವಾಗಲಿಲ್ಲವೆಂಬದನ್ನು ಕಂಡು ಚಂದೂಲಾಲನಿಗೂ ಸಮಾಧಾನವೆನಿಸಿತು. ಸಿಗರೇಟಿನ ಮೇಲೆಯೇ ಆರೋಪಹೊತ್ತು, ಹಾಗು ಅದನ್ನೇ ನಿಜವೆಂದು ತಿಳಿದುದ

ರಿಂದ ಪರಭಾರೆ ಕೆಲಸ ಬಗೆಹರಿಯಿತೆಂಬದನ್ನು ನೋಡಿ ಚಟ್ಟನೆ ಚಹಕುಡಿದು ಆತನು ಅಲ್ಲಿಂದೆದ್ದನು. ಸರ ಸಾಹೇಬರು ಮುನ್ನಿನ ರಾತ್ರಿಯ ಔತಣವು ಹೇಗಾಯಿತೆಂದು ಕೇಳಿದರು. 'ಆಗಬೇಕಾಗಿದ್ದಂತೆಯೇ ಚೆನ್ನಾಗಿ ಆಯಿತು' ಎಂದು ದುಂಡುಸುತ್ತಿದ ಉತ್ತರ ಹೇಳಿ, ಅವನು ಅಲ್ಲಿಂದ ಎದ್ದವನೇ ಹಿಂದುಗಡೆಯ ತೋಟದ ದಾರೀ ಹಿಡಿದನು.

ಈ ದಿನವೂ ತೋಟದ ಬಾಗಿಲಲ್ಲಿ ಮಾಲೀ ಕನ್ನನು ಹಾಜರಿದ್ದನು. ಅವನು ಸಲಾಮು ಮಾಡಿ ಒಡೆಯನ ಹಿಂದಿಂದೆ ನಡೆದನು. ಒಡೆಯನ ಕೈಯಲ್ಲಿ ಇಂದು ತುಬಾಕಿಯಿರದ್ದನ್ನು ಕಂಡ ಮಾತ್ರದಿಂದ ಅವನಿಗೆ ಬಹಳೇ ಸಮಾಧಾನವೆನಿಸಿತು. ಇಷ್ಟೇ ಅಲ್ಲ, ಇಂದು ಎಲ್ಲವೂ ಬದಲಿಸಿದಂತೆ ಆತನಿಗೆ ತೋರಿತು; ಯಾಕಂದರೆ, ಚಂದೂಲಾಲನು ಇಂದು ಗಿಡಗಳ ಎಲೆ-ಟೊಂಗೆಗಳನ್ನು ತಿರುತಿರುವಿ ನೋಡಲಿಲ್ಲ; ಹುಳ-ಹುಪ್ಪಡಿಗಳ ವಿಚಾರಣೆ ಮಾಡಲಿಲ್ಲ. ಅಂದಬಳಿಕ ಅವುಗಳ ಹಿಂಸೆಯೆಲ್ಲಿ!

ಚಂದೂಲಾಲನು ಮೆಲ್ಲಮೆಲ್ಲನೆ ಹೋಗಿ ಕೊನೆಗೆ ಅಂದು ಆ ಕಪೋತ ಪಕ್ಷಿಗಳನ್ನು ಕೊಂದ ಮರವು ಬರಲು, ಅಲ್ಲಿ ನಿಂತನು. ಇಂದಾದರೂ ಆ ಗಿಡಕ್ಕೆ ತೂಗುಗಟ್ಟಿದ್ದ ನೆಲುವಿನ ಮೇಲಿನ ಹರಿವಾಣಗಳಲ್ಲಿ ನೀರು-ಕಾಳುಕಡಿಗಳಿದ್ದವು; ಮತ್ತು ಹಲವು ಹಕ್ಕಿಪಕ್ಕಿಗಳ ಜೊತೆಗಳು ಅದಕ್ಕೆ ಸಮೀಪದ ಟೊಂಗೆಗಳ ಮೇಲೆ ಕುಳಿತು, ಆ ಸದಾವರ್ತದ ಹಾಗು ಅರವಟ್ಟಿಗೆಯ ಪರಾಮರ್ಷವ ಪಡೆಯುತ್ತಿದ್ದವು. ಆದರ ಮೇಲಿಂದ ಮುನ್ನಿನ ಹಿಂಸೆಯಿಂದ-ಹತ್ಯೆಯಿಂದ ಆ ಸ್ಥಳಕ್ಕೆ ಪಕ್ಷಿವರ್ಗದಲ್ಲಿ ದುಷ್ಕೀರ್ತಿಯು ಹತ್ತಲಿಲ್ಲೆಂಬದು ಸಹಜವಾಗಿಯೇ ಸಿದ್ಧವಾಯಿತು. ಕೇವಲ ಆ ಹತ್ಯೆಯು ಸ್ಮರಣ ಮಾತ್ರದಿಂದ ದುಃಖಿತರಾದ ಇಬ್ಬರು ಮಾನವರ ಮನಸ್ಸುಗಳಷ್ಟೇ ಅಲ್ಲಿ ಇದ್ದವು. ಅದರಲ್ಲೊಂದು ಅರ್ಥಾತ್ ಮಾಲೀ ಕನ್ನನದು; ಮತ್ತು ಇಂದು ಮಾತ್ರ ಆತನ ಜೊತೆಗೆ ಸ್ವಂತ ಚಂದೂಲಾಲನದೂ! ಅವರಿಬ್ಬರಲ್ಲಿಯೂ ಚಂದೂಲಾಲನ ದುಃಖವೇ ಹೆಚ್ಚು ಪ್ರಭಾವಿಯಾಯಿತು. ಯಾಕಂದರೆ, ಆ ಗಿಡದ ಬಳಿಗೆ ಹೋದ ಕೂಡಲೆ ಇಂದು ಕನ್ನನ ಬದಲು ಚಂದುವೇ ಒಮ್ಮೆಲೆ ಕುಸಿಕುಳಿತನು; ಮತ್ತು ಆ ದಿನ ಕನ್ನನು ಮೊಣಕಾಲೊಳಗೆ ಗೋಣಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದುದರ ಬದಲು, ಇಂದು ಸ್ವತಃ ಚಂದೂಲಾಲನೇ ಹಾಗೆ ಮಾಡತೊಡಗಿದನು. ಅದನ್ನು ಕಂಡು ಕನ್ನನು ಆಶ್ಚರ್ಯದಿಂದ ಥಕ್ಕನಾದನು! ಆದರೆ ಆತನು ಸೇವಕನಲ್ಲವೆ? ಒಡೆಯನ ಸಾಂತ್ವನಗೊಳಿಸಲಿಕ್ಕಾದರೂ ಮರ್ಯಾದೆ ಮೀರಿ ಹೇಗೆ ಮುಂದಾಗುವನು?

ಸ್ವಲ್ಪ ಹೊತ್ತಿನ ಮೇಲೆ ಚಂದುವು ಎದ್ದು ನಿಂತನು. ಆತನು ಎದ್ದೇಳುವಾಗ ಆ ರಕ್ತಾಂಕಿತ ನೆಲದಿಂದ ಎತ್ತಿಕೊಂಡಿದ್ದ ಮಣ್ಣಿನ ಚಿಮಟಗೆಯನ್ನು ತನ್ನ ಹಣೆಗೆ ಹಚ್ಚಿಕೊಂಡನಲ್ಲದೆ, ತನ್ನ ಕರವಸ್ತ್ರದ ಚುಂಗಿನಲ್ಲಿಯೂ ಕಟ್ಟಿಕೊಂಡನು; ಹಾಗು ಕನ್ನನನ್ನು ಕುರಿತು:—"ಏನೋ ಕನ್ನಾ, ಆ ದಿನ ಆ ಬೈರಾಗಿಯು ತಾನು ಇಲ್ಲಿಂದ ಮುಂದೆಲ್ಲಿಗೋ ಹೋಗುತ್ತೇನೆಂದನಲ್ಲ? ಅದು ನಿನಗೆ ನೆನಪಿದೆಯೊ? ಆತನು ಭದ್ರೇಶ್ವರದ್ದೋ ಅಥವಾ ಇನ್ನಾವುದೋ ಯಾತ್ರೆಗೆ ಹೋಗುತ್ತೇನಂದದ್ದು ನನಗೆ ಸ್ಮರಿಸುತ್ತದೆ."

"ಧಣೇರ, ಹೌದು. ಭದ್ರೇಶ್ವರವೆಂದೇ ಆ ಬೈರಾಗಿಯು ಅಂದಿದ್ದನು. ಅದು ನನಗೂ ಚೆನ್ನಾಗಿ ನೆನಪಿದೆ."

"ಆ ಭದ್ರೇಶ್ವರನ ದೇವಸ್ಥಾನವು ಎಲ್ಲಿದೆ? ಇಲ್ಲಿಂದ ಎಷ್ಟು ದೂರಿದೆ?"

"ಅದು ನನಗೆ ಗೊತ್ತಿದೆ. ಧಣೇರ, ಅದು ಇಲ್ಲಿಂದ ಹೆಚ್ಚು ದೂರಿಲ್ಲ; ಹೆಚ್ಚೆಂದರೆ ೧-೧॥ ಮೈಲಾಗಬಹುದು."

"ಇಷ್ಟೇಯೊ? ಹಾಗಾದರೆ ನಡೆ ಮುಂದೆ; ಮತ್ತು ನನಗಾ ಭದ್ರೇಶ್ವರದ ದಾರಿ ತೋರಿಸು."

"ಆದರೆ ಧಣೇರು ನಡೆದೇ ಬರುವರೇ! ಮೋಟರ ಅಥವಾ ಕುದುರೆ ಬೇಡವೇ? ಓಡುತ್ತ ಹೋಗಿ ನಾನು ಈಗಲೆ ಡ್ರಾಯವರನನ್ನು ಕರೆತರುವೆನು; ಇಲ್ಲವೆ ಕುದುರೆಯುವನನ್ನು. ಅಥವಾ ಅವರನ್ನು ಮುಂದೆ ಹಾಕಿಕೊಂಡೇ ಬರುತ್ತೇನೆ; ಮತ್ತು ನಮ್ಮ ಧಣೇರು ಇಂಥ ಕಡುಬಿಸಿಲಲ್ಲಿ ಹೋಗುವುದೇ? ಛತ್ರಿ-ಅಬ್ದಾಗಿರಿ ಮುಂತಾದುದೇನೂ ಸಂಗಡವಿಲ್ಲವಲ್ಲಾ!"

"ಕನ್ನಾ, ನೀನು ಹುಚ್ಚನಿರುತ್ತೀ. ಆ ಸಾಧುವು ಭದ್ರೇಶ್ವರದ ಗುಡಿಯಲ್ಲಿಳಿಕೊಂಡಿದ್ದು ನನಗೆ ಭೆಟ್ಟಿಯಾದರೆ, ನಾನು ಕಾಲಿನಿಂದಲೇ ಏಕೆ, ತಲೆಯಿಂದ ನಡೆಯುವದು ಶಕ್ಯವಿದ್ದರೆ ತಲೆಯಿಂದಲೇ ನಡೆದು ಹೋದೇನು; ಮತ್ತು ಆ ಮಹಾತ್ಮನೆದುರು ಆ ಹಿಂಸೆಯೆಸಗಿ, ಆತನಿಗೆ ದುರುತ್ತರಗಳನ್ನಿತ್ತು, ಅವನಿಗೆ ನಾನು ಯಾವ ತಾಪವನ್ನಿತ್ತೆನೋ, ಅದಕ್ಕಿಂತ ಈ ಬಿಸಿಲಿನ ತಾಪವೆಷ್ಟು ಕಠಿಣವಾದೀತು? ಅಲ್ಲದೆ ಕನ್ನಾ, ನೀನು ನನ್ನ ಸಲುವಾಗೆಂದು ಒಂದು ಕೆಲಸಮಾಡಬೇಕು."

"ಅದೇನು ಧಣೇರ?"

"ನೀನು ಮೊನ್ನೆ ನಿನ್ನ ಕೊರಳೊಳಗಿನ ತುಳಸೀಮಣಿಗಳ ಮಾಲೆ ತೋರಿಸಿ, ಯಾವ ಮಾಲಾಧಾರಿಯೂ ಪ್ರಾಣಿಗಳ ಕೊಲೆಯನ್ನೆಂತು ಮಾಡುವನೆಂದು ಅಂದಿದ್ದಿಲ್ಲವೇ? ಆ ಮಾಲೆಯು ನಿನ್ನ ಅಹಿಂಸೆಗೆ ಜಾಮೀನಾದರೆ,

ಅದು ಇನ್ನು ಮುಂದೆ ನನ್ನ ಅಹಿಂಸೆಗೂ ಜಾಮೀನೇಕಾಗಿರಲಿಕ್ಕಿಲ್ಲ? ಅಂತೆಯೇ ನೀನು ಆ ಮಾಲೆಯನ್ನು ನನಗೆ ಕೊಡು. ಇಂದಿನಿಂದ ನಾನು ಅದನ್ನು ನನ್ನ ಕೊರಳಲ್ಲಿ ಹಾಕಿಕೊಳ್ಳತಕ್ಕವನು. ಇನ್ನು ನಿನಗದರ ಅವಶ್ಯಕತೆಯಿರುವದಿಲ್ಲ."

ಕನ್ನನು ಆಶ್ಚರ್ಯದಿಂದ ಥಕ್ಕನೇ ಅಲ್ಲ, ತೀರ ಹುಚ್ಚನೂ ಆದನು! ಆತನ ಕಣ್ಣೊಳಗಿಂದ ಕಂಬನಿಗಳ ಪ್ರವಾಹಗಳು ಹರಿಯ ಹತ್ತಿದವು. ಆತನು ಕೂಡಲೆ ತನ್ನ ಕೊರಳೊಳಗಿನ ಮಾಲೆಯನ್ನು ತೆಗೆದನು; ಆದರೆ ಅವನು ಅದನ್ನು ಚಂದೂಲಾಲನ ಕೊರಳೊಳಗೆ ಹಾಕದೆ, ಆತನ ಪಾದಗಳ ಮೇಲೆ ಅರ್ಪಿಸಿದನು. ಕೂಡಲೆ ಚಂದುವು ಅದನ್ನೆತ್ತಿ ಕೊರಳೊಳಗೆ ಹಾಕಿಕೊಂಡನು; ಹಾಗು, "ಕನ್ನಾ, ನಾನಿನ್ನು ಮರಳಿ ಮನೆಗೆ ಬಂದೆನೆಂದರೆ, ಈ ಗಿಡದ ನೆರಳ ಲ್ಲೊಂದು ಚಿಕ್ಕ ಗುಡಿಯನ್ನು ಕಟ್ಟಿಸತಕ್ಕವನಿರುವೆನು; ಮತ್ತು ನೀನಾದರೂ ಮತ್ತೆ ನಾಲ್ಕು ನೆಲುವುಗಳನ್ನು ಈ ಮರಕ್ಕೆ ತೂಗಗಟ್ಟು. ಅವುಗಳೊಳಗಿನ ಹರಿವಾಣಗಳಲ್ಲಿ ಹಾಕಲಿಕ್ಕೆ ನಿನಗೆ ಬೇಕಾದಷ್ಟು ಧಾನ್ಯಕೊಡಬೇಕೆಂದು ನಾನು ನಮ್ಮ ವಾಡೆಯ ಮ್ಯಾನೇಜರನಿಗೆ ಹೇಳಿಡುತ್ತೇನೆ. ಅಂದರಾಯಿತಲ್ಲವೆ?"

ಕನ್ನನಿಗೆ ಆನಂದವು ಉಕ್ಕೇರಲು, ಆತನು ಸುಮ್ಮನೆ ಭದ್ರೇಶ್ವರದ ದಾರಿ ಹಿಡಿದು ನಡೆದನು.

ಭದ್ರೇಶ್ವರವು ಒಂದು ಹಳೇ ದೇವಸ್ಥಾನವಾಗಿದೆ. ಅದನ್ನು ಕಟ್ಟಿಸಿ ದವನು ಏಕಾಂತವಾಸವನ್ನು ನೋಡಿಯೇ ಕಟ್ಟಿಸಿದ್ದನು; ಮತ್ತು ಸುದೈವದಿಂದ ಆತನ ಆ ಏಕಾಂತವಾಸವು ಇದುವರೆಗೂ ಸ್ಥಿರವಾಗುಳಿದಿತ್ತು! ಮಿಕ್ಕ ದೇವ ಸ್ಥಾನಗಳಂತೆ ಅದೊಂದು ದೇವರ ದೈನಿಕ ಸಂತೆಯಾಗಲಿಲ್ಲ. ಆ ದೇವರ ಜಾತ್ರೆಯು ಕೆಲ ದಿನಗಳ ಹಿಂದೆಯೇ ಮುಗಿದಿತ್ತು. ಅದರಿಂದ ಆ ಮಂದಿರದ ಪ್ರಶಸ್ತಾದ ಸಭಾಮಂಟಪದ ಹುಸಿಯಲ್ಲಿ ಅಂದು ಚಂದುವಿಗೆ ಭೆಟ್ಟಿಯಾಗಿದ್ದ ಆ ಬೈರಾಗಿಯೂ ಆತನ ಶಿಷ್ಯನೂ ತಮ್ಮ ಬೀಡಾರವನ್ನು ಹೂಡಿಬಿಟ್ಟಿದ್ದರು.

ಚಂದುವು ಗುಡಿಗೆ ಹೋಗಿ ತಲುಪಿದ ಬಳಿಕ ಆತನು ಕನ್ನನಿಗೆ ತಿರುಗಿ ಹೊರಡಲಿಕ್ಕೆ ಅಪ್ಪಣೆಯಿತ್ತನು; ಹಾಗು "ಇಂದು ಮಧ್ಯಾಹ್ನದಲ್ಲಿ ನಾನು ಮನೆಗೆ ಊಟಕ್ಕೆ ಬಂದರೆ ಬಂದೇನು; ಇಲ್ಲದಿದ್ದರಿಲ್ಲ. ನನ್ನ ದಾರಿಕಾಯಬಾರ ದೆಂದೂ ಆದರೆ ಸಂಜೆಗೆ ಮಾತ್ರ ಬರುವೆನೆಂದೂ ಮನೆಯಲ್ಲಿ ನಮ್ಮ ತಾಯಿ-ತಂದೆಗಳಿಗೆ ತಿಳಿಸು; ಅಲ್ಲದೆ ನಾನು ನನ್ನ ಕೈ ಚೀಲದಲ್ಲಿ ರೊಟ್ಟಿ, ಬಿಸ್ಕೀಟು ಗಳನ್ನು ತಂದಿದ್ದೇನೆ. ಮತ್ತೆ ಬೇಕಾದರೆ ಇಲ್ಲಿಯೇ ಹಾಲು ಕೊಂಡು ಕುಡಿ ದೇನು; ಆದ್ದರಿಂದ ನನ್ನನ್ನು ಕರೆಯಲಿಕ್ಕೆಂದು ಯಾರನ್ನೂ ಕಳಿಸಬಾರ ದೆಂದೂ ಅವರಿಗೆ ಹೇಳು."

ಕನ್ನನು ಹೊರಟು ಹೋದ ಬಳಿಕ ಚಂದುವು ಗುಡಿಯ ಹೊರಗಡೆಗೆ ತನ್ನ ಚಡಾವುಗಳನ್ನು ತೆಗೆದಿಟ್ಟು, ಕಾಲುಗಳ ಸಪ್ಪಳ ಮಾಡದಂತೆ ಆ ಮಂಟಪವನ್ನು ಪ್ರವೇಶಿಸಿದನು. ಅಲ್ಲಿ ಹೋಗಿ ನೋಡಿದಾಗ ಆ ಬೈರಾಗಿಯು ಯಾವನೋ ಒಬ್ಬ ಗೃಹಸ್ಥನೊಡನೆ ಮಾತಾಡುತ್ತ ಕುಳಿತಿದ್ದನು; ಮತ್ತು ಆತನ ಶಿಷ್ಯನು ಬೈರಾಗಿಯ ಒಂದೊಂದೇ ಪಾದಗಳನ್ನು ತನ್ನ ಕೈಯಲ್ಲಿ ಹಿಡಿದು ಅವುಗಳನ್ನು ಒತ್ತುತ್ತಿದ್ದನು. ಚಂದುವು ಮೆಲ್ಲನೆ ಮುಂದೆ ಹೋಗಿ ನೆಲದ ಮೇಲೆ ಡಬ್ಬ ಬಿದ್ದು, ದಂಡವತ್ ನಮಸ್ಕಾರ ಹಾಕಿದನು; ಹಾಗು ಕೈಜೋಡಿಸಿಕೊಂಡು ಮುದುಡಿದ ಕಾಲುಗಳಿಂದ ನಮ್ರನಾಗಿ ಕುಳಿತನು.

ಬೈರಾಗಿಯು ಚಂದುವನ್ನು ಚೆನ್ನಾಗಿ ಗುರುತಿಸಿದನು; ಆದರೆ ಹಾಗೆಂದು ಕೊಂಚವೂ ತೋರಗೊಡಲಿಲ್ಲ. ಅದಕ್ಕೂ ಮೊದಲು ಬಂದಿದ್ದ ಗೃಹಸ್ಥನೊಡನೆ ಸಂಭಾಷಿಸುವದರಲ್ಲಿ ತಾನು ದೃಢವಾಗಿ ಆಸಕ್ತನಾಗಿರುವೆನೆಂದು ಅವನು ಭಾಸಿಸಿದನು. ಶಿಷ್ಯನು ಮಾತ್ರ ಚಂದುವನ್ನು ಗುರುತಿಸಿದೊಡನೆಯೇ ಇರಿಕುಳ ಎಮ್ಮೆಯಂತೆ ಅತ್ತ ಕಡೆಗೊಮ್ಮೆ ಇಣುಕಿದನು; ಹಾಗು ಗುರುಗಳ ಪಾದಸಂವಾಹನವನ್ನು ಹೆಚ್ಚು ಒತ್ತರದಿಂದ ನಡೆಸಿದನು.

ಈ ಮೊದಲು ಬಂದಿದ್ದವನು ಆ ಬೈರಾಗಿಯನ್ನು ಕುರಿತು:—"ಮಹಾರಾಜ, ತಮ್ಮ ಆಗಮನದಿಂದ ಈ ಪಂಚಕ್ರೋಶಿಯು ಪುನೀತವಾಯಿತು. ತಾವು ಇಲ್ಲಿಯೇ ಇನ್ನು ಕೆಲ ದಿನ ಇದ್ದು ಬಿಡಬೇಕು" ಎಂದಂದು, ಎದುರಿಗೆ ಸತ್ತ ಒಂದು ಹಕ್ಕಿಯನ್ನು ಗೋಲೆಗೆ ತೂಗಹಾಕಿದ್ದನ್ನೂ ಮತ್ತೊಂದನ್ನು ಕಡ್ಡಿಗಳಿಂದ ಆಗಲೆ ಮಾಡಿದ ಪಂಜರದಲ್ಲಿಟ್ಟದ್ದನ್ನೂ ಕಂಡು, ಅತ್ತ ಕಡೆಗೆ ಕೈತೋರಿಸುತ್ತ ಆತನು ಮತ್ತೆ:—"ಮಹಾರಾಜ, ಸವಾರಿಯ ಜೊತೆಗೆ ಈ ಹಕ್ಕಿಗಳೆಲ್ಲಿಂದ ಬಂದವು?" ಎಂದು ಕೇಳಿದನು. ಅದಕ್ಕೆ ಆ ಬೈರಾಗಿಯು ಹೇಳಿದನು:—"ಸವಾರಿಯೂ ಅಲ್ಲ; ಬೇಟೆಯೂ ಅಲ್ಲ. ದೇವರ ಮನೆಯ ಒಂದು ಪ್ರಾಣಿಯು ಇನ್ನೊಂದಕ್ಕೆ ಯೋಗಾಯೋಗದ ಬಲದಿಂದಲೇ ಭೆಟ್ಟಿಯಾಗುತ್ತವೆ; ಮತ್ತು ಭೆಟ್ಟಿಯಾದ ಬಳಿಕ ಋಣಾನುಬಂಧವನ್ನು ಬೆಳಿಸುವದು ಪ್ರತಿಯೊಬ್ಬನ ಕರ್ತವ್ಯವೇ ಆಗಿದೆ. ನೀವು ನನಗಾಗಿ ಈ ಸತ್ತ ಹಕ್ಕಿಯನ್ನು ತಕ್ಕೊಂಡು ಹೋಗಿ, ಯಾವನೊಬ್ಬ ಬಲ್ಲವನಿಂದ ಸುಲಿಸಿ, ಅದರಲ್ಲಿ ಚೆನ್ನಾಗಿ ಹುಲ್ಲನ್ನು ತುಂಬಿ ಹೊಲಿಸಿ ನನ್ನೆಡೆಗೆ ಮತ್ತೆ ಬೇಗನೆ ಕಳಿಸಬೇಕು. ಈ ಜೀವಂತ ಹಾಗು ಆ ಸತ್ತ ಇವೆರಡೂ ಹಕ್ಕಿಗಳು ಜೊತೆಯಾಗಿದ್ದವು. ಇವೆರಡನ್ನೂ ನಾನು ಇನ್ನು ಮುಂದೆ ನನ್ನೊಡನೆ ಸಲಹುವವನಿದ್ದೇನೆ."

ತನ್ನನ್ನು ಗುರ್ತಿಸಿದ್ದರೂ ಮತ್ತು-ತಾನು ಬೇಟೆಯಲ್ಲಿ ಕೊಂದ ಪಕ್ಷಿಗಳ ವಿಷಯ ಹೊರಟಿದ್ದರೂ ಕೂಡ ಬೈರಾಗಿಯು ತನ್ನ ನಾಮ ನಿರ್ದೇಶ ಮಾಡದೆ, ತನ್ನ ಅಪರಾಧವನ್ನು ಮುಚ್ಚುಮರೆಮಾಡಿದನೆಂಬದನ್ನು ನೋಡಿ ಚಂದೂನ ಮನಸ್ಸಿನ ಮೇಲೆ ಬಹಳೇ ಸುಪರಿಣಾಮವಾಯಿತು. ಆ ಗೃಹಸ್ಥನು ಆ ಸತ್ತ ಹಕ್ಕಿಯನ್ನು ತಕ್ಕೊಂಡು ಹೋದ ಬಳಿಕ ಚಂದುವು ಬೈರಾಗಿಯ ಪಾದಗಳನ್ನು ಸ್ಪರ್ಶಿಸಲಿಕ್ಕೆ ಕೈಮುಂದೆ ಮಾಡಿದನು. ಅದನ್ನು ಕಂಡು ಆ ಶಿಷ್ಯನು ಸಿಟ್ಟಿನಿಂದ:—"ಹಾ! ಕೈ ದೂರ ಸರಿಸು. ನಿನ್ನ ಅಪವಿತ್ರ, ಹಿಂಸೆಗೆಯ್ಯುವ ಕೈಗಳಿಂದ ಮಹಾರಾಜರ ಪಾದಗಳು ಅಪವಿತ್ರವಾದಾವು!"

ಆ ಎರಡನೇ ಗೃಹಸ್ಥನೊಡನೆ ಮಾತಾಡುತ್ತಿದ್ದರೂ ಚಂದೂ ಬಂದು ಕುಳಿತದ್ದನ್ನು ಕಂಡಾಗಿನಿಂದ ಗುರುಮಹಾರಾಜರು ತಮ್ಮ ಮನದಲ್ಲಿಯೇ ಹೀಗೆಂದು ವಿಚಾರಿಸುತ್ತಿದ್ದರು:—"ಮೊನ್ನೆ ನಮ್ಮನ್ನು ಬೈದು ಧಿಃಕರಿಸಿ ಕಳಿಸಿದ್ದ ವಿಲಾಯಿತೀ ಫ್ಯಾಶನ್ನಿನ ಯುವಕನಿವನು! ಇಂದು ಅಕಸ್ಮಾತ್ತಾಗಿ ಮುಂದೆ ಬಂದು ನಿಂತು ನಮ್ರಭಾವದಿಂದ ನಡೆಯುತ್ತಿರುವದಾಗಿ ತೋರುತ್ತದೆ. ಇದಕ್ಕೆ ಕಾರಣವೇನಾಗಿರಬಹುದು?" ಆದರೆ ಆ ಬಗ್ಗೆ ಆಗ ಅವರಿಗೇನೂ ಹೊಳೆಯಲಿಲ್ಲ. ಅವರಿಂದ ಮೊದಲಿನ ಸಂಭಾಷಣದಿಂದ ಮುಕ್ತರಾದೊಡನೆಯೇ ಅವರು ಚಂದೂನನ್ನು ಕುರಿತು ಶಾಂತಸ್ವರದಿಂದ:—"ಬೇಟಾ! ಇಂದು ನೀನು ಇಲ್ಲಿ ಏಕೆ? ಈ ಬಗ್ಗೆ ನನಗೇನೂ ತಿಳಿಯುಲೊಲ್ಲದು."

"ತಾವು ಇದೇನು ಹೇಳುವಿರಿ? ತಮಗೆ ತಿಳಿಯುಲಿಲ್ಲೆಂದು ಏಕೆ ಅನ್ನುವಿರಿ? ತಮಗ ತಿಳಿಯದಂಥದು ಲೋಕದಲ್ಲಿ ಯಾವುದೂ ಇಲ್ಲೆಂಬ ಬಗ್ಗೆ ನನ್ನ ಸಂಪೂರ್ಣ ಖಾತ್ರಿಯಾಗಿಬಿಟ್ಟಿದೆ. ನಾನು ನಮ್ಮ ತೋಟದಲ್ಲಿ ತಮ್ಮನ್ನು ಅವಮಾನಗೊಳಿಸಿದೆನು; ತಮಗೆದುರುತ್ತರವಿತ್ತೆನು, ಎಂಬ ಬಗ್ಗೆ ನಾಚಿಕೆಯೆನಿಸಿ, ತಮ್ಮಲ್ಲಿ ಕ್ಷಮೆಯಾಚಿಸುವದಕ್ಕೆಂದು ನಾನಿಲ್ಲಿಗೆ ಬಂದಿರುತ್ತೇನೆ. ತಾವು ನನ್ನನ್ನು ಕ್ಷಮಿಸಿ ಪಾವನಗೊಳಿಸಬೇಕು."

ಮಹಾರಾಜರು ಕೊಂಚ ತಟಸ್ಥವೃತ್ತಿಯನ್ನೇ ತೋರಿ, ಶಿಷ್ಯನ ಕಡೆಗೆ ನೋಡಿ ಬರಿಯ ನಕ್ಕು ಸುಮ್ಮನಾದರು. ತಮ್ಮನ್ನು ಯಾರು ವಂದಿಸಿದರೂ ಇಲ್ಲವೆ ಯಾರು ನಿಂದಿಸಿದರೂ ಒಂದೇ ಎಂಬದನ್ನು ಅವರು ಚಂದೂಲಾಲನಿಗೆ ತೋರಿಸುವದಿತ್ತು. ಸಿದ್ಧಪುರುಷರನ್ನು ಸ್ತುತಿ ನಿಂದೆಗಳಲ್ಲಿ ಯಾವವೂ ಸ್ಪರ್ಶಿಸಲಾರವು! ಆದರೆ ಮಹಾರಾಜರು ಉತ್ತರವೀಯುದ್ದನ್ನು ಕಂಡು ಚಂದುವು ತನ್ನ ಉದ್ದನ್ನ ಶರ್ಟಿನ ತುದಿಯನ್ನು ಸೆರಗಿನಂತೆ ಹರಡಿ ಹಿಡಿದು ಆದರಲ್ಲಿ ಕ್ಷಮೆಯನ್ನು ನೀಡಬೇಕೆಂದನು. ಆಗ ಮಹಾರಾಜರು "ತಮ್ಮಾ, ಕ್ಷಮೆಯನ್ನೇಕೆ

ಬೇಡುವೆ? ನೀನು ತಪ್ಪೇ ಮಾಡಿದ್ದರೆ, ಅದು ದೇವರದು; ನನ್ನದಲ್ಲ. ಆತನ ದೃಷ್ಟಿಯಿಂದ ನೀನೂ ನಾನೂ ಸಮಾನರೇ ಇರುವೆವು."

"ಹಾಗೆಂತಾದೀತು? ತಾವು ಆ ದಿನ ಪ್ರಕಟಿಸಿದ್ದ ಭವಿಷ್ಯವಾಣಿಯೂ, ಅಂತಜ್ಞಾನದ ಮಾತುಗಳೂ ನನಗೆ ಚೆನ್ನಾಗಿ ಮನಗಂಡಿವೆ. ಅತೀಂದ್ರಿಯ ಜ್ಞಾನವಿದ್ದಂಥ ತಮ್ಮಂತಹ ಮಹಾತ್ಮಾ ಮತ್ತು ನನ್ನಂತಹ ಮೂಢ-ಅಜ್ಞಾನಿ-ಅಪರಾಧಿ ಇಬ್ಬರೂ ಸಮಾನರೆಂತಾದಾರು? ದೇವರ ಮನೆಯಲ್ಲಿ ನ್ಯಾಯವಿದೆ ಯೆಂಬದರರ್ಥವೇನಂದರೆ, ವ್ಯಕ್ತಿವ್ಯಕ್ತಿಗಳಲ್ಲಿ ಭೇದವಿದೆ. ಶ್ಯಾಮಕರ್ಣ (ಕುದುರೆ) ಲಂಬಕರ್ಣ (ಕತ್ತೆ) ಇವೆರಡನ್ನೂ ಆ ದೇವರು ಒಂದೇ ದಾವಣಿಗೆ ಕಟ್ಟಿಗೊಡುವನೇನು?"

"ಒಳ್ಳೇದು. ನೀನಂದಂತೆಯೇ ಏಕಾಗಲೊಲ್ಲದು. ನಾನು ಮನಸ್ಸಿನಿಂದ ನಿನ್ನನ್ನು ಮೊದಲೇ ಕ್ಷಮಿಸಿರುತ್ತೇನೆ. ಅದನ್ನೇ ನಿನ್ನ ಒತ್ತಾಯಕ್ಕಾಗಿ ಈಗ ಬಾಯಿಂದ ಮೂರು ಮೂರು ಸಾರೆ ಉಚ್ಚರಿಸುವೆನು. ನಿನ್ನನ್ನು ಕ್ಷಮಿಸಿದೆನು-ನಿನ್ನನ್ನು ಕ್ಷಮಿಸಿದೆನು-ನಿನ್ನನ್ನು ಕ್ಷಮಿಸಿದೆನು. ಹೋಗು. ಇನ್ನಾದರೂ ನಿನ್ನ ಸಮಾಧಾನವಾಯಿತೋ ಇಲ್ಲವೋ? ನಿನ್ನ ಮನೆಯ ಅಸಂಖ್ಯ ಕೆಲಸಗಳು ತಡೆದು ನಿಂತಿದ್ದಾವು ನಾನೇನು, ಕೆಲಸ ಕಾರ್ಯಗಳಿಲ್ಲದ ಬೈರಾಗಿಯು! ನನ್ನ ಸಂಗತಿಯಲ್ಲಿ ಕುಳಿತು ವ್ಯರ್ಥ ಕಾಲಹರಣ ಮಾಡಬೇಡ, ಹೋಗು."

"ಆದರೆ ಮಹಾರಾಜ, ನಾನು ಇಂದು ತಮ್ಮೆಡೆಗೆ ಬಂದವನು ತಮ್ಮಿಂದ ಹೊರಟು ಹೋಗಲಿಕ್ಕೆ ಬಂದಿಲ್ಲ; ಮತ್ತು ಇಲ್ಲಿಂದ ನಾನು ಹೊರಡುವುದೇ ಆದರೆ, ತಮ್ಮನ್ನು ಕರೆದುಕೊಂಡೇ ಮರಳಿ ಹೋದೇನೆಂಬ ನಿರ್ಧರದಿಂದಲೇ ಬಂದಿರುತ್ತೇನೆ."

"ನೀನು ನನ್ನನ್ನು ಸಂಗಡ ಕರೆವೊಯ್ಯಲಿಕ್ಕೆಂದು ಬಂದಿರುತ್ತೀಯಾ?" ಎಂದು ಮಹಾರಾಜರು ಕೇಳಲು, "ಅಹುದು; ಮತ್ತು ತಮ್ಮ ಸಂಗತಿಯಲ್ಲಿರು ವುದೇ ಇನ್ನು ಮುಂದೆ ನನ್ನ ಅಖಂಡ ಕರ್ತವ್ಯವು. ನಿನ್ನೆ ಒಂದೇ ಕ್ಷಣದಲ್ಲಿ ನನ್ನ ಬೇರೆ ಎಲ್ಲ ಕೆಲಸಗಳ ಅಂತವಾಯಿತು!"

"ಎಲಾ, ನಾನಿಂಥ ವಿರಕ್ತ ಬೈರಾಗಿಯು! ನೀನು ಸಾಂಸಾರಿಕನು. ನಿನ್ನನ್ನು ಪ್ರೀತಿಸುವ ತಂದೆ-ತಾಯಿ, ಅಕ್ಕತಂಗಿ, ಹೆಂಡತಿ ಮುಂತಾದವರಾ ರಿರುವರೋ, ಅವರ ಸಂಗತಿಯಲ್ಲೇ ನಿನ್ನ ಆಯುಷ್ಯವು ವ್ಯಯವಾಗಬೇಕು. ನಿನ್ನ ಜೀವನವು ಇದೀಗ ಪ್ರಾರಂಭವಾಗಿರುವಂತೆ ತೋರುತ್ತದೆ. ಇಷ್ಟ ರಲ್ಲೇ ವಿರಕ್ತನಾಗಿ, ನೀನು ನಿನ್ನ ಉಲ್ಲಸಿತ ಸಂಸಾರವನ್ನೇಕೆ ಉಚ್ಛೇದ ಗೊಳಿಸಬೇಕು? ಇಂಥ ಬುದ್ಧಿಯನ್ನು ನಿನಗಾರು ಇತ್ತರು?"

"ತಾವು ಏನನ್ನೂ ಅರಿಯದವರಂತೆ ಮತ್ತೆ ನನ್ನನ್ನೇ ಪ್ರಶ್ನಿಸುತ್ತಿರುವಿರಿ. ಎಚ್ಚತ್ತಿರುವವನನ್ನು ಮತ್ತೆಂತು ಎಚ್ಚರಗೊಳಿಸುವುದು? ಆದ್ದರಿಂದ ದಯವಿಟ್ಟು ಏಳಿರಿ, ನನ್ನೊಡನೆ ನಡೆಯಿರಿ; ಮತ್ತು ನನ್ನ ಚಪ್ಪರವನ್ನು ಪಾವನಗೊಳಿಸಿರಿ. ಬೇಕಾದರೆ ನಾನು ನನ್ನ ತಂದೆ-ತಾಯಿಗಳನ್ನು ನಿಮ್ಮ ಸ್ವಾಗತಕ್ಕಾಗಿ ಬರಹೇಳುತ್ತೇನೆ; ಆದರೆ ತಾವು ವಚನ ಕೊಡದ ಹೊರತು ನಾನಿಲ್ಲಿಂದ ಮಿಸುಕಲಾರೆನು."

"ಮೊನ್ನೆಯ ದಿನ ದೂರಿನಿಂದ ನಾನು ಯಾವ ಪ್ರಚಂಡ ಪ್ರಾಸಾದವನ್ನು ನೋಡಿದೆನೋ ಅದೇ ಅಲ್ಲವೇ ನಿನ್ನ ಚಪ್ಪರವು! ಆ ಚಪ್ಪರದಲ್ಲಿ ನನ್ನೀ ಚಿಕ್ಕ ಸಂಸಾರದ ಸಮಾವೇಶವೆಂತಾದೀತು? ನನಗಿರಲಿಕ್ಕಂತೂ ಬಹು ದೊಡ್ಡ ಮನೆ ಬೇಕಾಗುತ್ತದೆ." ಎಂದಂದು ಮಹಾರಾಜರು ತಾವೊಳ್ಳೇ ಮಾರ್ಮಿಕ ವಿನೋದದ ಪ್ರಶ್ನೆ ಮಾಡಿದೆವೆಂಬ ಭಾವನೆಯಿಂದ ಗಟ್ಟಿಯಾಗಿ ನಕ್ಕರು.

ಆದರೆ ಚಂದುವು—"ಲೋಕದಲ್ಲಿ ಮನುಷ್ಯನ ಮನಸ್ಸಿಗಿಂತಲೂ ದೊಡ್ಡದೇನಿದೆ? ಮತ್ತು ಯಾವ ಬಗೆಯಿಂದ ನನ್ನ ಪುಟ್ಟ ಮನಸ್ಸಿನಲ್ಲಿ ನನಗೆ ಗುರುಮಹಾರಾಜರನ್ನು ಸಂಗ್ರಹಿಸಬಂದಿತೋ, ಅದೇ ಬಗೆಯಿಂದ ನನ್ನ ಮನೆಯಲ್ಲಾದರೂ ನನಗೆ ಅವರನ್ನು ಸಂಗ್ರಹಿಸಬಂದೀತು. ಅಂದಬಳಿಕ ವಾಡೆಗೆ ಚಪ್ಪರವೆಂದ ಬಗ್ಗೆ ತಾವು ನನ್ನ ಚೇಷ್ಟೆ ಮಾಡಿರಿ; ಇಲ್ಲವೆ ದೂಷಿಸಿರಿ. ಭಾವನೆಯಿಂದ ಗುಡಿಸಲು ಹೇಗೆ ಅರಮನೆಯಾಗುವುದೋ, ಅದರಂತೆಯೇ ಅರಮನೆಯೂ ಗುಡಿಸಲಾಗುವದಿಲ್ಲವೇ?"

"ನೀನು ನನ್ನನ್ನು ನಿನ್ನಲ್ಲಿಗೊಯ್ದು ಏನು ಮಾಡತಕ್ಕವನು?"

"ತಮ್ಮ ಸೇವೆಮಾಡುವೆನು; ಇನ್ನೇನು?"

"ಭಲೆ! ಅಂದರೆ ನನ್ನ ಫಜೀತಿಯ ಪ್ರಸಂಗವನ್ನೇ ನೀನು ತಂದೆಯೆನ್ನು. ಯಾಕಂದರೆ ನಿನ್ನಂತಹ-ಕ್ಷಿತಿಜದ ಮೇಲೆ ಬಂದಂತಹ-ತರುಣ ಸೂರ್ಯನು ನನ್ನ ಹವ್ಯಾಸಕ್ಕೆ ಬಿದ್ದು ಅಸ್ತಂಗತನಾದರೆ, ನಿನ್ನನ್ನು ದೂಷಿಸುವದಕ್ಕಿಂತ ಜಗತ್ತು ನನ್ನನ್ನೇ ಹೆಚ್ಚಾಗಿ ಆಡಿಕೊಳ್ಳಲಿಕ್ಕಿಲ್ಲವೆ?"

ಚಂದು ನಕ್ಕು:—"ಮಹಾರಾಜ, ಲೋಕದ ನಿಂದೆಯ ಪಾಲುಗಾರಿಕೆಯನ್ನು ನಾನು ಮತ್ತು ತಾವು ನಮ್ಮ ನಮ್ಮಲ್ಲಿ ಹೇಗೆ ಮಾಡಿಕೊಳ್ಳಬೇಕೆಂಬದನ್ನು ಆ ಮೇಲೆ ನೋಡೋಣವಂತೆ; ಆದರೆ ಮೊದಲು ತಾವು ನನ್ನೊಡನೆ ನಮ್ಮ ಮನೆಗೆ ಬನ್ನಿರಿ"

ಮಹಾರಾಜರು ತಮ್ಮ ಗೋಣನ್ನು ಗಟ್ಟಿಯಾಗಿ ಅಲ್ಲಾಡಿಸಿ, ಆ ಒತ್ತಾಯಕ್ಕೆ ತಾವು ಬಿಕ್ಕೆ ಹಾಕುವವರಲ್ಲವೆಂಬದನ್ನು ನಿಶ್ಚಯಪೂರ್ವಕ

ವಾಗಿ ವ್ಯಕ್ತಪಡಿಸಿದರು. ಆಗ ಅವರು ಬಾಯಿಂದ:—"ನಮ್ಮ ಬಗ್ಗೆ ನಿನಗೆ ಏನಾದರೂ ಆದರವೆನಿಸಹತ್ತಿದ್ದರೆ, ಅದನ್ನು ನೀನು ದೂರಿನಿಂದಲೂ ಕಾಪಾಡ ಕೊಳ್ಳಬಂದೀತು. ಅಂತೆಯೇ ನೀನು ದಾರಿಗೆ ಹತ್ತ ಹೋಗು; ನಾನು ನನ್ನ ಮಾರ್ಗಕ್ಕೆ ಹತ್ತುವೆನು" ಎಂದು ಹೇಳಿದರು.

ಆದರೂ ಚಂದೂನ ನಿಶ್ಚಯವು ಚಲಿಸಲಿಲ್ಲ. ಆತನು ಇಷ್ಟೇ ಹೇಳಿದನು:—"ಒಳ್ಳೇದು. ತಮ್ಮೆದುರು ನಾನು ನನ್ನ ಇಚ್ಛಾಶಕ್ತಿಯನ್ನು ಪಣಕ್ಕೆ ಹಚ್ಚುವದೆಂದರೆ ಸಾಹಸವೇ; ಆದರೆ-ಆದರೆ ನಾನೇಕೆ ಹೇಳಲಿ?" ಇಷ್ಟು ಹೇಳಿ, ಚಂದುವು ಪದ್ಮಾಸನ ಹಾಕಿ ಕುಳಿತವರಂತೆ ಕುಳಿತೇ ಬಿಟ್ಟನು. ಅಲ್ಪಾವಕಾಶದಲ್ಲೇ ಶಿಷ್ಯವರನು ನಡೆಸಿದ್ದ ಪಾದಸಂವಾಹನವು ಮುಗಿಯಿತು. ಚಂದೂನೊಡನೆ ಹೆಚ್ಚು ಮಾತನಾಡದೆ ಮಹಾರಾಜರು ಸ್ನಾನದ ಸಿದ್ಧತೆಗಾಗಿ ಎದ್ದರು; ಹಾಗು ಹೊಳೆಯ ಹಾದೀ ಹಿಡಿದರು. ತಮಗೆ ಉತ್ಥಾನದ ಮನ್ನಣೆ ಕೊಡುವದಕ್ಕೆಂದು ಚಂದುವು ಎದ್ದು ನಿಂತರೆ, ಅವನನ್ನು ಮತ್ತೆ ಕಳಿಸಿಬಿಡಬೇಕೆಂಬ ವಿಚಾರವು ಮಹಾರಾಜರ ಮನಸ್ಸಿನಲ್ಲಿ ಬಂದಿತೋ ಇಲ್ಲವೋ ಹೇಳಬರುವಂತಿಲ್ಲ; ಆದರೆ ಚಂದುವು ಮಾತ್ರ ಕುಳಿತ ಸ್ಥಳದಿಂದ ಎದ್ದೇಳಲಿಲ್ಲ. ಆದರದ ಉತ್ಥಾನವನ್ನು ಕೊಡಬಾರದೆಂತಲ್ಲ; ಆದರೆ ತನ್ನ ನಿಶ್ಚಯವು ಕೊಂಚಮಾತ್ರವೂ ಚಲಿಸಲಿಲ್ಲೆಂದು ತೋರಬೇಕೆಂದು ಅವನು ಏಳಲಿಲ್ಲವಿಷ್ಟೆ

ಮಹಾರಾಜರೂ ಅವರ ಶಿಷ್ಯನೂ ಸ್ನಾನಕ್ಕೆ ಹೊರಟು ಹೋದ ಮೇಲೆ ಅಲ್ಲಿ ಚಂದುವೇ ಚಂದು; ಮತ್ತು ಎದುರಿಗಿನ ತೊಲೆಗೆ ತೂಗ ಹಾಕಿದ್ದ ಪಂಜರದಲ್ಲಿಯ ಆ ಕಪೋತ ಪಕ್ಷಿಯೇ ಪಕ್ಷಿಯು ಇವರಿಬ್ಬರೇ ಉಳಿದರು. ಆ ಹಕ್ಕಿಯ ಮೈಮೇಲಿನ ಗಾಯವಿನ್ನೂ ಮಾಯ್ದಿರಲಿಲ್ಲ. ಅದರೊಳಗಿನ ಮಾಂಸವು ದಿಟ್ಟಿಸಿ ನೋಡುವವರನ್ನು ಅಂಜಿಸುತ್ತಿತ್ತು. ಅದನ್ನು ಕಂಡು ಇನ್ನಾರಾದರೂ ಅಂಜಬಹುದಿತ್ತು; ಅವರಿಗೆ ಕೆಡಕೆನಿಸಬಹುದಿತ್ತು; ಅಂದ ಬಳಿಕ ಚಂದೂನಿಗೆ ಆ ಬಗ್ಗೆ ಕೆಡಕೆನಿಸಿದ್ದೀತೆಂಬದರಲ್ಲಿ ಆಶ್ಚರ್ಯವೇನು? ತನ್ನನ್ನು ಕಂಡು ನಗುವುದಕ್ಕೆ ಹತ್ತರ ಯಾರೂ ಇರದ್ದನ್ನು ಕಂಡು, ಚಂದುವು ಗಟ್ಟಿ ಗಟ್ಟಿಯಾಗಿ ಅಳಹತ್ತಿದನು; ಮತ್ತು ತನ್ನ ಮಾತು ಆ ಹಕ್ಕಿಗೆ ತಿಳಿಯುತ್ತದೇನೋ ಎಂಬ ಭೋಳೇ ಭಾವನೆಯಿಂದ ಆತನು:—"ಎಲಲ! ನಿನ್ನ ಬಡವನ ಸಂಸಾರವನ್ನು ನಾನು ಘಾತಗೊಳಿಸಿದೆನಲ್ಲವೆ? ಅಂದಬಳಿಕ ನನ್ನ ಸಂಸಾರದ ಘಾತವನ್ನು ದೇವರು ಕೂಡಲೆ ಮಾಡಿ ನನಗೆ ನ್ಯಾಯ ನಿರ್ಣಯವಿತ್ತನು; ಹಾಗು ಆತನು ನನ್ನನ್ನು ಶಿಕ್ಷಿಸಿದನೆಂಬುದು ಹೇ, ಅಜ್ಞಾನಿ ಹಕ್ಕಿಯೇ, ನಿನಗೆಂತು ತಿಳಿದೀತು? ನೀನು ಇನ್ನು ನಿನ್ನ ವಿರಹ ದುಃಖದಲ್ಲಿ

ಯೇ ಮಗ್ನನಾಗಿರುತ್ತೀ; ಆದರೆ ಲಕ್ಷ್ಯದಲ್ಲಿಡು. ನೀನು ಈ ವಿರಹ ದುಃಖ ದಲ್ಲಿ ಹೇಗೆ ನಿನ್ನ ಶೇಷಾಯುಷ್ಯವನ್ನೆಲ್ಲ ಕಳೆಯುವಿಯೋ, ಅದರಂತೆ ನಾನಾದರೂ ಕಳೆಯತಕ್ಕವನಿದ್ದೇನೆ; ಇಷ್ಟೇ ಅಲ್ಲ, ಯಾವನು ನಿನಗೀ ಪಂಜರ ನಿರ್ಮಿಸಿ, ತನ್ನ ಪ್ರೇಮದ ಸಹವಾಸದಲ್ಲಿಟ್ಟುಕೊಂಡಿರುವನೋ, ನಾನಾದರೂ ಆತನ ಮನಸ್ಸಿನ ಪಂಜರದಲ್ಲಿ ಸೇರುವ ಮತ್ತು ಬಂದಿವಾನನನ್ನಾಗಿ ಮಾಡಿಕೊಳ್ಳುವ ಪ್ರಯತ್ನವನ್ನು ಮಾಡಿಕೊಳ್ಳುತ್ತಿದ್ದೇನೆ. ನನ್ನ ರಕ್ತ ಮತ್ತು ಖಂಡಗಳನ್ನು ಕೊಟ್ಟು ನಿನ್ನ ಗಾಯವನ್ನು ವಾಸಿಪಡಿಸಲಿಕ್ಕೆ ನನಗೆ ಬಂದರೆ, ಅದು ನನಗೆ ಹೆಚ್ಚಾಗಿಯೇ ರುಚಿಸೀತು.''

ಆದರೆ ಆ ಬಡಹಕ್ಕಿಯು ಚಂದೂನ ಮನೋಗತವನ್ನದೆಂತು ತಿಳಿದೀತು? ಚಂದೂ ಎದುರಿಗೆ ಬಂದರೂ ಆತನಲ್ಲಿ ನಂಬಿಗೆಯಿರದ ಅಥವಾ ಆತನ ಅಂಜಿಕೆ ಯೆನಿಸಿದ ಯಾವ ಲಕ್ಷಣವನ್ನೂ ಅದು ಆಗ ತೋರಲಿಲ್ಲವಷ್ಟೆ. ಇವನ ಕೈಯಿಂದ ಹಾರಿಸಿದ ತುಬಾಕಿಯೊಳಗಿನ ಛರಿಗಳಿಂದಲೇ ತಾನು ಗಾಯಗೊಂಡೆ ನೆಂಬ ಗುರ್ತು ಆ ಹಕ್ಕಿಗೆಲ್ಲಿರಬೇಕು? ಅದರಿಂದ ಆ ಹಕ್ಕಿ ನೆರಳುತ್ತಲೆ ಪಂಜರ ದೊಳಗೆ ಶಕ್ಯವಾದಷ್ಟು ಚಲನವಲನಮಾಡುತ್ತಿತ್ತು.

ಕೆಲಹೊತ್ತಾದ ಬಳಿಕ ಚಂದುವು ಆ ಪಂಜರದೆದುರಿನಿಂದ ಹೊರಟು ಗರ್ಭಗುಡಿಯೊಳಗೆ ಹೋದನು. ಗಂಟೆಬಾರಿಸಿ, ಆತನು ದೇವರಿಗೆ ಪೊಡ ಮಟ್ಟನು. ಆಯ್. ಸಿ. ಎಸ್. ಆದರೂ ಹಿಂದೂಮನುಷ್ಯನ ಹುಟ್ಟುಸಂಸ್ಕಾರ ಗಳೆಂತು ಲುಪ್ತವಾದಾವು? ಬಳಿಕ ಹೊರಗೆ ಬಂದು ಅವನು ದೇವರಿಗೆ ಪ್ರದ ಕ್ಷಿಣೆ ಹಾಕಿದನು ಪ್ರಾಕಾರದಲ್ಲೆಲ್ಲ ತಿರುಗಾಡಿ, ಛಾವಣಿಯೊಳಗಿನ ಕಲ್ಲ ಕಮಾನುಗಳ ಶೋಭೆಯನ್ನು ನೋಡಿದನು. ಪ್ರಾಕಾರದ ಹೊರಗೆ ಅಡ್ಡಾಡಿ, ಅಲ್ಲಿಯ ವನಶ್ರೀಯನ್ನು ಕಂಡನು; ಹಾಗು ತಿರುಗಿ ಆ ಸಭಾಮಂಟಪದ ಹುಸಿಯಲ್ಲಿ ತನ್ನ ಮೊದಲಿನ ಸ್ಥಳಕ್ಕೇ ಹೋಗಿ, ಧ್ಯಾನಮಾಡುತ್ತಿರುವವನ ಹಾಗೆ ಕಣ್ಣುಮುಚ್ಚಿ ಕುಳಿತುಕೊಂಡನು; ಆದರೆ ಆತನು ಆಗ ಏತರ ಧ್ಯಾನ ಮಾಡುತ್ತಿರಬಹುದೆಂಬ ಕಲ್ಪನೆಯು ನಮ್ಮಂತೆ ನಮ್ಮ ವಾಚಕರಿಗೂ ಖಂಡಿತ ವಾಗಿ ಆಗದ್ದೀತು.

ಮಹಾರಾಜರು ಸ್ನಾನದಿಂದ ಮರಳಿ ಬಂದು ನೋಡಲಾಗಿ, ಚಂದುವು ತನ್ನ ಸ್ಥಳದಲ್ಲಿಯೇ ಕುಳಿತಿರುವನು. ಆತನ ಆ ನಿಶ್ಚಯಪ್ರದರ್ಶನದಿಂದ ಅವರಿಗೆ ಕೆಡಕೆನಿಸಲಿಲ್ಲ; ಸಿಟ್ಟೂಬರಲಿಲ್ಲ. ಆದರೂ ಅವರು ಆತನೊಡನೆ ಏನೂ ಮಾತಾಡಲಿಲ್ಲ. ಶಿಷ್ಯನು ಮೂರು ಕಲ್ಲಿನ ಒಲೆಯಲ್ಲಿ ಸೆದೆ-ಸೊಪ್ಪಿಗೆ ಬೆಂಕಿ ಹಚ್ಚಿ, ಆಹಾರವನ್ನು ಬೆಯ್ಯಿಸಿ ಸಿದ್ಧಪಡಿಸಿದ್ದನ್ನು ಕಂಡು ಮಹಾರಾಜರು:-

'ನೀನು ನೆಲಹಿಡಿದು ಕುಳಿತೇಬಿಟ್ಟಿರುವದರಿಂದ, ನೀನು ನಮ್ಮ ಜೊತೆಗೆ ಕೆಲ ಆಹಾರವನ್ನು ತಿನ್ನಲೇಬೇಕು' ಎಂದು ಚಂದುವಿಗೆ ಹೇಳಲು,

ಆನಂದದಿಂದ ಚಂದುವು:—"ಮತ್ತು ನಾನಾದರೂ ಇದಕ್ಕೂ ಹೆಚ್ಚಿಗಿನ್ನೇನು ಬೇಡುವೆನು?"

ಭೋಜನೋತ್ತರ ಮಹಾರಾಜರಿಗೆ ನಿದ್ದೆ ಬಂದದ್ದನ್ನು ಕಂಡು ಚಂದುವೂ ಶಿಷ್ಯನೂ ಇಬ್ಬರೂ ಎದ್ದರು; ಮತ್ತು ಗುಡಿಯ ಹೊರಗಿನ ಕಟ್ಟೆಗೆ ಹೋಗಿ ಮಾತಾಡುತ್ತ ಕುಳಿತರು. ಆ ಶಿಷ್ಯವರನ ಪ್ರಥಮ ದರ್ಶನದಿಂದ ಚಂದೂನ ಮನಸ್ಸಿನ ಮೇಲೆ ಹೆಚ್ಚಾಗಿ ಅನುಕೂಲಗ್ರಹವಾಗಿರಲಿಲ್ಲೆಂಬದನ್ನು ಈ ಮೊದಲೇ ತಿಳಿಸಲಾಗಿದೆ; ಆದರೆ ಇನ್ನು ಈ ಗುರುವಿನ ಸಹವಾಸ ಮಾಡಬೇಕಾದರೆ, ಈತನಿಗೆ ಅಂಟಿಕೊಂಡಿದ್ದ ಅಪ್ರಿಯನಾದಂಥ ಈ ಶಿಷ್ಯನ ಸಹವಾಸವೂ ಆಗುವುದೇ! ಅದನ್ನು ತಪ್ಪಿಸಿಕೊಳ್ಳಬೇಕೆನ್ನುವದರಲ್ಲಿ ಅರ್ಥವಿಲ್ಲ, ಎಂಬ ತಿಳುವಳಿಕೆಯ ವಿಚಾರಮಾಡಿ, ಚಂದುವು—"ಬುವಾಜಿ! ನಿಮ್ಮ ಗುರುಗಳ ಬಗ್ಗೆ ನನ್ನ ಭಾವನೆ ಎಂತಾಗಿದೆಯೆಂಬದನ್ನು ನೀವು ಕಂಡೇ ಕಂಡಿದ್ದೀರಿ. ಆದ್ದರಿಂದ ನೀವು ನನಗೆ ತುಸ ಮಾಹಿತಿ ಹೇಳುವಿರೇನು? ಈ ಮಹಾರಾಜರು ಯಾರು, ಎಲ್ಲಿಯವರು?"

ಶಿಷ್ಯವರನು ಒಮ್ಮೆಲೆ ಉತ್ತರ ಕೊಡಲಿಲ್ಲ. ಆತನು ಕೆಲಹೊತ್ತು ಯೋಚಿಸಿದ ಬಳಿಕ:—"ಈ ದೇಹಕ್ಕೆ 'ಜಂಬೂ' ಎಂದೆನ್ನುವರು; ಮತ್ತು ಮಹಾರಾಜರಿಗೆ 'ಗುರುಮಹಾರಾಜ' ಅನ್ನುವರು. ನಾನು ಇದಕ್ಕೂ ಹೆಚ್ಚಿಗೆ ಹೇಳಲಾರೆನು. ನಾನು ಕಳೆದ ಎರಡು ವರ್ಷಗಳಿಂದ ಅವರ ಸೇವೆಯಲ್ಲಿರುತ್ತೇನೆ. ಅವರ ಅಪ್ಪಣೆಯ ಹೊರತು ಅವರ ಬಗ್ಗೆ ನಾನು ಯಾರಿಗೂ ಏನೂ ಹೇಳಲಾರೆನು."

ಮುಗಿಯಿತು. ಚಂದೂನ ಮುಖ್ಯ ವಿಚಾರಣೆಗೆ ಒಡ್ಡೇಬಿದ್ದಿತು! ಆದರೆ ಕಾಲಕಳೆಯುವದಕ್ಕೆಂದು ಅವನು ಆ ಮೇಲೆ ಅತ್ತಿತ್ತಣದ ಮಾತು ತೆಗೆದನು; ಆದರೆ ಅವುಗಳಿಗೆ ಉತ್ತರ ಕೊಡುವಾಗ ಜಂಬೂ ಚಂದೂನ ಬಗ್ಗೆ ಹೇಳಲಿಕ್ಕೆ ಬಾರದಷ್ಟು ತುಚ್ಛತಾಬುದ್ಧಿಯನ್ನು ವ್ಯಕ್ತಪಡಿಸಿದನು. ಅಪರಾಹ್ಣಕಾಲದಲ್ಲಿ ಗುರುಗಳು ಎದ್ದು ಒಂದು ಹಳೇ ಮಾಸಿದ ಪುಸ್ತಕ ತೆಗೆದುಕೊಂಡು ಮನಸ್ಸಿನಲ್ಲಿಯೇ ಓದಹತ್ತಿದರು. ಕೂಡಲೆ ಚಂದುವು ಮತ್ತೆ ಹೋಗಿ ಅವರೆದುರು ಕುಳಿತುಕೊಂಡನು. ಹೀಗೆ ನಡೆದಿರಲು, ಸೂರ್ಯಾಸ್ತದ ಸಮಯವಾಯಿತು. ಇಷ್ಟರಲ್ಲಿ ದೂರಿನಿಂದ ಕುದುರೆಗಾಡಿಯ ಗಾಲಿಗಳ ಸಪ್ಪಳವಾಗಹತ್ತಿತು; ಮತ್ತು ಕುದುರೆಯ ಖುರಪುಟಗಳ ಸಪ್ಪಳವೂ ಕೇಳಿಸಹತ್ತಿತು.

ಮುಂದೆ ಒಂದೆರಡು ನಿಮಿಷಗಳಲ್ಲೇ ಮಾಲೀ ಕನ್ನನೂ ಆತನ ಹಿಂದೆ ಗಾಡಿಯಿಂದಿಳಿದಿದ್ದ ಸರ ಗಂಗಾರಾಮರೂ ಮಾಸಾಹೇಬರೂ ಗುಡಿಯೊಳಗೆ ಬಂದರು. ಅವರನ್ನು ಕಂಡಕೂಡಲೆ ಚಂದುವು ನಾಚಿದನು; ಯಾಕಂದರೆ ತನ್ನ ದಿನದ ಠೀವೆತ್ತ, ಮತ್ತು ಇಂದಿನ ಠೀವೆತ್ತ? ಇದರ ದಿಗ್ದರ್ಶನದಿಂದ ಅವನಿಗೊಳ್ಳೇ ನಾಚಿಕೆಗೇಡೆನಿಸಿತು. ಬೈರಾಗಿಯ ಎದುರು ತಲೆ ತಗ್ಗಿಸಿಕೊಂಡು ಕುಳಿತ ಮಗನನ್ನು ಕಂಡ ಕೂಡಲೆ ಅವನ ತಂದೆ-ತಾಯಿಗಳಿಗೆ ಆಶ್ಚರ್ಯವಂತೂ ಆಗಿಯೇ ಆಯಿತು; ಆದರೆ ಮೊದಲು ಏನೂ ಅನ್ನದೆ, ಅವರಿಬ್ಬರೂ ಔಪಚಾರಿಕ ರೀತಿಯಿಂದ ಆ ಬೈರಾಗಿಗೆ ನಮಸ್ಕರಿಸಿದರು. ಆಗ ಚಂದುವು ತೋರಿಕೆಯ ಉಬ್ಬಿನಿಂದ ಮುಂದೆ ಬಂದು—"ಅಪ್ಪಾ, ಅವ್ವಾ, ನಾನು ಮಹಾರಾಜರಿಗೆ ಮನೆಗೆ ಬರಲಿಕ್ಕೆ ಬಿನ್ನೈಸುತ್ತಿರುವೆನು; ನೀವು ಬಂದದ್ದೂ ವಿಹಿತವಾಯಿತು! ನಮ್ಮೆಲ್ಲರ ಬಿನ್ನಹವನ್ನು ಇವರು ನಿರಾಕರಿಸಲಿಕ್ಕಿಲ್ಲ."

ಆದರೆ ಮಹಾರಾಜರು ಅವರಿಬ್ಬರಿಗೆ ಬಿನ್ನಹ ಮಾಡಿಕೊಳ್ಳಲವಕಾಶ ವೀಯದೆ:-"ದೈವಯೋಗದಿಂದಲೇ ಭೆಟ್ಟಿಗಳಾಗುತ್ತಿರುತ್ತವೆ. ನಿಮ್ಮ ಮಗನ ನಿರ್ಧರವನ್ನು ಕಂಡು ನಾನು ನಿಮ್ಮಲ್ಲಿಗೆ ಬಂದು ಕೆಲ ದಿನವಿರುವುದನ್ನು ಯೋಜಿಸಿರುತ್ತೇನೆ; ಮತ್ತು ನಾನು ಹಾಗೆಂದು ಆಶ್ವಾಸನವನ್ನೂ ಕೊಡುತ್ತೇನೆ. ನೀವು ಈಗ ಇವನನ್ನು ನಿಮ್ಮ ಜೊತೆಗೆ ಕರೆದುಕೊಂಡು ಹೋಗಿರಿ. ನಾಳೆ ಬೆಳಗ್ಗೆ ನಾವಿಬ್ಬರೂ ಕಾಲು ನಡಿಗೆಯಿಂದಲೇ ಬರುತ್ತೇವೆ. ನಾನಂತೂ ಗಾಡಿಯಲ್ಲೆಂದೂ ಕೂರುವುದಿಲ್ಲ."

ಆದರೆ ಮಹಾರಾಜರು ಇದೇನನ್ನಾದರೂ ಹೇಳಿಕಳಿಸುತ್ತಿರಬಹುದೆಂಬ ಸಂದೇಹವು ಚಂದೂನ ಚರ್ಯೆಯಲ್ಲಿ ಕಂಡದ್ದರಿಂದ, ಮಹರಾಜರು ಆತನನ್ನುದ್ದೇಶಿಸಿ—"ತಮ್ಮಾ, ನನ್ನ ಮಾತಿನಲ್ಲಿ ನಿನಗೆ ನಂಬಿಗೆಯಿಲ್ಲವೇ? ಹಾಗಾದರೆ ಯಾರ ಮಾತಿನಲ್ಲಿ ನೀನು ನಂಬಿಗೆಯಿಡಲಾರೆಯೋ ಅಂಥವರ ಸಂಗತಿಯ ಇಚ್ಛೆಯನ್ನಾದರೂ ನೀನೇಕೆ ಧರಿಸುತ್ತೀ?"

ಈ ಸವಾಲು ನಿರುತ್ತರದ್ದಾಯಿತು. ಏನಾದರೂ ಮಾತಾಡಬೇಕೆಂದು ಸರ ಸಾಹೇಬರು—"ಈ ನಮ್ಮ ಹುಡುಗನಿಗೆ ಯಾವುದು ಪ್ರಿಯಕರವೋ, ಅದು ನಮಗೂ ಪ್ರಿಯಕರವಲ್ಲವೇ? ತಮ್ಮ ಚರಣಗಳು ನಮ್ಮ ಮನೆಗೆ ತಗಲಿದರೆ ನಮಗೆ ಆನಂದವೇ ಆದೀತು. ನಾವಿನ್ನು ಹೊರಡುತ್ತೇವೆ."

ಮಾಸಾಹೇಬರು ಮಾತ್ರ ಆಗ ಏನನ್ನೂ ಹೇಳಲಿಲ್ಲ. ಅವರು ತಮ್ಮ ಸೂಕ್ಷ್ಮದೃಷ್ಟಿಯಿಂದ ಆ ಗುರುಶಿಷ್ಯರನ್ನು ನಿರೀಕ್ಷಿಸುತ್ತಿದ್ದರು.

——

ಈ ರೀತಿಯಾಗಿ ಚಂದೂಲಾಲನನ್ನು ಮುಂದೆ ಕಳಿಸಿಕೊಟ್ಟದ್ದರಿಂದ ಆ ಗುರು-ಶಿಷ್ಯರಿಗೆ ಮನಬಿಚ್ಚಿ ಮಾತನಾಡಲಿಕ್ಕೂ ಮುಂದಿನ ಬೇತುಗಳನ್ನು ನಿರ್ಧರಿಸಲಿಕ್ಕೂ ಅವಕಾಶವಾಯಿತು. ಅವರಿಬ್ಬರೂ ಅಲ್ಲಿಂದೆದ್ದು ದೂರದಲ್ಲಿ ಹೊಳೆ ದಂಡೆಗೆ ಹೋಗಿ ಕುಳಿತರು; ಮತ್ತು ಅಲ್ಲಿ ತಮ್ಮ ಮಾತುಗಳನ್ನು ಕೇಳಿಕೊಳ್ಳುವವರು ಸಮೀಪದಲ್ಲಾರೂ ಇಲ್ಲೆಂಬದನ್ನು ಖಾತ್ರಿಮಾಡಿಕೊಂಡ ಬಳಿಕ ಅವರ ಬೇತಿಗೆ ಪ್ರಾರಂಭವಾಯಿತು.

ಜಂಬುವೇ ಮಾತಾಡಲಿಕ್ಕೆ ಮೊದಲು ಪ್ರಾರಂಭಿಸಿದನು. ಬೇರೆ ಜನರೆದುರಿಗೆ ಆತನು ಆ ಪ್ರೌಢ ಬೈರಾಗಿಗೆ 'ಗುರುಜೀ' ಎಂದೆನ್ನುತ್ತಿದ್ದನು; ಆದರೆ ಆ ಶಬ್ದವನ್ನು ಖಾಸ ಸಂಭಾಷಣದಲ್ಲಿ ತ್ಯಜಿಸಿ, ಬರಿಯ 'ಗುರು' ಎಂಬ ಶಬ್ದವನ್ನು ಕೇವಲ ಸಲಿಗೆಯಿಂದ ಉಪಯೋಗಿಸುತ್ತಿದ್ದನು. 'ಗುರು!' ಈ ಶಬ್ದದ ವಿಶಿಷ್ಟ ಅರ್ಥವು ಹರೇಮಿ-ಧೂರ್ತ ಮನುಷ್ಯ! ಎಂದಾಗುತ್ತದೆ. ಶಿಷ್ಯ ಎಂಬ ಪದವಿಯನ್ನು ಯಾವನು ಸ್ವೀಕರಿಸುವನೋ, ಆತನ ಹಣೇಬರೆಹದ ಮೂಲಕ ಅವನು ಏಕವಚನದ ಹೀನ ಶಬ್ದಗಳಿಂದ ಸಂಬೋಧಿಸಿಕೊಳ್ಳುವ ಭಾಗವೇ ಬೀಳುವದು. ಅದರಿಂದ ಜಂಬುವು ಜಂಬುವಾಗಿಯೇ ಉಳಿದನು!

ಜಂಬೂ ಅಂದನು:—"ಭಲೆ ಗುರು! ಮೊನ್ನಿನ ನಿಮ್ಮ ನಾಟಕವು ಹೀಗೆ ಕೊನೆಗಂಡೀತೆಂದು ಕನಸಿನಲ್ಲಿಯೂ ಬಂದಿರಲಿಲ್ಲ."

ಗುರುಜೀ ಹೇಳಿದನು:—"ಎಲೋ ಮಗನೇ, ಜಂಬ್ಯಾ, ಬುವಾಬಾಜಿಯೊಳಗಿನ ನಿಜವಾದ ಕಸಬು ಇದೇ ಅದೆ. ನಾಟಕ ಮುಕ್ತಾಯದ ಕಲ್ಪನೆಯು ಮೊದಲು ಯಾರಿಗೂ ಆಗಬಾರದೆಂದೇ ಕುಶಲನಾಟಕಕಾರನ ಕರಾಮತಿ ಇರುತ್ತದೆ."

"ಆದರೆ ಗುರು, ಎಷ್ಟೋ ಪ್ರಸಂಗಗಳಲ್ಲಿ ಮುಂದಿಗಂತೂ ಇರಲಿ, ಸ್ವತಃ ನಾಟಕಕಾರನಿಗಾದರೂ ತಾನು ಅದರ ಕೊನೆಯನ್ನು ಹೇಗೆ ಮಾಡುವನೆಂಬ ಕಲ್ಪನೆಯು ಪ್ರಾರಂಭದಲ್ಲಿರದಂತೆ ಘಟಿಸುತ್ತಿರಬಹುದಲ್ಲವೆ?"

"ನಾನದನ್ನೇನು ಹೇಳಲಿ? ನಾನು ನಾಟಕಗಳನ್ನೆಂದಾದರೂ ಬರೆದಿರುವೆನೇ?"

"ಬರೆಯದಿರಲಿ; ಆದರೆ ಬರೆಯುವವರಿಗಿಂತ ಪ್ರತ್ಯಕ್ಷ ಅವುಗಳನ್ನು ಮಾಡಿ ತೋರಿಸುವವರ ಕಸಬೇ ಶ್ರೇಷ್ಠವು! ಮೊನ್ನಿನ ಉದಾಹರಣೆಯನ್ನೇ ನೋಡಿರಿ. ನಾವಿಬ್ಬರೂ ಆ ಯುವಕನನ್ನು ಬೇಟೆಯಾಡುವಾಗ ಹಿಡಿದೆವು. ಕೂಡಲೆ ನೀವು ನಿಮ್ಮ ವೇಷಕ್ಕೊಪ್ಪುವಂತೆ ಹಿಂಸೆಯ ನಿಷೇದಕ್ಕೂ ಅಳುವ

ದಕ್ಕೂ ಪ್ರಾರಂಭಿಸಿದಿರಿ; ಆದರೂ ಆ ಉನ್ಮತ್ತ ತರುಣನು ತನ್ನ ಹಾದಿಯನ್ನೇ ಹಿಡಿದನು; ಆತನು ತಿರುಗಿ ನಿಮ್ಮನ್ನೇ ಬೆದರಿಸಿದನು. ಆ ಮೇಲೆ ಕೇವಲ ದಯಾಬುದ್ಧಿಯನ್ನು ತೋರಿ, ನಾವು ಆ ಹಕ್ಕಿಗಳನ್ನು ಇಸಗೊಂಡು ಬಂದೆವು. ಈ ಸಂಗತಿಗಳೆಲ್ಲ ಬಯಸಿದಂತೆಯೇ ನಡೆದವು. ಯಾಕಂದರೆ, ಪಕ್ಷಿಗಳ ಬೇಟೆಯನ್ನು ಪ್ರತಿಯೊಬ್ಬ ಬೈರಾಗಿ-ಬುವಾಜಿಗಳು ತ್ಯಾಜ್ಯವೆಂದೇ ಅನ್ನತಕ್ಕ ವರು! ಆದರೆ ಯಾವ ಯುವಕನು ಮೊನ್ನೆ ನಿಮಗೆ ಗುದ್ದಿ ಕಳಿಸುವದಷ್ಟನ್ನೇ ಬಿಟ್ಟಿದ್ದನೋ, ಅವನೇ ಇಂದು ತನ್ನ ಕಾಲಿನಿಂದ ನಡೆದು ಬಂದು, ನಿಮ್ಮ ಕಾಲುಗಳನ್ನು ಹಿಡಿಯುತ್ತಾನೆ! ನಿಮ್ಮನ್ನು ಗುರುಗಳನ್ನಾಗಿ ತಿಳಿಯುತ್ತಾನೆ! ಮತ್ತು ತಮ್ಮ ಮನೆಗೆ ಕರೆದೊಯ್ಯುತ್ತಾನೆ! ಇತ್ಯಾದಿ ಚಮತ್ಕಾರಗಳ ಕಲ್ಪನೆಯು ಯಾರಿಗಾದೀತು?"

"ಇದರ ಬಗ್ಗೆ ನನಗೆ ಸ್ವಂತಕ್ಕೂ ಬಹಳೇ ಆಶ್ಚರ್ಯವೆನಿಸಿತಲ್ಲ! ಆದರೆ ನಾನು ಅದನ್ನು ತೋರಗೊಡಲಿಲ್ಲವಷ್ಟೇ. ತದ್ವಿರುದ್ಧ ನಡೆದ ಸಂಗತಿ ನಡೆಯ ತಕ್ಕದ್ದೇ ಇದ್ದಿತೆಂಬ ಆಭಾಸವನ್ನು ನಾನು ಮಾಡಬೇಕಾಗಿತ್ತು; ಮತ್ತು ಅದು ತಕ್ಕಂತೆಯೇ ಸಾಧಿಸಿತು"

"ಹಾಗಾದರಿನ್ನು ಮುಂದೆ ತಮ್ಮ ಬುವಾಬಾಜಿಯ ಗೀತವನ್ನು ಯಾವ ಕರೀ ಬಿಳೀ ಪಟ್ಟಿಗಳ ಮೇಲೆ ಹಾಡುತ್ತಿರುವುದು?"

"ಅರ್ಥಾತ್ ಅಹಿಂಸೆಯ ಬಿಳೀಪಟ್ಟಿಯ ಮೇಲೆಯೇ. ನಾನು ಅಹಿಂಸೆಯ ಭೋಕ್ತಾರನೆಂದು ಆ ಯುವಕನನ್ನು ನಿಷೇಧಿಸಿದೆನು. ಆತನ ಹಿಂಸೆಯ ಅಪ ರಾಧದಮೇಲೆ ನನ್ನ ಕೋಪ ಮತ್ತು ದೇವರ ನ್ಯಾಯನಿರ್ಣಯ ಇವುಗಳನ್ನು ನಾನು ತಂದು ಕೂಡ್ರಿಸಿದೆನು; ಮತ್ತು ಅವೆರಡೂ ಆತನಿಗೀಗ ಸಂಪೂರ್ಣ ಮನಗಂಡವೆಂಬದು ಸ್ಪಷ್ಟ ವ್ಯಕ್ತವಾಗಲಿಲ್ಲವೇ? ಅಂದರೆ ಅವನ ಭಾವನೆಯ ನಾಡಿಯು ಇಲ್ಲವೆ ನರವು ನನಗೆ ಸಿಕ್ಕಿತು. ಅದರಿಂದ ನಾವು ಅವನ ಮನೆಗೆ ಇರಲಿಕ್ಕೆ ಹೋದ ಬಳಿಕ, ನಮ್ಮ ಎಲ್ಲ ಗುರಿಯನ್ನು ಅಹಿಂಸಾಪ್ರತಿಪಾದನದ ಮೇಲೆಯೇ ಇರಿಸಬೇಕಾದೀತು!"

"ಆದರೆ ಆ ತರುಣನಿನ್ನು ಮುಂದೆ ಪ್ರತ್ಯಕ್ಷ ಬೇಟೆಯಾಡಿ ಹಿಂಸೆಗೆ ಸಿದ್ಧ ನಾಗಲಿಕ್ಕಿಲ್ಲ. ಆತನು ಇನ್ನು ಮುಂದೆ ತನ್ನ ತುಬಾಕಿಯನ್ನು ಕೂಡ ಮುಟ್ಟ ಲಾರನೆಂದು ತಿಳಿಯಿರಿ. ಅಂದಮೇಲೆ ಪ್ರಾಣವಧದ ಅಹಿಂಸೆಯ ಆ ಏಕದಾರಿ ಬಾರಿಸಿ ಇನ್ನು ಪ್ರಯೋಜನವೇನು?"

"ಜಂಬ್ಯಾ, ಹುಚ್ಚಾ, ನಿನಗೆ ಗಾಯನಶಾಸ್ತ್ರದ ಜ್ಞಾನವಿಲ್ಲ. ಸಂಗೀ ತದ ಪ್ರತಿಯೊಂದು ಸ್ವರದೊಳಗಿಂದ ಉಪಸ್ವರಗಳು ಹೊರಡುತ್ತವೆ; ಅನುಕ

ರಣವಾಗುತ್ತದೆ; ಮತ್ತು ಅದರೊಳಗಿಂದಲೇ ಸ್ವರ ವಿಸ್ತಾರವಾಗುತ್ತದೆ. ಅದರಂತೆ ಇದರಲ್ಲೂ ಮುಖ್ಯ ಸ್ವರ ಅಹಿಂಸೆಯದನ್ನು ಹಚ್ಚಿ, ಅದರೊಳಗಿಂದ ಹೊರಡುವ ಉಪಸ್ವರಗಳೊಳಗಿಂದ ಅಹಿಂಸೆಯ ಕಲ್ಪನೆಯ ವಿಸ್ತಾರವನ್ನು ಅನುಕೂಲಪ್ರಕಾರ ಮಾಡಿಕೊಳ್ಳುವುದು.''

''ಇದು ನನಗಿನ್ನೂ ಚೆನ್ನಾಗಿ ತಿಳಿಯಲಿಲ್ಲ; ಯಾಕಂದರೆ, ಅಹಿಂಸಾ ಶಬ್ದಕ್ಕೆ ನಾನು ಒಂದೇ ಅರ್ಥವನ್ನು ಬಲ್ಲೆನು. ಆ ಶಬ್ದದುಚ್ಚಾರದಿಂದ ನನ್ನ ಮನಸ್ಸಿನಲ್ಲಂತೂ ಒಂದೇ ಕಲ್ಪನೆಯು ಬರುತ್ತದೆ. ಅದಾವುದೆಂದರೆ, ಜೀವವನ್ನು ಹತಿಸದಿರುವದು. ಅಂದಬಳಿಕ ಈ ಕಲ್ಪನೆಯ ವಿಸ್ತಾರವನ್ನೆಂತು ಮಾಡುವುದು? ಇನ್ನು ಪಂಚಪ್ರಾಣವೆನ್ನುವ ರೂಢಿಯಿರುವದು ನಿಜ; ಆದರೆ ಪಂಚಪ್ರಾಣಗಳನ್ನು ಹತಿಸಿದರೇ ಹಿಂಸೆಯಾಯಿತು; ಇಲ್ಲದಿದ್ದರೆ ಇಲ್ಲವೆಂದು ಅದಾರು ಅಂದಾರು?''

''ಹಿಂಸೆಯ ಕಲ್ಪನೆಯ ವಿಸ್ತಾರ ಇಲ್ಲವೆ ಸಂಕೋಚ ಮಾಡುವುದರಲ್ಲೇ ಗುರುಕೀಲವಿದೆ; ಆದರೆ ಮೊದಲು ಪಂಚಪ್ರಾಣವೆಂದರೆ ನೀನು ಯಾವುದೆಂದು ತಿಳಿಯುತ್ತೀ, ಅದನ್ನಾದರೂ ಹೇಳು ನೋಡೋಣ.''

''ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಇತ್ಯಾದಿ ಏನೋ ಅನ್ನುವರಲ್ಲ ಅವು.''

''ಹಾಗಾದರಾಯಿತಿನ್ನು; ಅಲ್ಲದೆ ಪ್ರಾಣಗಳಲ್ಲಿ ಭಾವನೆಗಳೂ ಬರುವವು. ನಮ್ಮ ಅನುಕೂಲತೆಗೆ ಹೇಗೆ ಬಂದೀತೋ ಹಾಗೆ ಮಾಡಬೇಕು; ಅಂದರೆ ಉದಾಹರಣೆಗಾಗಿ, ಪಂಚಪ್ರಾಣಗಳು ಒಮ್ಮೆಲೆ ಹೋಗಲಿಲ್ಲೆಂದು ಹಿಂಸೆಯಾಗಲಿಲ್ಲ, ಹೀಗೆಂದೂ ಅನ್ನಲಾದೀತು; ಅಥವಾ ಅದಕ್ಕೆ ವಿಪರೀತವಾಗಿ ಅನುಕೂಲತೆಯಿದ್ದರೆ ಒಂದೇ ಪ್ರಾಣವನ್ನು ಹತಿಸಿದರೂ ಅದು ಹಿಂಸೆಯೇ ಆಯಿತು!''

''ಆದರೆ ಒಂದೇ ಪ್ರಾಣ ಹತಿಸುವದೆಂದರೇನು?''

''ಐದು ಪ್ರಾಣಗಳಲ್ಲಿ ಯಾವುದೊಂದು ಪ್ರಾಣದ ಅವರೋಧ ಅಥವಾ ಉದ್ಗಾರವನ್ನು ಅಸ್ವಾಭಾವಿಕ ರೀತಿಯಿಂದ ಮಾಡುವುದಕ್ಕೆ ಒಬ್ಬನು ಇನ್ನೊಬ್ಬನನ್ನು ಮಾಡಹಚ್ಚಿದನೆಂದರೆ ಅದಕ್ಕೆ ಪ್ರಾಣಹತಿಸುವದು ಇಲ್ಲವೆ ಹಿಂಸೆಯೆಂದೆನ್ನಬಹುದು. ಇದಕ್ಕೆ ಉದಾಹರಣೆಯೆಂದರೆ—ನಾನು ನಿನ್ನ ಬಾಯಿ ಮೇಲೆ ಕೈಯಿಟ್ಟರೆ ನಿನ್ನ ಉಸಿರು ತುಸ ಕಟ್ಟುವದಿಲ್ಲವೆ? ಮತ್ತು ಶ್ವಾಸೋಚ್ಛ್ವಾಸವು ಸ್ವಾಭಾವಿಕಕ್ಕಿಂತ ತೀರ ಸಾವಕಾಶವಾದೀತಲ್ಲವೆ? ಹಿಂಸೆಗೆ ಅದು ಸಾಕಷ್ಟಾಯಿತು. ತದ್ವಿರುದ್ಧವಾಗಿ ನೀನು ನನ್ನೊಡನೆ ನಡೆಯುವಾಗ ನಿನ್ನನ್ನು ಸ್ವಾಭಾವಿಕಕ್ಕಿಂತ ಹೆಚ್ಚಿನ ವೇಗದಿಂದ ನಡೆಯಹಚ್ಚಿದರೆ, ನಿನ್ನ ಶ್ವಾಸೋ

ಚ್ಛ್ವಾಸವು ಸ್ವಾಭಾವಿಕಕ್ಕಿಂತ ಹೆಚ್ಚು ತೀವ್ರವಾಗಿ ಆಗಹತ್ತೀತಲ್ಲವೆ? ಅದು ಹಿಂಸೆಯೇ ಆಯಿತು."

"ಒಬ್ಬರು ಇನ್ನೊಬ್ಬರಿಗೆ ಹೆಚ್ಚು ತಿನ್ನುಣ್ಣ ಬಡಿಸಿದರೆ ಅಥವಾ ಕುಡಿಯಲಿಕ್ಕೆ ಕೊಟ್ಟರೆ ಹಾಗು ಅದರಿಂದ ಅವರಿಗೆ ತೇಗು ಬಂದರೆ ಅದೂ ಹಿಂಸೆಯೇ ಆಯಿತೆನ್ನ ಬೇಕಲ್ಲವೆ?''

''ಅಲ್‌ಬತ್. ಅದು ಅಪಾನ, ಉದಾನ ವಾಯುಗಳ ಸಂಬಂಧದ ಹಿಂಸೆಯಾಯಿತು.''

"ಒಬ್ಬನು ಇನ್ನೊಬ್ಬನಿಗೆ ಸಿಟ್ಟಿನಿಂದ ಬೈದು, ಅಂದು ದುಃಖವಿತ್ತರೆ, ಅದೂ ಹಿಂಸೆಯಾಯಿತೇ?''

"ಅಲ್‌ಬತ್! ಅದು ವ್ಯಾನ ವಾಯು ಸಂಬಂಧದ ಹಿಂಸೆಯಾಯಿತು.''

'ಒಬ್ಬರು ಇನ್ನೊಬ್ಬರನ್ನು ಪ್ರೀತಿಸಿ.ಭಾವನೆಯನ್ನು ಪ್ರಜ್ವಲನಗೊಳಿಸಿ ದರೆ ರಕ್ತಾಭಿಸರಣವು ವೃದ್ಧಿಸೀತು. ಅಂದರೆ ಅದೂ ಹಿಂಸೆಯೇ ಆಗುವದೇ?'

"ಅಲ್‌ಬತ್! ಸ್ವಂತ ಪ್ರೇಮಾಶ್ರುಗಳನ್ನು ದುರಿಸುವದೂ ಇಲ್ಲವೆ ಇನ್ನೊಬ್ಬರಿಗೆ ಅವುಗಳನ್ನು ದುರಿಸ ಹಚ್ಚಲಿಕ್ಕೆ ಕಾರಣವಾಗುವದೂ ಇವು ಕೂಡ ಆತ್ಮಸ್ಥ ಹಾಗು ಪರಸ್ಥ ಹಿಂಸೆಗಳೇ ಎಂದೆನ್ನಲಾದೀತು; ಅಂದರೆ ಹಾಗೆ ನೆವ ಹೇಳಬಂದೀತು.''

''ಇದಕ್ಕಿಂತ ನಾನು ಅಂದರೆ ಗುರುಜೀ, ನೀವು ಯಾವ ಯಾವುದಕ್ಕೆ ತುಚ್ಛವೆನ್ನುವೆನೋ, ಯಾವು ಯಾವುದನ್ನು ನಿಷೇಧ ಮಾಡೇನೋ ಅವೆಲ್ಲ ಹಿಂಸೆ ಎಂಬ ಸದರಿನಲ್ಲಿ ಬರುತ್ತವೆಂದು ಒಮ್ಮೆಲೆ ಹೇಳಿಬಿಡಿರಿ. ಅಂದರೆ ಶಬ್ದಾರ್ಥವೂ ನನ್ನ ಬುದ್ಧಿಯದೂ ಛಲನ ತಪ್ಪೀತು.''

''ಖಂಡಿತವಾದುದನ್ನೇ ಹೇಳಿದೆ. ಪ್ರತಿಯೊಂದು ಕಾಲಕ್ಕೆ ಹಿಂಸಾ ಶಬ್ದದ ಅರ್ಥವನ್ನು ನಾನು ನನ್ನ ಲಹರಿಯಂತೆ ಬೇಕುಬೇಕಾದ ಹಾಗೆ ಮಾಡಿದರೂ ಆ ಕಾಲಕ್ಕೆ ಅದೇ ಯೋಗ್ಯವೆಂದು ನೀನು-ಶಿಷ್ಯನಾದವನು-ಭಾವಿಸಬೇಕಾದೀತು; ಮತ್ತು ನೀನು ಅದರಂತೆ ವರ್ತನವನ್ನಿಡಬೇಕಾದೀತು."

''ಆದರೆ ನಮ್ಮ ಸಂಭಾಷಣದಿಂದ ನನಗೆ ನಿಮ್ಮ ಹಿಂಸೆ-ಅಹಿಂಸೆಗಳ ಅರ್ಥವು ಈಗ ಹೇಗೆ ತಿಳಿಯಿತೋ-ಅಂದರೆ ತಿಳಿಯಲಿಲ್ಲವೋ—ಅದರಂತೆ ಅದು ಬೇರೆಯವರಿಗೆ ಹೇಗೆ ತಿಳಿದೀತು? ಮತ್ತು ಅದು ಮುಂಗಡವಾಗಿ ತಿಳಿಯದ್ದರಿಂದ ಅವರ-ಅಂದರೆ ನಿಮ್ಮನ್ನು ಗುರು ಎಂದು ತಿಳಿದು ನಡೆಯುವ ಆ ದೊಡ್ಡ ವಾಡೆಯೊಳಗಿನ ಜನರ—ಆಚರಣವು ಹೆಜ್ಜೆ ಹೆಜ್ಜೆಗೂ ತಪ್ಪಿನ ದೆಂದು ತೋರೀತಲ್ಲ! ಅದರ ಗತಿಯೇನು?''

"ಗತಿಯೇನಾಗಬೇಕು? ಸಾಂಪ್ರದಾಯಿಕ ಶಿಷ್ಯರಿಗೆ ಹೆಜ್ಜೆ ಹೆಜ್ಜೆಗೂ ಹೆಸರಿಡಲಿಕ್ಕೂ-ತಪ್ಪಾಯಿತೆನಿಸಲಿಕ್ಕೂ-ಸಂಧಿ ದೊರಕಿಸಿಕೊಡುವದರಲ್ಲಿಯೇ ಯಾವ ಗುರವಿನದಾದರೂ ಗುರುತ್ವವು-ಗುರುಪದವು ಉಳಿಯುತ್ತದೆ; ಯಾಕಂದರೆ, ನಿಜವಾಗಿ ಅವರು ತಪ್ಪುವರೋ ಅಥವಾ ಗುರುವು ತಪ್ಪುವನೋ ಅದರ ನಿರ್ಣಯುವನ್ನಾರು ಮಾಡುವರು? ಆ ಅಧಿಕಾರವಾರಿಗಿದೆ? ಎಲೋ ಟೊಣಪಾ, ಪ್ರತಿಯೊಂದು ನಿಯಮದ ಅರ್ಥಜ್ಞಾನವು ಎಷ್ಟು ಗೂಢವೋ ಮತ್ತು ಅದನ್ನು ಬೇರೆ ಬೇರೆ ಕಾಲಕ್ಕೆ ಬೇರೆ ಬೇರೆ ಅರ್ಥ ಮಾಡುವ ಶಕ್ಯತೆಯು ಎಷ್ಟು ಅಧಿಕವೋ, ಅಷ್ಟು ಶಿಷ್ಯರ ಮೇಲೆ ಗುರುವಿನ ಮುರವತ್ತು ಉಳಿಯುವ ಶಕ್ಯತೆಯು ಅಧಿಕವೆಂಬದು ನಿನಗೆ ಗೊತ್ತಿಲ್ಲವೇ?"

"ಆದರೆ ಈ ಬಾಯಿಕಟ್ಟಿದ ಹೊಡೆತಕ್ಕೆ, ಈ ನಿರ್ಣಯ ಛಲನಕ್ಕೆ ಅನುಯಾಯಿಗಳೂ ಶಿಷ್ಯರೂ ಸಿದ್ಧರಾಗಬೇಕಲ್ಲವೆ?"

"ಸೆಗಣಿ ತಿನ್ನುತ್ತ ಸಿದ್ಧರಾಗುತ್ತಾರೆ. ಒಮ್ಮೆ ಸ್ವಂತದ ಬುದ್ಧಿಯು ನಾಶವಾದ ಬಳಿಕ ಅಥವಾ ಅದನ್ನು ಬೇಕಂತಲೇ ಗುರುಚರಣಕ್ಕರ್ಪಿಸಿದ ಮೇಲೆ ಅವರ ಕೆಲಸವು ಬಹಳ ಹಗುರು ಹಾಗು ಸುಲಭವಾಗುತ್ತದೆ."

"ಅದೆಂತು?"

"ಅದು ಹೀಗಿದೆ:—ಗುರುವು ಯಾವುದೇ ಅರ್ಥ ಪ್ರಕಟಗೊಳಿಸದರೂ ಅದೇ ನಿಜ, ಅದೇ ಯೋಗ್ಯ, ಅದೇ ಈಶಪ್ರಣೀತವೆಂದೆನ್ನುತ್ತ ಕೋಲಾಹಲ ಮಾಡಹತ್ತುವದು; ಮತ್ತು ಉಳಿದವರ ಮೇಲೆ ಹರಿಹಾಯುವದು ಇದು ಸುಲಭವಲ್ಲವೆ? ನೀನು ಅಜೀರ್ಣವಾಗುವವರೆಗೆ ತಿಂದೆಯೆಂದು ತಿಳಿ. ನಾನು ಅದಕ್ಕೆ ಅಮ್ಲರಸದ ಹಿಂಸೆ ಮಾಡಿದನೆಂದೂ, ಅದಕ್ಕೆ ವಿಪರೀತವಾಗಿ ನೀನು ಉಪೋಷಣ ಮಾಡಿದರೆ ನಾನದಕ್ಕೆ ಜಠರದ ಹಿಂಸೆಯಾಯಿತೆಂದೂ ಅನ್ನುವೆನು."

"ಹಿಂಸೆ-ಅಹಿಂಸೆಗಳ ಅರ್ಥವು ಇಷ್ಟು ಸಹಜವಾಗಿ ಮಣಿಯುವಂತಹದಾದರೆ, ನನಗೂ ಅಂದರೆ ನಿಮ್ಮ ಸಲಿಗೆಯ ಪಟ್ಟಶಿಷ್ಯನಿಗೂ ಹೆಜ್ಜೆಹೆಜ್ಜೆಗೆ ತಪ್ಪು ಮಾಡದ ಹೊರತು ಮತ್ತು 'ಇಂಥ ಪಟ್ಟ ಶಿಷ್ಯನಾದರೂ ತಿಳಿಗೇಡಿಯು' ಎಂಬ ದುಷ್ಕೀರ್ತಿಯ ಕಾಡಿಗೆಯನ್ನು ಬಡಕೊಳ್ಳದ ಹೊರತು ಬೇರೆ ಗತಿಯೇ ಇಲ್ಲ."

"ಎಲೋ ಹುಚ್ಚಾ, ಅಂಥ ದುಷ್ಕೀರ್ತಿಯು ಒರಸಿ ಹೋಗಲಿಕ್ಕೊಂದು ಸುಲಭ ಉಪಾಯವಿದೆ."

"ಅದಾವುದು ಗುರು!"

"ಎಲೊ, 'ತಪ್ಪಿದೆ' 'ಕ್ಷಮಸ್ವ' ಎಂದಂದು ತನ್ನ ಕೆನ್ನೆಯ ಮೇಲೆ ಫಟ್ಟ-ಫಟ್ಟೆಂದು ಹೊಡಕೊಂಡು ಕಪಾಳಬಾಯಿಸಿಕೊಳ್ಳುವುದು!"

"ಹಾಗೆಯೇ ಆಗಲಿ. ಬೇರೆ ಹಲವು ಪ್ರಸಂಗಗಳಲ್ಲಿ ಗುರೂಜಿಯ ಮುಂದಿನ ಮಿಠಾಯಿ, ಹಣ್ಣು-ಹಂಪಲ, ಪೇಢೆ, ಉತ್ತತ್ತಿ ಮೊದಲಾದವುಗಳನ್ನು ತಿಂದು, ಅವುಗಳ ಚರ್ವಣದಿಂದ ಒಳಗಿನ ಗಲ್ಲಗಳನ್ನು ಬಾಯಿಸಿಕೊಳ್ಳಲಿಕ್ಕೆ ಬಂದರೆ, ನಡುನಡುವೆ ಯಾವಾಗಾದರೊಮ್ಮೆ ಸಟೆ-ದಿಟ ತಪ್ಪಿನ ಬಗ್ಗೆ ಕೆನ್ನೆಯ ಮೇಲೆ ಹೊಡೆದುಕೊಂಡು ಹೊರಗಿನಿಂದ ಗಲ್ಲಗಳನ್ನು ಬಾಯಿಸಿಕೊಳ್ಳಲಿಕ್ಕೆ ಯಾವ ಶಿಷ್ಯನಾದರೂ ಹಿಂದುಮುಂದೇಕೆ ನೋಡಬೇಕು? ಒಳ್ಳೇದು. ಹಿಂಸೆ-ಅಹಿಂಸೆ ಶಬ್ದಗಳ ಸಂಕೋಚ ವಿಸ್ತಾರಗಳು ನನಗೆ ಗೊತ್ತಾದವು; ಆದರೆ ಗುರು! ಒಂದು ಮಾತಿನ ನಿರ್ಣಯವು ನನಗಿನ್ನೂ ತಿಳಿದಿಲ್ಲ."

"ಅದಾವ ಮಾತಪ್ಪಾ?"

"ಅದಾವುದೆಂದರೆ, ಮೊನ್ನೆ ಬೆಳಿಗ್ಗೆ ಆ ಯುವಕನನ್ನು ಆ ತೋಟದಲ್ಲಿ ಉನ್ಮಾದವಸ್ಥೆಯಲ್ಲಿ ಬಿಟ್ಟು, ಬರಿಯ ಆ ಪಕ್ಷಿಗಳನ್ನು ಆತನ ಮೆಹೆರಬಾನಗಿಯಿಂದಲೇ ನಾವು ತಕ್ಕೊಂಡು ಬಂದೆವು. ಆ ಕಾಲಕ್ಕೆ ಆತನ ಮುಖದ ಮೇಲೆ ಪಶ್ಚಾತ್ತಾಪದ ಯಾವ ಚಿಹ್ನವೂ ಇರಲಿಲ್ಲ; ಹಾಗು ಈ ದಿನ ನೋಡುತ್ತಿರಲಿಕ್ಕೆ ಆತನು ಪಶ್ಚಾತ್ತಾಪದಿಂದ ತೀರ ಹುರುಪಳಿಸಿ ಹೋಗಿದ್ದಂತೆ ಕಾಣುತ್ತಾನಲ್ಲ! ಇದು ಹೇಗಾಯಿತು?"

"ದಿಟವಾಗಿ ಹೇಳಬೇಕಾದರೆ, ನನಗೂ ಆ ಕಾರಣವು ತಿಳಿಯಲೊಲ್ಲದು; ಮತ್ತು ಅದು ತಿಳಿಯುವವರೆಗೂ ಅದು ತಿಳಿದೇ ಇದೆ, ಎಂದು ನಾನು ಆಭಾಸ ತೋರಲೇಬೇಕು; ಹಾಗು ನಾನು ಅದರಂತೆ ತೋರಿಸುವವನೇ. ಉನ್ಮತ್ತತೆಗೆ ಉಪದೇಶದಿಂದ ಪ್ರಯೋಜನವಾಗದೆ, ದುಃಖವೊಂದೇ ಅದಕ್ಕೆ ನಿಜವಾದ ಉತಾರದ ಔಷಧವಾಗಿರುತ್ತದೆಂಬದನ್ನು ನೀನು ಚೆನ್ನಾಗಿ ಲಕ್ಷ್ಯದಲ್ಲಿಡು. ಆದ್ದರಿಂದ ಕಳೆದ ಒಂದೆರಡು ದಿನಗಳಲ್ಲಿ ಆ ಯುವಕನಿಗೆ ಯಾವುದೊಂದು ತೀವ್ರ ದುಃಖವಾಗುವಂತಹ ಕಾರಣವುಂಟಾಗಿರಲಿಕ್ಕೆಬೇಕು. ಆತನಿಗೆ ಮನೆಮಾರಿನೊಳಗಿನ ಯಾವ ದುಃಖವೂ ಉಂಟಾಗಿರುವಂತೆ ಇಂದು ಇಲ್ಲಿಗೆ ಬಂದಿದ್ದ ಅವನ ತಂದೆ-ತಾಯಿಗಳ ಮಾತಿನಮೇಲಿಂದ ಕಂಡುಬರಲಿಲ್ಲ; ಮತ್ತು ನನ್ನ ತರ್ಕವು ನಿಜವಾಗಿದ್ದರೆ, ಅವನ ಆ ಪಶ್ಚಾತ್ತಾಪದ ಕಾರಣವು ಆತನ ತಂದೆ ತಾಯಿಗಳಿಗೆ ಇದುವರೆಗೂ ತಿಳಿದಿರುವುದಿಲ್ಲ; ಮತ್ತು ಅದನ್ನು ಕೇಳಿ ತಿಳಿದುಕೊಳ್ಳಲಿಕ್ಕೆ ಅವರಿಗೆ ಸಾಕಷ್ಟು ಅವಕಾಶವೂ ದೊರತಿರುವುದಿಲ್ಲ.

ಅವರು ಕೇವಲ ಆತನ ಶೋಧಕ್ಕಾಗಿಯೂ ಅವನನ್ನು ಮರಳಿ ಕರೆದೊಯ್ಯು ಲಿಕ್ಕೆಂದೂ ಬಂದವರು; ಹಾಗು ಅವರು ನನ್ನನ್ನು ಈಗ ತಮ್ಮ ಮನೆಗೆ ಕರೆ ಯುತ್ತಿರುವುದಾದರೂ ಕೇವಲ ಆತನ ಇಚ್ಛೆಯುಸಲುವಾಗಿಯೇ. ನಾನು ಆ ಬೇಟೆಯ ಸ್ಥಳದಿಂದ ಹೊರಡುವಾಗ ಒಂದು ಮುದ್ದೆಮಾತನ್ನು ಸುಮ್ಮನೆ ಹರಳು ಚಲ್ಲುವಂತೆ ಮಾತಾಡಿದ್ದೆನು. ಒಂದುವೇಳೆ ಅದರ ಅನುಸಂಧಾನ ದಿಂದಲೇ ಅವನಿಗೆ ಈ ಪಶ್ಚಾತ್ತಾಪವಾಗಿರಬೇಕು.''

''ಅದಾವ ಮಾತಪ್ಪಾ?''

''ನಾನು ಆತನಿಗೆ ನಿಕ್ಷುಣ್ಣವಾಗಿ ಹೇಳಿರಲಿಲ್ಲವೇ, 'ಈ ದಿನ ಮತ್ತು ಈ ವೇಳೆಗಳನ್ನು ನೀನು ಚನ್ನಾಗಿ ಲಕ್ಷ್ಯದಲ್ಲಿಡೆ'ಂದು. ಆ ಕಾಲಕ್ಕೆ ಆತನು ಆ ನನ್ನ ಮುದ್ದೆ ಮಾತಿನ ಬೆದರಿಕೆಯನ್ನು ಉಪಹಾಸಗೆಯ್ದನೆಂಬದು ನಿನಗೆ ಸ್ಮರಿಸುವುದಿಲ್ಲವೇ?''

''ಸ್ಮರಿಸದೇನು? ಚೆನ್ನಾಗಿ ನೆನಪಿದೆ.''

''ಆದರೆ ಕರ್ಮಧರ್ಮ ಸಂಯೋಗದಿಂದ ಅದೇ ದಿನ ಮತ್ತು ಅದೇ ವೇಳೆಗೆ ಆತನಿಗೆ ದುಃಖವುಂಟಾಗುವ ಸಂಗತಿಯು ಎಲ್ಲಿಯಾದರೂ ಏನಾ ದರೂ ಘಟಿಸಿರಬಹುದು; ಮತ್ತು ಹಾಗಾಯಿತೆಂದರೆ, ಆ ಮೇಲೆ ಸಾದಾ ಯೋಗಾಯೋಗದಿಂದಲೂ ಮನುಷ್ಯನಿಗೆ ಈಶ್ವರೀಸೂತ್ರ ಇಲ್ಲವೆ ಸಂಕಲ್ಪ ಗಳು ಕಾಣಹತ್ತುತ್ತವೆ.''

''ಇಂಥ ಯೋಗಾಯೋಗವೆಂದರೆ ಕಾಗೆ ಕೂಡ್ರಲಿಕ್ಕೂ ಟೊಂಗೆ ಮುರಿಯಲಿಕ್ಕೂ ಗಂಟುಬಿದ್ದಂತೆ! ಆದರೆ ಆ ಟೊಂಗೆಯನ್ನು ಆ ಕಾಗೆಯೇ ಮುರಿಯಿತೆಂದು ಸೂಜ್ಞರು ತಿಳಿಯುವದಿಲ್ಲವಲ್ಲ.''

''ಸರಿಯಾಗಿ ಹೇಳಿದೆ. ಬುದ್ಧಿಯ ಮೇಲೆ ನಿಷ್ಠೆ ಇಡುವ ಜನರು ಟೊಂಗೆಯ ಮೇಲೆ ಕೂಡ್ರುವ ಕಾಗೆಯಂತಿರುತ್ತಾರೆ. ಟೊಂಗೆ ಮುರಿದರೆ ಅದರ ಕಡೆಗೆ ಲಕ್ಷ್ಯಗೊಡದೆ, ಆ ಕಾಗೆಯು ಅಲ್ಲಿಂದೆದ್ದು ಬೇರೆ ಟೊಂಗೆಗೆ ಹೋಗಿ ಕೂಡ್ರುತ್ತದೆ; ಆದರೆ ಭಾವನಾವಶ ಮತ್ತು ಶ್ರದ್ಧಾಳುಗಳಾದ ಜನರು ಆ ಟೊಂಗೆಗೆ ಅಂಟಿಕೊಂಡಿದ್ದ ಫಲಗಳಂತಿರುತ್ತಾರೆ. ಆದರಿಂದ ಟೊಂಗೆ ಮುರಿದ ಕೂಡಲೆ ಆದರೊಡನೆ ಆ ಫಲಗಳೂ ಕೆಳಗೆ ಬಿದ್ದು ನಾಶಹೊಂದುತ್ತವೆ. ಎಲ್ಲ ಬೈರಾಗಿ-ಬುವಾಜಿಗಳ ರೀತಿ-ನಡವಳಿಗಳನ್ನು ನೀನು ಕಂಡೇ ಕಂಡಿರ ಬಹುದು. ಕೊಡಗೈಯವನು ಭೆಟ್ಟಿಯಾದರೆ ಅವರು ಆತನಿಗೆ ಬೇಕಾದಂತಹ ಆಶೀರ್ವಾದ ಕೊಡಹತ್ತುವರು; ಮತ್ತು ಯಾವನೊಬ್ಬ ಕೊಡದವನು ಗಂಟು ಬಿದ್ದರೆ, ಅವನಿಗೆ ಬೇಕಾದಂತಹ ಶಾಪಕೊಡುವರು. ಅವುಗಳಲ್ಲಿಯ ಯಾವ

ಆಶೀರ್ವಾದ ಇಲ್ಲವೆ ಶಾಪಗಳು ದಿಟ ಇಲ್ಲವೆ ಸಟಿಯಾದವೆಂದು ತಿಳಕೊಳ್ಳಲಿಕ್ಕೆ ಯಾವ ಮಗನು ಮರಳಿ ಬರುವನು? ಅಥವಾ ಬೇಕಂತ ಹೇಳಲಿಕ್ಕೆ ಯಾರು ಬರುವರು? ಆಶೀರ್ವಾದ ಇಲ್ಲವೆ ಶಾಪ ಕೊಡುವಾಗ ಆವಿರ್ಭಾವ, ಆವೇಶಗಳು ಮಾತ್ರ ದೇವರು ಗುಪ್ತರೂಪದಿಂದ ಬಂದು, ಭಾವೀಘಟನೆಯ ಅಂತರ್ಜ್ಞಾನವನ್ನು ತನಗೆ ಕೊಟ್ಟು ಇಲ್ಲವೆ ಭವಿತವ್ಯದ ಕೀಲಿಕೈಗಳನ್ನು ತನ್ನ ಟೊಂಕಕ್ಕೆ ಸಿಗಸಿಯೇ ಆ ಬಡವನು ಹೋದನಂತಿರಬೇಕು.”

“ಇರಲಿ. ನಮಗಿನ್ನು ಕೆಲ ದಿನಗಳು ಸುಖದವೂ ಅಂಜಿಕೆಯಿಲ್ಲದ ಅಜ್ಞಾತವಾಸದವೂ ಲಭಿಸುವವು. ಕಳೆದ ಎರಡು ವರ್ಷ ನಾವು ಮೀಸೆ ಗಡ್ಡ ಜಟೆಗಳನ್ನು ಬೆಳೆಸಿ ಪೋಲೀಸರಿಗೆ ಮಂಕುಬೂದಿಹಚ್ಚಿ ಸಂಚರಿಸುತ್ತಿದ್ದೆವು. ಈಗ ಅವರು ನಮ್ಮ ಊಸಾಬರಿ ಬಿಟ್ಟುಬಿಟ್ಟಿರಬಹುದೆಂದು ನನಗನಿಸುತ್ತದೆ, ಅಂತೆಯೇ ಇತ್ತೀಚೆಗೆ ಅವರು ನಮ್ಮ ವಿಚಾರಣೆಗಾದರೂ ಬರುವದಿಲ್ಲ.”

“ಆದರೆ ಈ ದೊಡ್ಡ ಜನರ ಸಂಗತಿಯಿಂದ ನಮ್ಮ ಕೀರ್ತಿ ಹಬ್ಬೀತು. ಆ ಕೀರ್ತಿಯು ಮೂಲಕ ಜನಸಮೂಹವು ನಮ್ಮೆಡೆಗೆ ಹೆಚ್ಚಾಗಿ ಬರ-ಹೋಗ ಹತ್ತೀತು; ಮತ್ತು ಆ ಸಮೂಹದೊಳಗಿಂದಲೇ ಯಾವನೊಬ್ಬನು ನಮ್ಮನ್ನು ಗುರ್ತಿಸಲಿಕ್ಕೆಂದು ಹೇಗೆ ಹೇಳಬಂದಿತು?”

“ನೀನು ಅನ್ನುವುದರಲ್ಲಿಯೂ ಕೊಂಚ ತಥ್ಯಾಂಶವಿದೆ. ದೇವರ ನ್ಯಾಯ ನಿರ್ಣಯದ ಹವಾಲಿಯನ್ನು ನಾನು ಜನರಿಗೆ ತೋರಿಸುತ್ತಿರುತ್ತೇನೆ; ಆದರೆ ಸ್ವಂತ ನನಗೆ ಆ ನ್ಯಾಯನಿರ್ಣಯದ ಅಂಜಿಕೆಯು ಎಂದೂ ಅನಿಸಿರುವುದಿಲ್ಲ. ಇನ್ನು ನನ್ನ ವಾಣಿಗೆ ಕಾಕತಾಲೀಯ ನ್ಯಾಯದಂತೇಕೆ ಯಶ ದೊರೆಯಬೇಕೋ ತಿಳಿಯದು!”

ಇಷ್ಟು ಸಂಭಾಷಣವಾದ ಬಳಿಕ ಅವರಿಬ್ಬರೂ ಮರಳಿ ಆ ದೇವಸ್ಥಾನಕ್ಕೆ ಬಂದರು. ಅಷ್ಟರೊಳಗೆ ಬೆಳಗ್ಗೆ ಬಂದಿದ್ದ ಆ ಗೃಹಸ್ಥನು ಆ ಸತ್ತ ಕಪೋತ ಪಕ್ಷಿಯ ಮೃತ ಮಾಂಸವನ್ನೆಲ್ಲ ತೆಗೆಸಿ ಅದರಲ್ಲಿ ಹುಲ್ಲು ತುಂಬಿಸಿ ಸಜ್ಜುಗೊಳಿಸಿ ತಂದಿರಿಸಿದ್ದನು. ಅದರ ಕಡೆಗೆ ಕೈಮಾಡಿ ಗುರುಜೀ:—

“ಇಗೋ, ಈ ಬೇತು ಸಜ್ಜಾಯಿತು. ಯಾವ ಹಿಂಸೆಯೊಳಗಿಂದ ಈ ಪ್ರಕರ್ಣವೆದ್ದಿತೋ, ಅದರ ಹಲಗೆಯನ್ನು ಆಗಾಗ್ಗೆ ಬಡೆದು, ನನ್ನ ಅಹಿಂಸಾ ಪ್ರತಿಪಾದಿಸಲಿಕ್ಕೆ ಬಲವನ್ನುಂಟು ಮಾಡಲು ಈ ಸಾಧನವು ಹೆಚ್ಚು ಉಪಯುಕ್ತವಾದೀತು. ಕೈಯೊಳಗೆ ಚಬಕವಿರುವವರೆಗೆ ಕುದುರೆ ಇಲ್ಲವೆ ಹುಲಿ, ಸಿಂಹ ಮುಂತಾದ ಕ್ರೂರ ಪ್ರಾಣಿಗಳೂ ಕೂಡ ಹೇಗೆ ಸರ್ಕಸ್ಸಿನವನ ಅಧೀನದಲ್ಲಿರುವವೋ, ಅಥವಾ ಕೈಯೊಳಗೆ ಮಂತ್ರಪೂತವಾದ ಬೆತ್ತವಿರುವ ವರೆಗೆ

ಭೂತ-ಪಿಶಾಚಿಗಳು ಹೇಗೆ ಮಾಂತ್ರಿಕನ ಸ್ವಾಧೀನದಲ್ಲಿರುವವೋ. ಅದರಂತೆ ಈ ಮೃತಪಕ್ಷಿಯು ಎಲ್ಲಿಯವರೆಗೆ ನನ್ನ ಆಸನದ ಎದುರಿಗೆ ತೂಗಗಟ್ಟಲ್ಪಟ್ಟಿರುವದೋ, ಅದುವರೆಗೆ ಈ ತರುಣ ಜಮೀನದಾರನು ನನ್ನ ವಶದಲ್ಲಿರತಕ್ಕವನೇ!"

"ಅಥವಾ ಆತನಿಗೆ ಎಲ್ಲಿಯವರೆಗೆ ಬೇರೆ ಕಾರಣಗಳಿಂದ ತನ್ನ ಮೂರ್ಖತನದ ಪಶ್ಚಾತ್ತಾಪವಾಗುವದಿಲ್ಲವೋ, ದೇವರ ಮನೆಯ ನ್ಯಾಯನಿರ್ಣಯವನ್ನು ಮನಗಾಣಿಸುವ ಹಿಂಸಾಪರಾಧದ ದುಃಖವನ್ನು ಆತನು ಮರೆಯುವನೋ ಅದುವರೆಗೆಂದೆನ್ನಲೂ ಬಹುದು."

"ಅಹುದು. ನೀನು ಬುದ್ಧಿವಂತಿಕೆಯ ನುಡಿಯೇ ನುಡಿದೆ; ಆದರೆ 'ಹಾಗಾಗುವ ಸಂಭವ ಕಡಿಮೆ' ಎಂದಿಷ್ಟೇ ಪರಿಶಿಷ್ಟವನ್ನು ನಾನದಕ್ಕೆ ಜೋಡಿಸುತ್ತೇನೆ."

ಮರುದಿನ ಬೆಳಗಾಗುವಷ್ಟರಲ್ಲಿ ಚಂದೂಲಾಲನು ಕುದುರೆಯ ಸಾರೋಟ ತಕ್ಕೊಂಡು ಭದ್ರೇಶ್ವರ ಮಂದಿರಕ್ಕೆ ಬಂದನು. ಅಷ್ಟರೊಳಗೆ ಮಹಾರಾಜರೂ ಅವರ ಶಿಷ್ಯನೂ ಹೊರಟು ಹೋಗಿದ್ದನ್ನು ಕಂಡು ಅವನು ಸಮಾಧಾನಗೊಂಡನು. ಅವರಿಬ್ಬರೂ ಹೊರಡುವ ಸಿದ್ಧತೆ ಮಾಡಿದರು; ಮತ್ತು ಗಾಡಿಯನ್ನೇರಿರೆಂದು ಚಂದುವು ಹೇಳುತ್ತಲೆ, ಗುರುಜೀ:—"ಇಲ್ಲ. ತಮ್ಮಾ, ನಾನು ವಾಹನವನ್ನೆಂದೂ ಹತ್ತುವದಿಲ್ಲ. ನಾನು ಎಲ್ಲ ಯಾತ್ರಾ ಪ್ರವಾಸವನ್ನು ಕಾಲಿನಿಂದ ನಡದೇ ಮಾಡುತ್ತೇನೆ. ನಿನ್ನ ಆಗ್ರಹಕ್ಕಾಗಿಯೂ ನನಗೆ ನನ್ನ ನೇಮವನ್ನು ಬಿಡಲಾಗುವದಿಲ್ಲ." ಗುರುವೇ ಕೂಡ್ರದಿದ್ದ ಮೇಲೆ ಶಿಷ್ಯನು ಕೂರುವನೆ? ಆತನ ಹುಮ್ಮಸವು ಮನದಲ್ಲೇ ಕರಗಿತು. ಮತ್ತು ಸನ್ಮಾನ್ಯ ಅತಿಥಿಗಳು ನಡೆದೇ ಬರುವರೆಂದ ಮೇಲೆ ಯಜಮಾನನೂ ನಡೆಯುವದು ಸಾಭಾವಿಕವೇ ಇದೆ. ತಾತ್ಪರ್ಯವೇನಂದರೆ, ಕುದುರೆಯು ಅಂದಿನ ಸುದೈವದಿಂದ ಮರಳಿ ಹೋಗುವಾಗ ಸಾರೋಟಿನಲ್ಲಿ ಹೊಸಬರಾರೂ ಕೂಡ್ರಲೇ ಇಲ್ಲ; ಇಷ್ಟೇ ಅಲ್ಲ, ಮೊದಲಿದ್ದ (ಚಂದೂ ಮತ್ತು ಕೋಚಮನ್ನ ಇವರ) ಭಾರವೂ ಕಡಿಮೆಯಾದದ್ದರಿಂದ ಅದು ಒಳ್ಳೇ ಡೌಲಿನಿಂದ ನಡೆಯಹತ್ತಿತು. ಕಾಲ್ನಡಿಗೆಯಿಂದ ನಡೆವ ಜನರೊಡನೆ ಬರಿದಾದ ರಥದ ಆ ಮೆರವಣಿಗೆಯನ್ನು ಜನರು ಕೌತುಕದಿಂದ ನೋಡಹತ್ತಿದ್ದರು. ಯಾಕಂದರೆ, ಸುಖದ ಸಾಧನವು ಸಮೀಪದಲ್ಲಿ ಸಿದ್ಧವಿದ್ದರೂ ಉಪಭೋಗದ ಉಪೇಕ್ಷೆಯಾದ ಬಳಿಕ ವೈರಾಗ್ಯದ ಬೇರೆ ಲಕ್ಷಣವದಾವುದು? ಈ ರೀತಿಯಾಗಿ ಆ ಬುವಾಮಹಾರಾಜರ ಆ ನಂದಭುವನ ಪ್ರವೇಶದಿಂದಲೇ ಅವರ ವೈರಾಗ್ಯದ ಕೀರ್ತಿಗೆ ಪ್ರಾರಂಭವಾಯಿತು.

ಆ ವಿರಾಗೀ ಅತಿಥಿಯ ಉಳಕೊಳ್ಳುವ ವ್ಯವಸ್ಥೆಯು ನಂದಭುವನದ ಅತಿಥಿಗೃಹದಲ್ಲಿ ಮಾಡಲಾಗಿತ್ತು. ತೋಟದೊಳಗಿನ ಮಾಸಾಹೇಬರದೊಂದು ಖಾಸ ದೇವಮಂದಿರವನ್ನು ಚಂದುವು ಅದಕ್ಕಾಗಿ ಕೇಳಿಕೊಂಡಿದ್ದನು; ಆದರೆ ಅವರು ಅದನ್ನು ಕೊಡುವುದಿಲ್ಲೆಂದು ಕಟ್ಟುನಿಟ್ಟಾಗಿ ತಿಳಿಸಿದರು. ಅತಿಥಿಗೃಹದೊಳಗಿನ ಯುರೋಪೀಯ-ಪದ್ಧತಿಯ ಸಾಮಾನ ಸಲಕರಣೆಗಳನ್ನೆಲ್ಲ ತೆಗೆಯಿಸಿ, ಅಲ್ಲಿ ಮುನ್ನಿನ ರಾತ್ರಿಯೇ ದೇವಮಂದಿರಕ್ಕೆ ತಕ್ಕಂತಹ ಸಾಮಾನುಗಳನ್ನು ಮಂಡಿಸಿ ಸಿದ್ಧಗೊಳಿಸಲಾಗಿತ್ತು; ಮತ್ತು ಅದರ ತೋರಮುಖಕ್ಕೆ ಹಾಗು ಇನ್ನಿತರ ಪಾರ್ಶ್ವಗಳಿಗೆ ಆಯತಕಾಲಕ್ಕೆ ತೆರೆದು ತಂದ ಲತಾಪಲ್ಲವಗಳ ಗುಂಪುಗೂಡಿಸಲಾಗಿತ್ತು. ಆದರಿಂದ ಇದು ಅರಮನೆ ಅಥವಾ ಪ್ರಾಸಾದವಾಗಿರದೆ, ಪರ್ಣಕುಟೀರ ಇಲ್ಲವೆ ಪರ್ಣಶಾಲೆ ಎಂದು ಚೇಷ್ಟೆಗಾದರೂ ಹೇಳುವಂತಾಗಿತ್ತು!

---

### ರಾಜಿನಾಮೆ.

ಅತಿಥಿಗೃಹದಲ್ಲಿ ಮಹಾರಾಜರ ಪ್ರಾಣಪ್ರತಿಷ್ಠೆಯಾದಾಗ ಸರ ಗಂಗಾರಾಮ, ಮಾಸಾಹೇಬ ಮತ್ತು ಬಿಂಬಿ ಇತ್ಯಾದಿ ಪರಿವಾರದವರು ಚಂದೂನ ಜೊತೆಗಿದ್ದರು. ಚಂದೂನ ನಿಮಂತ್ರಣಕ್ಕೆಂದೇ ಅಲ್ಲ, ಆದರೆ ಈ ಅಕಲ್ಪಿತ ಘಟನೆಯು ಕೌತುಕವೆನಿಸಲು ಊರೊಳಗಿನ ಆತನ ಕೆಲ ಮಿತ್ರಸಂಗಡಿಗರೂ ಅಲ್ಲಿಗೆ ಬಂದಿದ್ದರು.

ಎಲ್ಲರೂ ನೆರೆದದ್ದನ್ನು ಕಂಡು ವೈರಾಗ್ಯದ ಆಕಸ್ಮಿಕ ಊರ್ಮಿಯುಂಟಾಗಲು, ಚಂದುವು ಎಲ್ಲರ ಸಮಕ್ಷದಲ್ಲಿ ಒಮ್ಮೆಲೆ ಜಾಹೀರ ಪಡಿಸಿದನೇನಂದರೆ "ಮಹಾರಾಜರನ್ನು ಇಂದಿನಿಂದ ನನ್ನ ಗುರುಗಳನ್ನಾಗ ಮಾಡಿರುವೆನು. ಈ ಅತಿಥಿಗೃಹವನ್ನು ಮಠವನ್ನಾಗಿ ಮಾಡಿ, ಇದರಲ್ಲಿ ನಾನು ಇವರ ಸ್ಥಾಪನೆ ಮಾಡಿರುತ್ತೇನೆ. ನಾನು ಇಂದಿನಿಂದ ಅಹಿಂಸಾವ್ರತವನ್ನು ಹಿಡಿದಿದ್ದು, ಅದರ ಗುರ್ತೆಂದು ಈ ನನ್ನ ಬೇಟೆಯ ತುಬಾಕಿಯುನ್ನು ಇವರ ಪಾದಗಳಿಗೆ ಅರ್ಪಿಸಿರುತ್ತೇನೆ. ಎದುರಿನಲ್ಲಿ ಹುಲ್ಲು ತುಂಬಿಟ್ಟಿರುವ ಹಕ್ಕಿಯನ್ನು ನಾನು ಎರಡು ದಿನಗಳ ಮುಂಚೆ ಈ ತುಬಾಕಿಯಿಂದ ಹೊಡೆದೆನು; ಮತ್ತು ಆ ನನ್ನ ಹಿಂಸಾಪರಾಧದ ನೆನಪು ನನಗೆ ಮೇಲಿಂದ ಮೇಲೆ ಆಗುವ ಸಲುವಾಗಿ ಅದನ್ನು ಎದುರಿಗೆ ಕಾಣಿಸುವ ಹಾಗೆ ತೂಗಗಟ್ಟಿರುತ್ತೇನೆ. ಪಂಜರದೊಳಗಿನ ಈ ಎರಡನೇ ಹಕ್ಕಿಯೂ ನನ್ನ ತುಬಾಕಿಯಿಂದ ಗಾಯುಗೊಂಡು ಬಿದ್ದಿತ್ತು; ಆದರೆ ಮಹಾರಾಜರ ಸವಾರಿಯು ಸಕಾಲಕ್ಕೆ ಅಲ್ಲಿಗೆ ಬಂದು ತಲುಪಿದ್ದರಿಂದ ಈ ಬಡ

ಹಕ್ಕಿಯು-ಜೀವದಿಂದುಳಿಯಿತು; ಹಾಗು ಇವರ ಕೃಪಾಪ್ರಸಾದವೆಂದು ಇದಕ್ಕೆ ನಾನು ದಿನಾಲು ನನ್ನ ಕೈಯಿಂದ ಕಾಳು ನೀರು ಹಾಕಿ ಸಂಬಾಳಿಸುವವನಿದ್ದೇನೆ. ಮಹಾರಾಜರು ಅಂತಜ್ಞಾನಿಗಳಿರುತ್ತಾರೆಂದು ನನ್ನ ಖಾತ್ರಿಯಾಗಿದ್ದು, ಇವರು ಈಶನಿಂದ ಕೊಡಿಸಿದ ಪ್ರಾಯಶ್ಚಿತ್ತವು ನನಗೆ ದೊರೆತಿದೆ. ಇವರು ಉಪದೇಶಿಸಿದ ಅಹಿಂಸೆಯು ನನಗೆ ಸಮ್ಮತವಾಗಿ ನಾನು ಅದರ ಸ್ವೀಕಾರ ಮಾಡಿರುತ್ತೇನೆ; ಆದರೆ ಇಲ್ಲಿ ನೆರೆದ ನೀವೆಲ್ಲರೂ ಅಹಿಂಸಾವ್ರತ ಹಿಡಿಯಬೇಕೆಂದು ನಾನು ನಿಮಗೆ ಬಲವಂತದಿಂದ ಸೂಚಿಸುತ್ತೇನೆ. ನನ್ನ ಆಯ್. ಸಿ. ಎಸ್. ಕೆಲಸದ ರಾಜಿನಾಮೆಯನ್ನು ನಾನು ಇಷ್ಟರಲ್ಲೇ ವಿಲಾಯತಿಗೆ ಕಳಿಸತಕ್ಕವನಿದ್ದೇನೆ; ಹಾಗು ಇಡೀ ಆಯುಷ್ಯವನ್ನು ಅವಿವಾಹಿತನಾಗಿದ್ದು, ಈಶ್ವರೋಪಾಸನೆಯಲ್ಲಿ ಕಾಲಕಳೆಯಬೇಕೆಂದು ನಾನು ನಿಶ್ಚಯಿಸಿದ್ದೇನೆ. ಈ ಎಲ್ಲ ಕೆಲಸಗಳಲ್ಲಿ ತಮ್ಮೆಲ್ಲರ ಸಹಾಯವನ್ನು ನಾನು ಯಾಚಿಸುತ್ತೇನೆ.''

ಈ ಘೋಷಣೆ ಮಾಡಿದವನೇ ಅವನು ಮಹಾರಾಜರ ಪಾದಗಳ ಮೇಲೆ ತಲೆಯಿರಿಸಿದನು ಮಹಾರಾಜರು ತಮ್ಮ ವರದಹಸ್ತವನ್ನು ಅತನ ತಲೆಯಮೇಲಿಟ್ಟರು. ಜಂಬುವಂತೂ ಗುರುಗಳಿಗೆ ದೀರ್ಘದಂಡವತ್ ನಮಸ್ಕಾರವ ಹಾಕಿ, ಕೆಲವೇಳೆಯವರೆಗೆ ನೆಲಬಿಟ್ಟು ಏಳಲೇ ಇಲ್ಲ! ಪಂಜರದೊಳಗಿನ ಕಪೋತಪಕ್ಷಿಯು ಆಗ ಹೊಸಹುರುಪಿನಿಂದ ಕುಣಿಯಹತ್ತಿತೆಂಬದು ಕೆಲವರಿಗೆ ಕಾಣಿಸಿತು. ಕೆಲಹೊತ್ತಿನ ಮೇಲೆ ಮಹಾರಾಜರು ಅವರಿಗಾಗಿ ನೇಮಿಸಿದ ರಿಝರ್ವ ಪ್ರದೇಶಕ್ಕೆ ಹೋದರು; ಮತ್ತು ಅವರು ಒಳಗಿನಿಂದ ಬಾಗಿಲವನ್ನಿಕ್ಕಿಕೊಂಡರು.

ಚಂದುವಿಗೆ ಗುರುಮಹಾರಾಜರ ದಿನಕ್ರಮವನ್ನು ತಿಳಕೊಳ್ಳಬೇಕಾಗಿತ್ತಾದ್ದರಿಂದ ಅವನು ಮೊದಲನೇ ದಿವಸ ಆ ಸ್ಥಳಬಿಟ್ಟು ಬೇರೆ ಕಡೆಗೆ ಹೆಚ್ಚಾಗಿ ಹೋಗಲಿಲ್ಲ. ಅವರಿಗೇನೇನು ಬೇಕೆಂಬ ಬಗ್ಗೆ ಆತನು ನಡು ನಡುವೆ ವಿಚಾರಿಸಿದನು. ಗುರುವೂ ಮತ್ತು ಶಿಷ್ಯನೂ ಬೇಡಿದ ವಸ್ತುಗಳನ್ನು ಸ್ವತಃ ತಾನೇ ತನ್ನ ಕೈಮುಟ್ಟಿ ತಂದುಕೊಟ್ಟನು. ಸಂಜೆಯ ಮುಂದೆ ಗುರುಮಹಾರಾಜರು ಏಕತಾರಿಯನ್ನು ಹಿಡಿದುಕೊಂಡು ಭಜನಕ್ಕಾರಂಭಿಸಿದರು. ಆಗ ಚಂದುವೂ ತೊಡೆಹಾಕಿಕೊಂಡು ಅವರೆದುರು ಕುಳಿತನು. ಅತಿಥಿಗೃಹದೊಳಗಿನ ಆ ಭಜನೆಯ ಅಪೂರ್ವತೆಯನ್ನು ಕಂಡು ಸರ ಗಂಗಾರಾಮರೂ ಮಾಸಾಹೇಬರೂ ಅಲ್ಲಿಗೆ ಬಂದು ಕುಳಿತಿದ್ದರು. ವಂದನೆ ಪ್ರಾರ್ಥನೆಗಳು ಮುಗಿದ ಬಳಿಕ ಮಹಾರಾಜರು ಒಂದು ಪದವನ್ನು ಅಂದರು. ಅದುವರೆಗೆ ಚಂದುವು ಸ್ವಂತಕ್ಕೆಂದು ಹೊಸದಾಗಿ ಕೊಂಡುತರಿಸಿದ್ದ ಏಕತಾರಿಯನ್ನು ಸುಮ್ಮನೆ

ಬಾರಿಸುತ್ತ ಕುಳಿತಿದ್ದನು; ಬಾಯಿಂದ ಹಾಡುತ್ತಿರಲಿಲ್ಲ; ಆದರೆ ಆ ಮೇಲೆ ಮಹಾರಾಜರು ಸಹಜವಾಗಿ ಸಂತ ಮೀರಾಬಾಯಿಯ ಒಂದು ಸುಪ್ರಸಿದ್ಧ ಪದವನ್ನನ್ನಲಿಕ್ಕೆ ಪ್ರಾರಂಭಿಸಿದರು. ಆದರ ಮೊದಲನೇ ಚರಣವು "ತುಮು ಬಿನ ಮೇರಿ ಕೌನ ಬಖರ ಲೇ, ಗೋವರ್ಧನ ಗಿರಿಧಾರೀ ।" ಎಂದಿದ್ದಿತು. ಈ ಚರಣದೊಳಗಿನ ಮೊದಲನೇ ವಿರಾಮವು 'ತುನುಬಿನ ಮೇರಿ' ಎಂಬಲ್ಲಿಗೆ ಆಗುತ್ತದೆ. ಆ ಎರಡು ಶಬ್ದಗಳದೇ ಪುನರುಚ್ಚಾರವಾಗುತ್ತದೆ. ಅದಾದ ಬಳಿಕ ಮತ್ತೊಂದು ಚಮತ್ಕಾರವು ಘಟಿಸಿತು. ಅದೇನಂದರೆ, ಆ ಚರಣ ವನ್ನು ತಕ್ಕೊಂಡು ಸ್ವತಃ ಚಂದೂಲಾಲನೂ ಹಾಡತೊಡಗಿದನು. 'ಮೇರೀ' ಎಂಬ ಶಬ್ದವನ್ನು ಆತನು ಹೆಚ್ಚು ಸ್ಪಷ್ಟವಾಗಿ ಉಚ್ಚರಿಸುತ್ತಿದ್ದನು. ಅದೇ ಶಬ್ದವನ್ನೇ ಪುನಃ ಪುನಃ ಅನ್ನುವನು. ಅದರಲ್ಲಿ ಆತನಿಗಾವ ವಿಶೇಷ ಆನಂದವು ಲಭಿಸುತ್ತಿತ್ತೋ ಅದಾರು ಬಲ್ಲರು? ಆದರೆ ಆ ಚರಣವನ್ನು ಮತ್ತೆ ಮತ್ತೆ ಅನ್ನುವ ಬಗ್ಗೆ ಮಹಾರಾಜರನ್ನು ಬಲವಂತಪಡಿಸುವವರೆಗೂ ಆತನ ಪ್ರವೃತ್ತಿಯಾಯಿತು. ಚಂದೂ ಭಜನಮಾಡಹತ್ತಿದ್ದನ್ನು ಕಂಡು ಅವನ ತಂದೆ-ತಾಯಿಗಳ ಆಶ್ಚರ್ಯದ ಪರಮಾವಧಿಯೇ ಆಯಿತು; ಮತ್ತು ಬಾಯಿಹರಿದಿದ್ದ ಆ ಚಮತ್ಕಾರದ ಚೀಲದೊಳಗಿಂದ ಮತ್ತೆ ಏನೇನು ಹೊರಬೀಳುವದೋ ಯಾರು ಬಲ್ಲರು ಎಂದೆನಿಸಿತವರಿಗೆ.

ನಡೆದ ಪ್ರಕಾರವೆಲ್ಲ ತುಬಾಕಿಯೊಳಗೆ ಜಡೆದು ತುಂಬಿದ್ದ ಗುಂಡು ಒಮ್ಮೆಲೆ ಹಾರಿದಂತಾಯಿತು. ಕೆಲವರ ದೃಷ್ಟಿಯಿಂದ ಅದು ಅಪಘಾತವೇ ಆದಂತಾದ್ದರಿಂದ ಹಾಗು ಅದರಲ್ಲಿ ಇತರರಾರಿಗೂ ಏನೂ ಮಾತಾಡುವ ಅವಕಾಶವಿರದ್ದರಿಂದ ಎಲ್ಲ ಜನರೂ ಕೆಲ ಹೊತ್ತು ನೆಲಕ್ಕೆ ಒರೆದು ಕುಳಿತವರಂತೆ ನಿಶ್ಚಲವಾಗಿ ನಿಂತುಬಿಟ್ಟರು; ಹಾಗು ಮೆಲ್ಲ ಮೆಲ್ಲನೆ ಹಗುರ ಹೆಜ್ಜೆಗಳಿಂದ ಹೊರಟು ಹೋದರು. ಸರ ಸಾಹೇಬ ಮತ್ತು ಮಾಸಾಹೇಬರಿಗೆ ಗೊತ್ತಿದ್ದದ್ದೇನಂದರೆ:—ಚಂದೂನಿಗೆ ಒಬ್ಬ ಬೈರಾಗಿಯ ಬಗ್ಗೆ ಕೌತುಕವೆನಿಸಿದ್ದರಿಂದ ಅವನನ್ನು ಕರೆತಂದು ತನ್ನ ಮನೆಯಲ್ಲಿಟ್ಟುಕೊಳ್ಳಬೇಕೆಂಬ ಇಚ್ಛೆಯಾಗಿದೆಯೆಂದೂ ಮತ್ತು ಅದರಲ್ಲಿ ವಿಶೇಷ ಅನುಚಿತವೇನೂ ಇಲ್ಲೆಂದೂ ತಿಳಿದು, ಅವರು ಆತನ ಅಂಬೋಣವನ್ನು ಮನ್ನಿಸಿದರು; ಆದರೆ ಈಗ ನೋಡುತ್ತಿರಲಿಕ್ಕೆ ಇದು ವಿಪರೀತವೇ ಆಗಿಬಿಟ್ಟಿತು!!

ಸಾಹೇಬ ಜನರಿಗಾಗಿ ರಿಝರ್ವ ಆಗಿದ್ದ ಆ ಅತಿಥಿಗೃಹದಲ್ಲಿ ಚಂದುವು ಆ ಬೈರಾಗಿಗಳನ್ನು ತಂದು ಸ್ಥಾಪಿಸಿದ್ದನ್ನು ಕಂಡು ಸರ ಗಂಗಾರಾಮರಿಗೆ ಹೇಗೆ ಹೇಗೋ ಅನಿಸಿತು; ಆದರೆ ಎಲ್ಲರೆದುರು ಚಂದುವು ಆ ಯಾವ ಅಕಲ್ಪಿತ

ಘೋಷಣೆ ಮಾಡಿದನೋ, ಆದರ ಮರ್ಮವು ಅವರಿಗೆ ಕೊಂಚವೂ ತಿಳಿಯದ್ದರಿಂದ ಅವರು ಸ್ತಂಭಿತರಾದರು. ಅಂದಿನ ಬೇಟೆಯ ಪ್ರಸಂಗದ ವೃತ್ತಾಂತವು ಅವರ ಕಿವಿಗೆ ಮುಟ್ಟಿತ್ತು ಅದರಿಂದ ಅನಿಸಿತೇನಂದರೆ, ತುಬಾಕಿಯಿಂದ ಸತ್ತುಬಿದ್ದ ಪಕ್ಷಿಯನ್ನು ಕಂಡು, ವಿಶೇಷವಾಗಿ ಬೈರಾಗಿಯ ಉಪದೇಶದಿಂದ ಚಂದೂನ ದಯಾಬುದ್ಧಿಯು ಜಾಗೃತವಾಗಿರಬೇಕು. ಯಾಕಂದರೆ, ಅಂಥ ಸಂಗತಿಗಳು ಕೆಲಕೆಲವು ಪ್ರಸಂಗಗಳಲ್ಲಿ ಘಟಿಸುತ್ತಿರುತ್ತವೆ; ಆದರೆ ಬೇಟೆಯನ್ನು ಬಿಟ್ಟುಬಿಡುವಾಗ ಅದರೊಡನೆ ಆಯ್. ಸಿ. ಎಸ್ಸಿಗೆ ರಾಜೀನಾಮೆ ಕೊಡುವುದಲ್ಲದೆ, ಉಳಿದ ಆಯುಷ್ಯವನ್ನೆಲ್ಲ ಅವಿವಾಹಿತನಾಗಿ ಕಳೆಯುವ ನಿಶ್ಚಯ! ಈ ಗೂಢವು ಅವರಿಗೆ ಹೇಗೆ ಬಿಚ್ಚಬೇಕು?

ಮಗನ ಆ ಘೋಷಣೆಯ ಮೇಲಿಂದ ಅವರು ತರ್ಕಿಸಿದ್ದೇನಂದರೆ, ಈತನ ಬುದ್ಧಿಗೆ ಏನೋ ಬಹು ದೊಡ್ಡ ರೋಗವಾಗಿರುವದರಿಂದ ಸದ್ಯಕ್ಕೆ ಅದರ ಬಗ್ಗೆ ಬರಿಯ ವಿಚಾರಣೆ ಕೂಡ ಮಾಡುವದು ವಿಹಿತವಲ್ಲ; ಮತ್ತು ಮಾಡುವದೇ ಆದರೆ, ಹೇಗೆ ಹೇಗೆ ಮಾಡಬೇಕೆಂಬದೂ ಅವರಿಗೆ ತಿಳಿಯಲೊಲ್ಲದು; ಯಾಕಂದರೆ ತಮ್ಮ ತಪ್ಪಿನಿಂದ ಅದು ಬೇರೆ ಕಡೆಯಿಂದಲೇ ಪ್ರಾರಂಭವಾದರೆ, ಮತ್ತೇನಾದರೂ ವಿಪರೀತವೇ ಆದೀತು.

ಒಮ್ಮೆಲೆ ಬೆಂಕಿಹತ್ತಿದಾಗ ಅದನ್ನು ಯಾವ ಕಡೆಯಿಂದ ನೊಂದಿಸಹತ್ತಬೇಕೆಂಬ ಬಗ್ಗೆ ತಿಳಿಯದೆ ಮನುಷ್ಯನು ಹೇಗೆ ಗಾಬರಿಗೊಳ್ಳುವನೋ, ಅದರಂತೆಯೇ ಸರ ಸಾಹೇಬರಿಗೂ ಮಾಸಾಹೇಬರಿಗೂ ಆಯಿತು. ಈ ಲೋಕದಲ್ಲಿ ಅವರ ಸರ್ವಸ್ವವೆಂದರೆ ಇದ್ದೊಬ್ಬ ಮಗನು! ಅದೆಷ್ಟೋ ಭಾವೀ ಸುಖಸ್ವಪ್ನಗಳನ್ನು ಆತನ ನೆಲಗಟ್ಟಿನಿಂದಲೇ ರಚಿಸಲಾಗಿದ್ದವು! ಮಗನು ತಮ್ಮವನೇನೋ ನಿಜ; ಆದರೂ ಆತನ ಜೀವನ ನೌಕೆಯಲ್ಲಿ ತಾವು ಕೈಕಾಲುಕಟ್ಟಿಕೊಂಡು ಬಿದ್ದಂಥ ವಿಪರೀತಸ್ಥಿತಿಯು ಅವರಿಗುಂಟಾಗಿದ್ದು, ಆ ನಾವಿನ ಕೀಲವು ಆತನ ಕೈಯಲ್ಲಿದೆ; ಮತ್ತು ಆತನು ಅದನ್ನು ವಿರುದ್ಧ ದಿಸೆಗೆ ಹೊರಳಿಸುತ್ತಿರುವುದು ಸ್ಪಷ್ಟವಾಗಿ ಕಾಣಿಸುತ್ತಿದ್ದರೂ, ಪ್ರೇಮದ ಸಲುವಾಗಿ ಹಾಗೆನ್ನುವ ಕಳವು! ಯಾವುದೊಂದು ಭಯಂಕರ ಸ್ಫೋಟಕ ಬಾಂಬುಗುಂಡು ಇಲ್ಲವೆ ನಾಗರಹಾವು ಇವುಗಳನ್ನು ಯಾರಾದರೂ ಮನೆಯಲ್ಲಿ ತಂದಿಟ್ಟಂತೆ ಕಂಡರೂ, ಅವುಗಳಿಗೆ ಯಾವ ಕಡೆಯಿಂದ ಮುಟ್ಟಬೇಕೆಂಬದು ತಿಳಿಯದಿರುವಂತೆ ಪಾಪ! ಆ ಬಡ ತಂದೆ-ತಾಯಿಗಳ ಸ್ಥಿತಿಯಾಯಿತು.

ಸರ ಗಂಗಾರಾಮರ ಮನಸ್ಸಿನ ಮೇಲೆ ಮೊದಲನೇ ಹೊಡೆತಕ್ಕೇ ಒಳ್ಳೇ ಪರಿಣಾಮವಾಯಿತು; ಆದರೆ ತಮ್ಮ ಮಗನೇ ತಮ್ಮ ದೈವತವೆಂದು

ತಿಳಿಯುವವರು ಅವರಾಗಿದ್ದರು. ಅದರಿಂದ ಸ್ವತಃ ಆ ಮಗನು ಯಾವ ಗುರುವಿನ ಭಜನೆಗೆ ಹತ್ತಿದನೋ, ಅವನ ಭಜನೆಗೆ ಅವರು ಹತ್ತುವದೂ ಕ್ರಮ ಪ್ರಾಪ್ತವೇ ಆಗಿರಲಿಲ್ಲವೇ? ಆಯಿತು. ಅದರಂತೆಯೇ ಅವರೀಗ ನಮ್ರ ಭಾವದಿಂದ ಗುರುಮಹಾರಾಜರ ಚರಣಗಳ ಮೇಲೆ ಮಸ್ತಕವಿರಿಸಹತ್ತಿದರು. ಗುರುವಿನ ಹತ್ತರವೇ ಇರಿಸಲ್ಪಟ್ಟಿದ್ದ ಪರಟಿಯೊಳಗಿನ ಅಂಗಾರವನ್ನು ಹಣೆಗೆ ಹಚ್ಚಿಕೊಳ್ಳಲಾರಂಭಿಸಿದರು. ಗಂಜಿಯ ಬಟ್ಟೆಗಳಿಗಿಂತ ಮಾಸಿದ ಅರಿವೆಗಳೇ ಅವರಿಗೀಗ ಹೆಚ್ಚು ರುಚಿಸಹತ್ತಿದವು. ಪೊಳ್ಳು ವೇದಾಂತದ ಆಧ್ಯಾತ್ಮಿಕ ಹರಟೆಗಳು ಅವರಿಗೆ ಸೇರಹತ್ತಿದವು. ಸಾಹೇಬ ಜನರ ಕಡೆಗೆ ಅವರ ಎಡತಾಕುವಿಕೆಯು ಕಡಿಮೆಯಾಯಿತು. ಅವರ ಖಾಸ ವ್ಯಸನಗಳು ತೀರ ಲುಪ್ತವಾದವೆಂತಲ್ಲ; ಆದರೂ ಅವುಗಳಿಗೊಂದಿಷ್ಟು ತಡೆಯುಂಟಾಯಿತು; ಮತ್ತು ಚಂದೂನಷ್ಟು ಅವರ ಕಂಠವು ಮಧುರವಾಗಿರದಿದ್ದರೂ, ತಮ್ಮ ಅಸಡ್ಡಾಳ ಗಾಯನದ ಲಜ್ಜೆಯೆನಿಸಿದೆ, ಅವರು ಚಂದೂನೊಡನೆ ಮಠದಲ್ಲಿ ಭಜನೆ ಮಾಡಹತ್ತಿದರು; ಆದರೆ 'ತುಮಬಿನ ಮೇರೀ ಕೌನ ಖಬರ ಲೇ' ಇದೊಂದೇ ಚರಣವು ತಂದೆ-ಮಕ್ಕಳ ಬಾಯಿಂದ ಹೊರಟಾಗ ಅಂತರ್ಜ್ಞಾನಿ, ಧೂರ್ತ ಮತ್ತು ಲಫಂಗನಾದ ಆ ದೇವರು ಆ ದೃಶ್ಯವನ್ನು ಕಂಡು ಆಕಾಶದಲ್ಲಿ ನಗಹತ್ತಿರಬಹುದಲ್ಲವೇ? ದೈವವು ಪ್ರಾಣಿಮಾತ್ರರ ವಿಡಂಬನೆಯನ್ನು ಇದೇ ರೀತಿಯಿಂದ ಮಾಡಿ ಕ್ರೀಡಾ ಸುಖವನ್ನನುಭವಿಸುತ್ತದೆ.

ಆದರೆ ಎಲ್ಲಕ್ಕೂ ಚಮತ್ಕಾರವೆಂದರೆ, ಮಾಸಾಹೇಬರು ಸ್ತ್ರೀಜಾತಿಯವರಿದ್ದೂ ಆ ಸ್ಥಿತ್ಯಂತರಕ್ಕೆ ಬಲಿಬೀಳಲಿಲ್ಲ. ಚಂದೂನ ಬಗ್ಗೆ ಅವರಲ್ಲಿಯ ಪ್ರೇಮವು ಅವರ ಗಂಡನಿಗಿಂತ ಕಡಿಮೆಯಾಗಿರಲಿಲ್ಲ. ಕಡಿಮೆ ಏಕಿದ್ದೀತು? ಅಲ್ಲದೆ ಸ್ತ್ರೀಯರು ಹೆಚ್ಚು ಭಾವನಾಪ್ರಧಾನರೆಂದು ಭಾವನಾವಶರಿರುತ್ತಾರೆ. ಶ್ರದ್ಧಾಳುತ್ವದ ಲೋಕದೊಳಗಿನ ಎಲ್ಲ ಅಪಕೀರ್ತಿಯನ್ನು ಬಲ್ಲವರು ಸ್ತ್ರೀವರ್ಗದ ತಲೆಯ ಮೇಲೆಯೇ ಹೊರಸಿರುವರು! ಹೀಗಿದ್ದರೂ ಮಾಸಾಹೇಬರು ಮಾತ್ರ ಮನಸ್ಸಿನಿಂದ ಖಂಬೀರರಾಗುಳಿದಿದ್ದರು. ಆ ಬೈರಾಗಿಯನ್ನು ಮನೆಗೆ ತಂದು ಸ್ವಂತದ ಸಂಸಾರದ ಸತ್ಯಾನಾಶ ಮಾಡಿಕೊಂಡ ಬಗ್ಗೆ 'ಈ ಸಾಧುವಿನ ಕಾಲ್ಗುಣ ಚೆನ್ನಾಗಿಲ್ಲ, ಅವಲಕ್ಷಣದ್ದಿದೆ' ಎಂದು ಅವರ ಮನಸ್ಸೇ ಅವರಿಗೆ ಏಕೋಪ್ರಕಾರವಾಗಿ ಪುನಃಪುನಃ ಹೇಳಹತ್ತಿತ್ತು; ಮತ್ತು ಚಂದುವಿಗುಂಟಾದ ವೈರಾಗ್ಯವು ಪೂರ್ಣ ಸುಳ್ಳಿರದಿದ್ದರೂ ಕೆಲವೊಂದು ನಿಮಿತ್ತದಿಂವ ಬಂದುದಾದ್ದರಿಂದ, ಇದು ಶಾಶ್ವತವಲ್ಲ! ಎಂಬ ಬಗ್ಗೆ ಅವರು ಆಗಾಗ್ಗೆ ಮನಃಪೂರ್ವಕವಾಗಿ ಯೋಚಿಸಹತ್ತಿದರು; ಆದರೆ ತಮ್ಮ ನಿಜ ಅಭಿಪ್ರಾಯವು ವ್ಯಕ್ತವಾಗುವ ಹಾಗೆ ಅವರು

ಆಗ ಯಾರೊಡನೆಯೂ ಮಾತಾಡಲಿಲ್ಲ; ಅಥವಾ ಅವರು ಅಕಾಂಡತಾಂಡವ ವೆಸಗಲಿಲ್ಲ. ಅಳಲಿಲ್ಲ. ಕರೆಯಲಿಲ್ಲ. ಮಗನೊಡನೆ ಜಗಳ ಕಾದಲಿಲ್ಲ ಆತನಿಗೆ ಬಾಯಿಗೆ ಬಂದಹಾಗೆ ಬೈಯಲಿಲ್ಲ; ಆದರೆ ತಮ್ಮ ಗಂಡನೂ ಮಗನೂ ಕೂಡಿ ಏನು ನಡೆಸಿರುವರೋ ಅದು ಅವರದವರಿಗೇ ಇರಲಿ. ಅದರಲ್ಲಿ ನನ್ನ ಸಂಬಂಧ ವಿಲ್ಲವೆಂಬ ತಿಳುವಳಿಕೆಯನ್ನು ಮನಸ್ಸಿನಲ್ಲಿರಿಸಿ, ಅವರು ತಮ್ಮ ಆಚರಣವನ್ನಾ ದರೂ ಅದಕ್ಕೆ ತಕ್ಕಂತೆಯೇ ಇಟ್ಟಿದ್ದರು. ಚಂದೂನನ್ನು ಕರೆತರುವದಕ್ಕೆಂದು ಮಾಸಾಹೇಬರು ಭದ್ರೇಶ್ವರನ ಗುಡಿಗೆ ಹೋಗಿದ್ದರು ಅವರಿಗೆ ಆಗ ಆ ಬೈರಾಗಿ ಯ ದರ್ಶನವಾಯಿತು; ಹಾಗು ಅವರು ಅವನಿಗೆ ಸರ್ವಸಾಧಾರಣವಾಗಿ ನಮ ಸ್ಕರಿಸಿದ್ದರಷ್ಟೇ! ಆದರೆ ಚಂದುವು ತಮ್ಮ ಮನೆಯ ತೋಟದ ಅತಿಥಿಗೃಹದಲ್ಲಿ ಅವರನ್ನು ಕರೆತಂದಿಟ್ಟರೂ, ಅವರು ಯಾವಾಗಲೂ ಆ ಬೈರಾಗಿಯ ದರ್ಶನಕ್ಕೆ ಹೋಗಲಿಲ್ಲ. ಇನ್ನು ಅತಿಥಿಗಳಿಗೆ ಸಿಧಾ ಸಾಮಗ್ರಿ ಕೊಡಿಸುವುದು ಅವರ ಕರ್ತವ್ಯವೇ ಆಗಿತ್ತು; ಆದರೆ ಮನೆಯ ಆಳುಗಳಿಗೆ ಚಂದುವು ಏನು ಹೇಳು ವನೋ ಅದನ್ನು ಕೊಡುತ್ತಿರ್ರಿ-ಮಾಡುತ್ತಿರ್ರಿ, ಎಂಬದನ್ನೊಮ್ಮೆಯೇ ಹೇಳಿ, ಅವರು ಮುಕ್ತರಾಗಿದ್ದರು.

ಈ ಪರಿವರ್ತನದಿಂದ ಚಂದೂನ ಮನೆಯಲ್ಲಿ ಹೇಗೆ ಗೊಂದಲ ವೆದ್ದಿತ್ತೋ, ಅದರಂತೆಯೇ ಆದರೆ ಅದಕ್ಕಿಂತ ತುಸ ಕಡಿಮೆ ಗೊಂದಲವು ಬೇರೊಂದು ಮನೆಯಲ್ಲೂ ನಡೆದಿತ್ತು. ಆ ಮನೆಯೆಂದರೆ, ರಾಯಬಹಾ ದ್ದೂರ ಶಾಮಲಾಲರದು; ಯಾಕಂದರೆ, ಶರಯೂ ಮತ್ತು ಚಂದೂಲಾಲ ಇವರ ವಿವಾಹದ ಸಿದ್ಧತೆಯಲ್ಲಿ ತೊಡಗಿದ್ದ ಅವರ ಕೈಯು ಒಮ್ಮೆಲೆ ನಿರ್ಜೀವ ವಾಯಿತು ಎರಡೂ ಕುಟುಂಬಗಳ ಋಣಾನುಬಂಧದ ಮೂಲಕ ಶರಯೂಳ ಸಲುವಾಗಿ ಅವರು ಬೇರೆ ಸ್ಥಳ ನೋಡಿರಲಿಲ್ಲ; ಮತ್ತು ಚಂದೂನೊಡನಾದ ವಾಙ್ನಿಶ್ಚಯವನ್ನೇ ನಂಬಿ, ನಾಲ್ಕು ವರ್ಷಗಳ ವರೆಗೆ, ಅಂದರೆ ಆತನು ವಿಲಾ ಯತಿಯಿಂದ ಮರಳಿ ಬರುವವರೆಗೆ ಅವರು ಆಶೆಯಿಂದ ದಿನಗಳೆದಿದ್ದರು. ಅವನು ಮರಳಿ ಬಂದು, ಆಯ್. ಸಿ. ಎಸ್. ಪರೀಕ್ಷೆ ಪಾಸಾಗಿ, ಭಾವೀ ಬೀಗ- ಬೀಗಿತ್ತಿಯರಿಂದ ಲಗ್ನದ ಸಿದ್ಧತೆಯ ಸೂಚನೆ ಬಂದದ್ದರಿಂದ, ಆ ಹುಡುಗೆಯ ತಂದೆಗೆ ಎಷ್ಟು ಸಂತೋಷವಾಗಿದ್ದೀತು! ಆದರೆ ಈಗ ಅವರಿಗೆ ಚಂದೂನ ಆ ಘೋಷಣೆ ಕೇಳಿ ತಲೆಯ ಮೇಲೆ ಸಿಡಿಲೇ ಕಡಕೊಂಡು ಬಿದ್ದಂತಾಯಿತು! ಮತ್ತು ಅವರ ಮನೆಯ ಮೇಲೆ ಒಮ್ಮೆಲೆ ಔದಾಸೀನ್ಯದ ಛಾಯೆಯು ಬಿದ್ದಿತು.

ಆ ಊರ ಸಮಾಜದ ಮೇಲೆ ಆ ಸಂಗತಿಯಿಂದಾದ ಪರಿಣಾಮವು ಸುಖ ದುಃಖ ಸಂಬಂಧದ್ದಾಗಿರದೆ, ಕೌತುಕ ಇಲ್ಲವೆ ಚಿಕಿತ್ಸಾಜಾಗ್ರತಿಯದಾಗಿತ್ತು.

ಊರೊಳಗಿನ ಮುಖ್ಯ ಪ್ರತಿಷ್ಠಿತ ಕುಟುಂಬಗಳ ಭಾಗ್ಯವೇ ತಮ್ಮ ಭಾಗ್ಯವು, ಅವರ ಮಾನ-ಮನ್ನಣೆಗಳೇ ತಮ್ಮ ಮಾನ-ಮನ್ನಣೆಗಳು ಹೀಗೆಂದು ಪ್ರತಿಯೊಂದು ಸಮಂಜಸ ಗ್ರಾಮದವರೂ ತಿಳಿಯುವದುಂಟು; ಆದರೆ ಸರ ಗಂಗಾರಾಮರ ಮನೆಯಲ್ಲಿ ನಡೆದ ಪ್ರಕಾರಕ್ಕೆ ಸದ್ಭಾಗ್ಯವೆನಬೇಕೋ, ದುರ್ಭಾಗ್ಯವೆನಬೇಕೋ; ಮಾನವೆನಬೇಕೋ, ಅವಮಾನವೆನಬೇಕೋ ಇದರ ನಿರ್ಣಯವನ್ನು ಆ ಗ್ರಾಮಸ್ಥರು ಹೇಗೆ ಮಾಡುವರು? ಆದರೆ ಇದೀ ಘೋರಣವು ಮಾತ್ರ ಸ್ತುತಿಯ ಕಡೆಗೆ ಒಲೆದಿತ್ತೇ ಹೊರತು, ನಿಂದೆಯ ಕಡೆಗಲ್ಲ! 'ಪ್ರವೃತ್ತಿರೇಷಾ ಭೂತಾನಾಮ್ । ನಿವೃತ್ತಿಸ್ತು ಮಹಾಫಲಾ' ಎಂಬ ವಚನವು ಪ್ರಸಿದ್ಧವೇ ಇದೆ. ಚಂದೂಲಾಲನ ಯಾವ ಪ್ರವೃತ್ತಿಯು ಮೊದಲು ಕಂಡುಬಂದಿತೋ, ಅದೇ ಬೆಳೆದದ್ದನ್ನು ಕಂಡಿದ್ದರೆ, ಅವರಿಗೇನೂ ಅನಪೇಕ್ಷಿತವಾದದ್ದು ಕಂಡುಬರುತ್ತಿರಲಿಲ್ಲ; ಆದರೆ ಆತನ ಪ್ರವೃತ್ತಿಯ ರೂಪಾಂತರವು ತೀರ ಬೇರೆ ದಂಡೆಗೆ ಮುಟ್ಟಿ ನಿವೃತ್ತಿಯಲ್ಲಾಗಿತ್ತು; ಮತ್ತು ಅದೂ ಲೋಕವು ಯಾವುದಕ್ಕೆ ಬಹುಮಾನವೀಯುವದೋ, ಅಂಥ ಧಾರ್ಮಿಕ, ಆಧ್ಯಾತ್ಮಿಕದ ಕಡೆಗಾಯಿತು. ಅದರಿಂದ ಸ್ತುತಿಯಾಗುವದೇ ಸ್ವಾಭಾವಿಕವು. ಅಲ್ಲದೆ, ಚಂದೂನ ನೆವದಿಂದ ಒಬ್ಬ ನೂತನ ಸಾಧುವು ತಮ್ಮೂರಿಗೆ ದೊರೆತನೆಂಬ ಬಗ್ಗೆ ಅವರಿಗೆ ಮಹತ್ವವೂ ಅನಿಸಿತು.

ಎರಡು ದಿನಗಳು ಹಾಗೆಯೇ ಕಳೆದ ಮೇಲೆ ಚಂದವು ತನ್ನ ಕಪಾಟಿನೊಳಗಿನ ಬಹು ಶ್ರೇಷ್ಠ ಮದ್ಯದ ಸೀಸೆಗಳನ್ನೆಲ್ಲ ತೆಗೆದು ಜನರ ಸಮಕ್ಷಮ ತಿಪ್ಪೆಯಲ್ಲಿ ಸುರುವಿದನೆಂಬದು ಆತನ ತಾಯಿ-ತಂದೆಗೆ ತಿಳಿಯಿತು; ಮತ್ತು ದಿನಾಲು ಹಲವು ಸಾರೆ ಕಾಣಿಸುತ್ತಿದ್ದ ಅವನ ಬಾಯೊಳಗಿನ ಸಿಗರೇಟು ಈಗ ಒಮ್ಮೆಲೆ ಕಾಣದಾಯಿತು. ಈ ಸಂಗತಿಗಳಿಂದ ಸರ ಗಂಗಾರಾಮ ಹಾಗು ಮಾಸಾಹೇಬರ ಮನಸ್ಸಿನಲ್ಲಿ ತಮ್ಮ ಮಗನ ವಿಷಯದ ಪ್ರೇಮದೊಡನೆ ಒಂದು ಬಗೆಯ ಆದರಬುದ್ಧಿಯು ಹೊಸದಾಗಿ ಅಂಕುರಿಸಿತು. ಎರಡು ದಿನ ಹಾಗೆಯೇ ಸಾಗಗೊಟ್ಟು, ಮೂರನೇ ದಿನ ಆ ಮೂವರೂ ಬೆಳಗಿನ ಚಹಕ್ಕಾಗಿ ಏಕತ್ರಿತರಾದಾಗ ಸರ ಸಾಹೇಬರೇ ಮಾತಿಗೆ ಮೊದಲು ಪ್ರಾರಂಭಿಸಿದರು. ಅವರು ಅಂಜುತ್ತಂಜುತ್ತಲೆ:—"ಚಂದೂ, ಕಳೆದೆರಡು ದಿವಸ ನಾನು ನಿನಗೇನೂ ಕೇಳಿರಲಿಲ್ಲ; ಆದರೆ ಈಗ ಕೇಳಲೊ? ಆ ಬಗ್ಗೆ ನೀನು ಕೋಪಗೊಳ್ಳಲಿಕ್ಕಿಲ್ಲವಷ್ಟೇ?"

ತನ್ನ ಹಿರಿಯರ ಮನಸ್ಸಿಗೆ ಈ ಪರಿಸ್ಥಿತಿಯ ಗೊಂದಲವೇಕುಂಟಾಗಿದ್ದೀತೆಂಬಹು ಚಂದುವಿಗೆ ತಿಳಿಯಲಿಕ್ಕೇನು ಕಠಿಣವಿದ್ದಿತೇ? ಆತನ ಮನಸ್ಸಿ

ನಲ್ಲೂ ತನ್ನ ತಂದೆ-ತಾಯಿಗಳ ಬಗ್ಗೆ ಪ್ರೇಮವೇ ಇತ್ತು. ಅವರು ಸಿಟ್ಟಾಗದೆ ತನ್ನೊಡನೆ ಲಾಘವವೃತ್ತಿಯಿಂದಲೇ ನಡೆಯುತ್ತಿರುವದನ್ನು ಕಂಡು ಆತನಿಗೊಂದು ಪ್ರಕಾರದ ಕೃತಜ್ಞತೆಯೇ ಅನಿಸಿತು. ಆಗ ಅವನು:—"ಪಪಾ, ಮಾಸಾಹೇಬ! ನಿಮ್ಮ ಮನಸ್ಸಿಗೆ ನಾನು ಭಯಂಕರ ಆಘಾತವನ್ನುಂಟು ಮಾಡಿದೆನೆಂಬದು ನನಗೆ ತಿಳಿಯುತ್ತಿದೆ; ಆದರೆ ಈ ಬಗ್ಗೆ ನೀವು ನನ್ನನ್ನು ಕ್ಷಮಿಸಿರಿ; ಹಾಗು ಮನಬಿಚ್ಚಿ ಬೇಕಾದ್ದನ್ನು ಕೇಳಿರಿ!"

ಆಗ ಸರ ಗಂಗಾರಾಮರು:—"ತಮ್ಮಾ, ಈಗ ಯಾವ ಪರಿಣಾಮವು ಘಟಿಸಿತೋ, ಇದು ನಿನಗೆ ಒಮ್ಮೆಲೆ ಆ ಹಿಂಸೆಯು ವಿಷಾದವೆನಿಸಿತೆಂದೋ?"

"ಪಪಾ, ಹೌದು; ಆದರೆ ನನಗೆ ಬರಿಯ ಅಹಿಂಸೆಯೇ ಒಗ್ಗಿತೆಂತಲ್ಲ; ಆದರೆ ಲೋಕದಲ್ಲಿ ಅಂತರ್ಜ್ಞಾನವೆಂದು ಏನೋ ಇದೆ; ಮತ್ತು ಅದು ದೇವರು ಕೊಟ್ಟದ್ದೊಂದು ವಿಶೇಷ ಕಾಣಿಕೆಯಾಗಿದೆ, ಎಂಬದು ನನಗೆ ಮನಗಂಡಿದೆ"

"ಅದು ಹೇಗೆ ಮನಗಂಡಿತು? ಆ ಅಂತರ್ಜ್ಞಾನದ ಅನುಭವವು ನಿನಗೆಂತು ಬಂತು?"

"ಆ ಮಾತನ್ನು ಮಾತ್ರ ನಾನು ಹೇಳಲಿಚ್ಛಿಸುವದಿಲ್ಲ. ಅದಕ್ಕಾಗಿ ನೀವು ನನ್ನನ್ನು ಕ್ಷಮಿಸಬೇಕು. ಆ ನನ್ನ ರಹಸ್ಯವು ನನ್ನಮಟ್ಟಿಗೇ ಇದೆ."

"ಆದರೆ ದೇವರ ಆ ಅಂತರ್ಜ್ಞಾನದ ಶಕ್ತಿಯು ನಿಜವಿದೆಯೆಂದು ಕಂಡು ಬಂದದ್ದರಿಂದ ನೀನು ಆಯ್. ಸಿ. ಎಸ್ಸಿಗೆ ರಾಜಿನಾಮೆ ಕಳಿಸುವದಕ್ಕೇಕೆ ಪ್ರವೃತ್ತನಾಗಬೇಕು? ನಿನ್ನ ಹುಟ್ಟಿನಿಂದಲೇ ನೀನು ಆಯ್. ಸಿ. ಎಸ್. ಆಗಬೇಕು; ಮತ್ತು ದೊಡ್ಡ ಸರಕಾರೀ ಅಧಿಕಾರಿಯಾದುದನ್ನು ನೋಡಬೇಕು ಇದೊಂದೇ ಧ್ಯೇಯವು ನನ್ನೆದುರಿಗೆ ಇತ್ತು. ಅದನ್ನು ನೀನು ನಿರಾಶೆಗೊಳಿಸಿದೆ; ಹಾಗು ಅದರಾಚೆಗಿನ ಸಂಗತಿಯೆಂದರೆ, ಇನ್ನು ಮುಂದೆ ಅವಿವಾಹಿತನಾಗಿದ್ದು ಕಾಲಕಳೆಯುವ ಯಾವ ನಿಶ್ಚಯವನ್ನು ನೀನು ಮಾಡಿದೆಯೋ, ಅದರ ಇಂಗಿತವಂತೂ ನನಗೆ ಏನೂ ತಿಳಿಯದಾಗಿದೆ. ಲೋಕದಲ್ಲಿ ಅಂತರ್ಜ್ಞಾನವೆಂಬದು ಯಾರೊಬ್ಬರಿಗೆ ತುಸ ವಿಶೇಷವಿದ್ದರೂ ಅದರಿಂದ ಅವನು ಇಲ್ಲವೆ ಬೇರೆ ಸಾಂಸಾರಿಕ ಜನರು ಸಂನ್ಯಾಸಿಗಳೇಕಾಗಬೇಕು? ನಮ್ಮ ಒಬ್ಬೊಂಟಿಗ ಮಗನಾದ ನೀನು ಅವಿವಾಹಿತನಾಗುಳಿದರೆ, ನಿನ್ನ ಸಂಸಾರಸುಖವು ಮುಗಿದದ್ದನ್ನು ಕಂಡು ನಮಗೆ ವಿಷಾದವೆನಿಸತಕ್ಕುದೇ. ಅದರಿಂದ ನಮ್ಮ ನಿರ್ವಂಶವಾದೀತಲ್ಲ! ಅದರ ಗತಿಯೇನು? ನಮ್ಮ ಈ ವಿಶಾಲ ಜಮೀನದಾರಿಕೆಗೆ ಮುಂದೆ ಯಾರು ಒಡೆಯರಾಗುವವರು? ಒಂದು ವೇಳೆ ನೀನು ಆಯ್. ಸಿ ಎಸ್ಸಿಗೆ ರಾಜೀನಾಮೆ ಕೊಟ್ಟರೂ ಅದು ಸಾಮಾನ್ಯವೆಂದು ನಾನು ತಿಳಿ

ದೆನು. ನಿನಗೆ ಬಹು ದೊಡ್ಡ ಸಂಬಳದೊರೆದೀತೆಂಬ ಲೋಭದ ದೃಷ್ಟಿಯು ಎಂದೂ ನನ್ನದಿರಲಿಲ್ಲ. ನಮಗೆ ಸಾಕಾಗಿ ಉಳಿಯುವಷ್ಟು ಜಮೀನದಾರಿಕೆ ಯಿದೆ. ಮನ್ನಣೆಯ ದೃಷ್ಟಿಯಿಂದ ನೀನು ಆ ಪರೀಕ್ಷೆಪಾಸಾದ್ದರಿಂದ ಆ ಮನ್ನಣೆಯು ಲಭಿಸಿಯೇಬಿಟ್ಟಿದೆ; ಮತ್ತು ನೀನು ಸರಕಾರೀ ನೌಕರಿಯನ್ನು ಬಿಟ್ಟುಕೊಟ್ಟದ್ದರಿಂದ ನೀನು ದೊಡ್ಡ ಅಧಿಕಾರಿಯಾದದ್ದನ್ನು ನೋಡಬೇಕೆಂದಿದ್ದ ಆ ಯಾವ ನನ್ನ ಇಚ್ಛೆಯು ನಷ್ಟವಾಯಿತೋ, ಅದಕ್ಕೆ ಬದಲು ನಮಗೆ ಬೇರೆ ರೀತಿಯ ಲಾಭವು ದೊರೆಯುವಂತಿದೆ; ಯಾಕಂದರೆ ನೀನು ಅಧಿಕಾರೀ ನೌಕರನಿರದ್ದರಿಂದ ಸದಾ ಮನೆಯಲ್ಲೇ ನಮ್ಮ ಜೊತೆಗಿರುತ್ತೀ; ಆದರೆ ಲಗ್ನದ ವಿಚಾರವನ್ನು ನೀನು ಬಿಟ್ಟುಬಿಡುವದರಿಂದ ರಾವಬಹಾದ್ದೂರ ಶಾಮಲಾಲ ರೊಂದಿಗೆ ನಾನು ಯಾವ ವಾಗ್ನಿಶ್ಚಯವನ್ನು ಮಾಡಿರುವೆನೋ ಅದರ ಗತಿಯೇ ನಾಗಬೇಕು? ಅವರ ಮಗಳಾದ ಶರಯೂಳನ್ನು ಸೊಸೆಯೆಂಬ ಸಂಬಂಧದಿಂದ ನೋಡುತ್ತಿದ್ದ ನಮ್ಮ ಆ ಪ್ರೇಮಲ ದೃಷ್ಟಿಯು ನಷ್ಟವಾಗಬೇಕೇ? ಮತ್ತು ಆ ಮಧುರ ಹುಡುಗಿಯ ಪ್ರೇಮಭಂಗವನ್ನು ನೀನು ಮಾಡಲಿಕ್ಕೆ ಅವಳಾವ ಅಂಥ ಅಪರಾಧಗೆಯ್ದಿರುವಳು? ನಿನ್ನನ್ನು ರಾಜಿ, ಖುಷಿ, ಆನಂದದಲ್ಲಿಡದ ಹೊರತು ನಮ್ಮಿಬ್ಬರಿಗೆ ಈ ಲೋಕದಲ್ಲಿ ಬೇರೆ ಸುಖವೇನಿರಬೇಕು? ಆದರೆ ನೀನು ನಮ್ಮ ಇಡೀ ಉಲ್ಲಸಿತ ಸಂಸಾರವನ್ನು ಡಬ್ಬಹಾಕಿದೆಯಲ್ಲ! ಇದಕ್ಕೆ ನಾವೇನೆನಬೇಕೋ ತಿಳಿಯುವದಿಲ್ಲ!"

ಬಳಿಕ ಮಾಸಾಹೇಬರು ಹೇಳಿದರೇನಂದರೆ:—"ಮಗೂ, ನಿನ್ನ ಹಿರಿಯರು ಇದುವರೆಗೆ ನಿನಗೇನು ಹೇಳಿದರೋ ನನ್ನ ಅಂಬೋಣವಾದರೂ ಅದೇ ಇದೆ; ಆದರೆ ನಾನು ಇನ್ನೂ ತುಸ ತಿಳಿಸುವುದಿದೆ. ನೀನು ಈ ಯಾವ ಗುರು ಮಹಾರಾಜರನ್ನು ಮನೆಯಲ್ಲಿ ತಂದಿಟ್ಟೆಯೊ, ಅವರ ಅಂಥ ಯಾವ ಕರಾಮತಿಯನ್ನು ನೀನು ಕಂಡಿರುತ್ತೀ? ನಾನು ಹಳೇ ಸನಾತನ ಧರ್ಮದವಳಿದ್ದರೂ, ನಿನ್ನಂತಹ ಕಲಿತ ತರುಣನು ತೂಕಡಿಸುವ ಬುದ್ಧಿಯಿಂದ ಗುರುಭಜನೆಗೆ ತೊಡಗುವುದು ನನಗಂತೂ ಸರಿದೋರುವದಿಲ್ಲ."

ಆದರೆ ಚಂದುವು ಅವರಿಬ್ಬರ ಪ್ರಶ್ನೆಗಳಿಗೆ ಏನೂ ಉತ್ತರ ಕೊಡದೆ, ಆತನು:—"ಅವ್ವಾ, ನನ್ನ ನಡತೆಯು ನಿಮಗೆ ಚಮತ್ಕಾರದ್ದಾಗಿ ತೋರುತ್ತಿದೆಂಬದು ನನಗೂ ತಿಳಿಯುತ್ತಿದೆ; ಆದರೆ ನಾನು ಹಾಗೇಕೆ ನಡೆಯುತ್ತೇನೆಂಬದು ನನ್ನದು ನನಗೇ ತಿಳಿಯದಿರುವಾಗ, ನಾನು ನಿಮಗದನ್ನು ಹೇಗೆ ತಿಳಿಹೇಳಲಿ? ನಿಮ್ಮ ಮನಸ್ಸಿಗೆ ದುಃಖವಿತ್ತಬಗ್ಗೆ ನನ್ನನ್ನು ಕ್ಷಮಿಸಿರಿ."

ಅದಕ್ಕೆ ಅವರಿಬ್ಬರಾದರೂ ಏನೆನ್ನುವರು? ಸರಿಕದ ಮಗ. ಸುವಿದ್ಯ, ಬುದ್ಧಿವಾನ್, ಕರ್ತಾ. ಇಂಥವನು ತನಗೇನೆನಿಸುತ್ತದೆಂಬದನ್ನು ಹೇಳಲಶಕ್ಯವಾದರೆ ನಾವು ಅವನನ್ನು ಮತ್ತೆ ಪೀಡಿಸುವದರಿಂದೇನು ಪ್ರಯೋಜನ? ತನ್ನ ಪ್ರೀತಿಯ ವ್ಯಸನಗಳ ಸ್ವಾರ್ಥತ್ಯಾಗ ಮಾಡಲಿಕ್ಕೆ ಕೂಡ ಯಾವ ಚಂದುವು ಸಿದ್ಧನಾದನೋ, ಅವನು ತನ್ನಾ ಪರಿವರ್ತನವು ಪ್ರಾಮಾಣಿಕತನದ್ದಿದುವು ದೆಂಬದಕ್ಕೆ ಬೇರೆ ಖಾತ್ರಿಯ ಪುರಾವೆಯೇನು ಕೊಡಬೇಕು?

ಮರುದಿನ ಮುಂಜಾನೆ ಸರ ಗಂಗಾರಾಮ ಹಾಗು ಮಾಸಾಹೇಬ ಇವರು ಮೋಟಾರಿನಲ್ಲಿ ಕುಳಿತು ರಾಯಬಹಾದ್ದೂರ ಶಾಮಲಾಲರ ಮನೆಗೆ ಹೋದರು. ಆಗ ಯಥೋಚಿತ ಸತ್ಕಾರವಾದನಂತರ ಮಾಸಾಹೇಬರೂ ರಾಯಬಹಾದ್ದೂರರ ಮಡದಿಯೂ ತೆರೆಯ ಹಿಂದೆ ಹೋಗಿ ಕುಳಿತರು. ಅವರಿಬ್ಬರು ಗಂಡಸರು ಸಮೀಪದ ಹಾಲಿನಲ್ಲಿ ಕುಳಿತರು ಸರ ಗಂಗಾರಾಮರು ತುಸ ತಲೆ ತಗ್ಗಿಸಿಕೊಂಡು "ರಾಯಬಹಾದ್ದೂರರೇ, ನಾವಿಬ್ಬರೂ ನಿಮ್ಮಗಳ ಕ್ಷಮೆ ಯಾಚಿಸಲೋಸುಗ ಬಂದಿರುತ್ತೇವೆ."

ಆಶ್ಚರ್ಯದಿಂದ ರಾಯಬಹಾದ್ದೂರರು "ನೀವಿದೇನು ಅನ್ನುವಿರೋ ನನಗೆ ತಿಳಿಯುವದಿಲ್ಲ."

"ನೀವು ಕ್ಷಮಿಸತಕ್ಕ ವಿಷಯವೇನಂದರೆ, ಏನಾಯಿತೋ ತಿಳಿಯದು, ನಮ್ಮ ಚಂದೂನಿಗೆ ಎಂಥದೋ ಆಕಸ್ಮಿಕ ಮಾನಸಿಕ ಬಾಧೆಯಾಗಿದೆ. ಅವನು ಒಬ್ಬ ವೈರಾಗಿಯನ್ನು ಕರೆತಂದು ತನ್ನ ಗುರುವೆಂದು ಅವನನ್ನು ನಮ್ಮ ಮನೆಯಲ್ಲಿ ಸ್ಥಾಪಿಸಿರುತ್ತಾನೆ. ಅವನು ಅಹಿಂಸೆಯ ಆಣೆ ಮಾಡಿದನು, ಕೊರಳಲ್ಲಿ ತುಳಸೀಮಣಿಗಳ ಮಾಲೆ ಹಾಕಿದನು, ಆಯ್. ಸಿ ಎಸ್. ನ ನೌಕರಿಗೆ ರಾಜಿನಾಮೆ ಕೊಟ್ಟನು; ಮತ್ತೂ-ಮತ್ತು ಹೇಳಲಿಕ್ಕೆ ಲಜ್ಜೆಯೆನಿಸುತ್ತದೆ, ದುಃಖವೆನಿಸುತ್ತದೆ; ಆದರೆ ರಾಯಬಹಾದ್ದೂರ...."

"ಹೇಳಿರಿ-ಹೇಳಿರಿ. ವಿಷಾದವೆನಿಸಿಕೊಳ್ಳಬೇಡಿರಿ; ಇನ್ನು ಮುಂದೆ ನಿಮ್ಮ ದುಃಖವೂ ನಮ್ಮ ದುಃಖವಲ್ಲವೇ"

"ಅಹುದು. ಅಂಥ ಸಂಬಂಧವುಂಟಾಗಬೇಕೆಂದೇ ಇಚ್ಛೆಯಿದ್ದಿತು; ಆದರೆ 'ಮನುಷ್ಯನೊಂದು ಬಗೆದರೆ ದೈವವು ಬೇರೊಂದು ಬಗೆವುದು' ಎನ್ನುವಂತಾಗಿದೆ. ತನ್ನ ಮಾನಸಿಕ ಲಹರಿಗಳನ್ನು ಸೀಮೆಗೆ ತಲುಪಿಸಬೇಕೆಂದೋ ಏನೋ ಚಂದುವು ಆಜನ್ಮ ಬ್ರಹ್ಮಚರ್ಯದ ಶಪಥ ತೊಟ್ಟಿರುತ್ತಾನೆ."

ತೆರೆಯ ಹೊರಗೂ ತೆರೆಯು ಒಳಗೂ ದುಃಖದ ನಿಟ್ಟುಸಿರುಗಳು ಚತುರ್ಮುಖವಾಗಿ ಹೊರಟವು.

ಆಗ ರಾಯಬಹಾದ್ದೂರರು-"ಆದರೆ ಇದಕ್ಕೆ ಕಾರಣವೇನು? ಅಂದರೆ ಬರಿಯ ಬ್ರಹ್ಮಚರ್ಯ ಪ್ರತಿಜ್ಞೆಯ ಕಾರಣವನ್ನಷ್ಟೇ ನಾನು ಕೇಳುತ್ತಿಲ್ಲ; ಆದರೆ ಈ ಇಡೀ ವೈರಾಗ್ಯದ ಕಾರಣವೇನಿದ್ದೀತು?"

"ಕಾರಣವೇನು ಹೇಳಲಿ? ಅದನ್ನು ಹೇಳಿದರೆ ಯಾರಿಗೂ ನಿಜವೆಂದು ತೋರಲಾರದು!"

"ಆದರೂ ಹೇಳಿರಿ ನೋಡೋಣ."

"ನಮ್ಮ ಚಂದುವು ಬೇಟೆಯ ತುಬಾಕಿಯಿಂದ ಗಿಡದ ಮೇಲಿನ ಎರಡು ಹಕ್ಕಿಗಳನ್ನು ಹೊಡೆದನು. ಅಷ್ಟರಲ್ಲಿ ಅತ್ತಿಂದೊಬ್ಬ ಬೈರಾಗಿ ಬಂದನು. ಆತನು ಅದು ಹಿಂಸೆಯೆಂದು ಚಂದುವನ್ನು ಶಪಿಸಿದನು; ಮತ್ತು ಆ ಶಾಪವು ಅಕಲ್ಪಿತ ರೀತಿಯಿಂದ ಸಫಲವಾಯಿತೆಂಬ ಬಗ್ಗೆ ಚಂದೂನಿಗೆ ಸಾಕ್ಷಾತ್ಕಾರ ವಾಯಿತು. ರಾವಬಹಾದ್ದೂರರೇ, ಇನ್ನು ನೀವೇ ಹೇಳಿರಿ, ಚಂದೂನಂತಹ ಸುಶಿಕ್ಷಿತ ಯುವಕನ ಬಗ್ಗೆ ಇದು ಹೇಗಾಗಬೇಕು? ಮತ್ತು ಆಗಿದೆಯೆಂದು ಹೇಳಿದರೂ ಅದನ್ನು ನಿಜವೆಂದು ಯಾರು ತಿಳಿದಾರು? ಆದರೆ ಅದು ಹೇಗೆಯೇ ಇರಲಿ. ನಾವು ಇಬ್ಬರು ಬಂದು ನಿಮಗೀಗ ತಿಳಿಸುವದೇನಂದರೆ, ಚಂದುವು ಅಂದರೆ, ಒಂದು ಬಗೆಯಿಂದ ನಾವೇ ನಿಮಗೆ ಕಳೆದ ನಾಲ್ಕು ವರ್ಷಗಳಿಂದ ಆಶೆದೋರಿ ಕೊನೆಗೆ ನಿಮ್ಮನ್ನು ಮೋಸಪಡಿಸಿದಂತಾಗಿದೆ. ಶರಯೂಳಂತಹ ಸೊಸೆ ದೊರೆಯುವುದು ನಮ್ಮ ದೈವದಲ್ಲಿರದಿದ್ದರೂ, ಇನ್ನು ನೀವು ಆ ಲಗ್ನದ ವಚನದಿಂದ ಮುಕ್ತರಾದಿರೆಂದು ತಿಳಿಯಿರಿ; ಮತ್ತು ಮಗಳಿಗೆ ಅನುರೂಪ ವಾದ ಬೇರೆ ಯಾವುದೊಂದು ಸ್ಥಳ ನೋಡಿರಿ. ನಮ್ಮ ದುಃಖವನ್ನು ನುಂಗಿ ಕೊಂಡು, ನಾವು ಅವಳ ತಲೆಯ ಮೇಲೆ ಮಂಗಳಾಕ್ಷತೆಗಳನ್ನು ಹಾಕಿ ಆಶೀ ರ್ವದಿಸಲಿಕ್ಕೆ ಅವಶ್ಯವಾಗಿ ಬರುತ್ತೇವೆ."

'ಸರ ಸಾಹೇಬ, ಇಷ್ಟೇ ಅಲ್ಲವೆ? ಅದರಲ್ಲೇನಿದೆ? ನೀವು ಕ್ಷಮೆ ಬೇಡ ಲಿಕ್ಕೆ ಮತ್ತೇನಾದರೂ ವಿಶೇಷವಾಗಿರಬೇಕೆಂದು ನಾನಂದಿದ್ದೆ. ಇದರಲ್ಲಿ ದೋಷಿಗಳೇ ಆಗಿದ್ದರೆ, ನೀವೂ ನಾವೂ ಸರಿಯಾಗಿಯೇ ದೋಷಿಯಾದೇವು; ಯಾಕಂದರೆ ಈ ವಿವಾಹವು ಉಭಯತರಿಗೂ ಇಷ್ಟವೆನಿಸುತ್ತಿತ್ತು; ಮತ್ತು ಇಬ್ಬರೂ ಒಬ್ಬರೊಬ್ಬರಿಗೆ ಸಮವಾದ ಆಶೆಹಚ್ಚಿ ಕುಳಿತಿರಲಿಲ್ಲವೇನು? ಅದಿ ರಲಿ. ಇನ್ನು ಚಂದೂಲಾಲನು ವಿಶ್ವಾಸಘಾತಮಾಡಿ ನಿರಾಶೆಗೊಳಿಸಿದ್ದರೆ ಅದನ್ನು ಇಬ್ಬರಿಗೂ ಸಮನಾಗಿಯೇ ಮಾಡಲಾಗಿದೆ. ಇದರಲ್ಲಿ ಕ್ಷಮೆಯನ್ನು ಯಾರು ಯಾಚಿಸಬೇಕು? ಮತ್ತು ಯಾರು ನೀಡಬೇಕು? ಸರ ಸಾಹೇಬ, ಹೋಗಲಿಬಿಡಿರಿ. ಲೋಕದೊಳಗೆ ಇಂಥ ಎಷ್ಟೋ ಲಗ್ನಗಳು ಮುರಿಯು

ತ್ತವೆ. ನಾವು ನಮ್ಮ ಕರ್ತವ್ಯವಾವುದೋ ಅದನ್ನು ಅವಶ್ಯವಾಗಿ ಮಾಡು ವೆವು. ಲಗ್ನಮಾಸಕ್ಕೆ ಇನ್ನು ಮೂರು ನಾಲ್ಕು ತಿಂಗಳುಗಳ ಅವಧಿಯಿದೆ. ಸರ ಸಾಹೇಬ, ಭಾವನಾವಶ ತರುಣರು ಮಾಡಿದ ಆಣೆ-ಶಪಥಗಳನ್ನು ಹಾಗೆ ಹಾಗೆಂದೇ ಹಿರಿಯರಾದ ಅನುಭವಿಕ ಪ್ರೌಢರು ತಿಳಿಯಬೇಕೆಂದು ನಾನು ನಿಮಗೆ ಹೇಳುತ್ತೇನೆ. 'ಗಾಳಿಯಿಂದ ಬಂತು ಬಿರುಗಾಳಿಯಿಂದ ಹೋಯಿತು.' ಎಂಬಂತಾಗುವದನ್ನು ಈ ಲೋಕದಲ್ಲಿ ನಾವೇನು ಅಲ್ಪ ಸ್ವಲ್ಪ ನೋಡುವೆವೋ? ಅದರಂತೆಯೇ ಇದೆಂದು ತಿಳಿದರಾಯಿತು!''

ರಾಯಬಹದ್ದೂರರು ತಮ್ಮ ಭಾಷಣಕ್ಕೆ ವಿನೋದದ ಹೊಳಪು ಕೊಡ ಲಿಕ್ಕೆಂದು ಮತ್ತೆ "ಚಂದುವು ಎಂಥ ಭಾಗ್ಯವಂತನಾದಪ್ಪಾ! ಈ ಇಂಗ್ಲಂಡ ರಿಟರ್ಣ್ಡ ಎಂ. ಎ., ಬಾರಿಸ್ಟರ, ಆಯ್. ಸಿ. ಎಸ್ಸಿನ ವೈರಾಗ್ಯದ ಸೋಗು ಎಂತೆಂತು ಶೋಭಿಸುವುದು, ಎಂತೆಂತು ಸಾಧಿಸುವುದು ಎಂಬದನ್ನು ನೋಡಲಿ ಕ್ಕೆಂದು ನಾನೊಮ್ಮೆ ನಿಮ್ಮ ಮನೆಗೇ ಬರಬೇಕಾಗಿದೆ.''

ಇಷ್ಟರಲ್ಲಿ ರಾಯಬಹದ್ದೂರರ ಮಡದಿಯು ಗಂಡನನ್ನುದ್ದೇಶಿಸಿ ಪರದೆ ಯೊಳಗಿಂದಲೇ ಗಟ್ಟಿಯಾಗಿ—"ಇನ್ನು ಭಿಡೆ ಏಕೆ ಇಡಬೇಕು? ಲಗ್ನದ ಬಾಬಿನಲ್ಲಿ ನಮಗೆ ಗೊತ್ತಾಗಿರುವ ಆ ವಿಶೇಷ ಸಂಗತಿಯನ್ನು ಈಗಲೇ ತಿಳಿಸಿ ಬಿಡಬೇಕು. ಹೇಗೂ ಅದೇ ಮಾತು ಹೊರಟಿದೆ.''

ತಮ್ಮ ಹೆಂಡತಿಯ ಈ ಸೂಚನೆಯು ಯೋಗ್ಯವೆಂದು ತೋರಿ, ರಾಯ ಬಹದ್ದೂರರು:—"ಒಳ್ಳೇದು. ಚಂದೂನ ವಿಷಯವಾಗಿ ತಾವು ಹೇಳತಕ್ಕ ದ್ದೆಲ್ಲ ಹೇಳಿಯಾಯಿತಷ್ಟೇ? ಇನ್ನು ನಾವೂ ಒಂದಿಷ್ಟು ಸಂಗತಿ ತಿಳಿಸುತ್ತೇವೆ. ಅದು ವಿಶೇಷ ಸೋಜಿಗದ್ದಿರುವುದರಿಂದ ಲಕ್ಷ್ಯವಿಟ್ಟು ಕೇಳಿಕೊಳ್ಳಿರಿ.''

"ಅದಾವುದು?''

"ಚಂದೂ ವಿಲಾಯತಿಯಿಂದ ಬಂದ ಬಳಿಕ ಮೊನ್ನೆ ನಮ್ಮ ಹಿರಿಯ ಮಗಳು ಸುಮ್ಮನೆ ನಾಲ್ಕುದಿನ ಇರಲಿಕ್ಕೆಂದು ನಮ್ಮ ಮನೆಗೆ ಬಂದಿದ್ದಳು. ಆ ಕಾಲಕ್ಕೆ ಅವಳು ಮತ್ತು ಶರಯೂ ಇವರಿಬ್ಬರೂ ಅಕ್ಕತಂಗಿಯರು ಹಿತ ಗುಜದ ಮಾತಾಡುತ್ತ ಕುಳಿತಿದ್ದರು. ಆಗ ಚಂದೂನಿಂದ ಇತ್ತೀಚೆಗೆ ಬಂದಿದ್ದ ಒಂದೆರಡು ಪತ್ರಗಳನ್ನು ಶರಯೂ ತನ್ನ ಅಕ್ಕನಿಗೆ ತೋರಿಸಿದಳು. ಅವು ಗಳನ್ನೋದಿ ಅವಳಿಗೆ ಸಂದೇಹವುಂಟಾದುದೇನಂದರೆ, ಚಂದುವು ಶರಯೂಳ ಜೊತೆಗಿನ ಲಗ್ನದ ಹವ್ಯಾಸವನ್ನು ಬಿಟ್ಟುಬಿಟ್ಟಿರಬೇಕು; ಮತ್ತು ಆತನ ಮನಸ್ಸಿನಲ್ಲಿ ಅತ್ತಣದ ಯಾವಳೊಬ್ಬ ಇಂಗ್ಲಿಷ ಹುಡುಗೆಯನ್ನು ಮಡದಿ ಎಂದು ಲಗ್ನವಾಗುವದಿರಬೇಕು.''

"ಛೇ! ಛೇ! ಚಂದೂ ಹೀಗೇಕೆ ಮಾಡಿಯಾನು?" ಸರ ಸಾಹೇಬರು ಆಶ್ಚರ್ಯಭರಿತರಾಗಿ ಉದ್ಗರಿಸಿದರು.

"ಸರ ಸಾಹೇಬರೇ, ಇಂಥ ಸಂಗತಿಗಳನ್ನು ಆತನು ನಮ್ಮನಿಮ್ಮಗಳಿಗೆ ಲ್ಲಾದರೂ ಬರೆಯುವನೋ? ಶರಯೂಳಿಗೆ ಯಾವ ಪತ್ರಗಳು ಬಂದಿವೆಯೋ, ಅವುಗಳ ಮೇಲಿಂದ ನಮ್ಮ ಹಿರೀ ಮಗಳು ಹಾಗೆ ಅಂದಾಜು ಕಟ್ಟಿರುತ್ತಾಳೆ; ಯಾಕಂದರೆ, ಇತ್ತೀಚೆಗೆ ಚಂದೂನ ಎಳೆತವು ಶರಯೂಳ ಕಡೆಗೆ ಕಡಿಮೆಯಾಗಿದೆ. ಬೇಕಾದರೆ ನೀವಿದನ್ನು ನಿಜವೆಂದು ತಿಳಿಯಬೇಡಿರಿ; ಆದರೆ ಚಂದೂನ ಮಿಶ್ರವಿವಾಹದ ಆ ಅತ್ಯಾಚಾರವೇನು. ಅಕಾಲ ಬ್ರಹ್ಮಚರ್ಯದ ಈ ಅನಾಚಾರವೇನು ಎರಡೂ ಒಂದೇ; ಅಂದರೆ ತರುಣರು ತರುಣರೇ, ಅವಿಚಾರಿಗಳೇ! ಅದಕ್ಕೆ ಮತ್ತೇನೆನಬೇಕು?"

ಈ ವಾರ್ತೆಯಿಂದ ಸರ ಗಂಗಾರಾಮ ಮತ್ತು ಮಾಸಾಹೇಬ ಇವರ ಮನಸ್ಸಿನಲ್ಲಿ ಒಂದಾನೊಂದು ಹೊಸ ಪ್ರಕಾಶವೇ ಬಿದ್ದಿತು; ಆದರೆ ತಮ್ಮ ಮೇಲೆ ಬಂದಿದ್ದ ಸಂಕಟದ ಕತ್ತಲೆಯೊಳಗಿಂದ ಚೆನ್ನಾಗಿ ದಾರಿತೋರುವಷ್ಟು ಆ ಪ್ರಕಾಶವು ಸ್ವಚ್ಛವಾಗಿರಲಿಲ್ಲ. ಇರಲಿ.

ಬಳಿಕ ತುಸ ಹೊತ್ತು ಕುಳಿತು ಅವರು ತಮ್ಮ ಮನೆಗೆ ತಿರುಗಿದರು. ಆಗ ಮಾಸಾಹೇಬರು:—ಆದಕ್ಕೇ ನಾನು ಆಗಲೆ ಹೇಳುತ್ತಿರಲಿಲ್ಲವೆ, ಚಂದೂನ ಲಗ್ನ ಮಾಡಿಯೇ ವಿಲಾಯತಿಗೆ ಕಳಿಸಬೇಕೆಂದು; ಆದರೆ ನನ್ನ ಮಾತು ಕೇಳುವವರಾರು? ತಾವು ಅವನನ್ನು ಅಚ್ಚೆ ಮಾಡಿ ಮಾಡಿ ತಲೆಗೇರಿಸಿ ಕೊಂಡಿರುತ್ತೀರಿ. ಭೋಗಿಸಿರಿನ್ನು ಆ ಒಣ ಅಚ್ಚೆಯ ಫಲಗಳನ್ನು!"

"ಮಾಸಾಹೇಬ, ನಿಜವಿದೆ. ನೀವಿನ್ನು ಎಷ್ಟು ಅಂದರೂ ಕಡಿಮೆಯೇ ಇದೆ."

ರಾಯಬಹಾದ್ದೂರ ಶಾಮಲಾಲರಿಗೆ ತಮ್ಮ ಅಂಕಿತದೊಳಗಿನ ಒಬ್ಬ ಬಹು ದೊಡ್ಡ ಅಳಿಯನ ಪ್ರಸ್ಥವು ಕಳಚಿಬಿದ್ದದರಿಂದ ಮತ್ತು ನಾಲ್ಕು ವರ್ಷಗಳ ನಂತರ ಮತ್ತೆ ಮಗಳಿಗೆ ವರಸಂಶೋಧನ ನಡೆಸಬೇಕಾದ್ದರಿಂದ ಅವರು ಆ ಕೆಲಸವನ್ನು ಒಳ್ಳೇ ಜಾರಿಯಿಂದ ನಡೆಸಬೇಕಾಯಿತು! ಅವರಿಗೆ ಎಲ್ಲ ಬಗೆಯ ಅನುಕೂಲತೆಯಿತ್ತು; ಅಲ್ಲದೆ ಶರಯೂ ರೂಪವತಿಯು. ಅದರಿಂದ ಯಾವುದೊಂದು ಒಳ್ಳೇ ಮನೆತನ ದೊರೆಯುಲಿಕ್ಕೆ ಹೆಚ್ಚು ಪ್ರಯತ್ನಿಸಬೇಕಾಗಿರಲಿಲ್ಲ; ಆದರೆ ಯಾರಿಗಾದರೂ ಕೈಯೊಳಗಿನ ವಸ್ತುವನ್ನು ಕಳಕೊಂಡ ಬಗ್ಗೆ ವಿಷಾದವಾಗಿಯೇ ಆಗುವುದು; ಆದರೆ ಮನುಷ್ಯನು ಒಳ್ಳೇ ಚತುರನೂ ಇರುವುದರಿಂದ ಪ್ರಾಪ್ತವಾದ ಸಂಕಟಕ್ಕಿಂತ, ನಿವಾರಣವಾದ ಯಾವುದೊಂ

ದು ಸಂಕಟವೇ ಹೆಚ್ಚು ದುಃಖದಾಯಕವಿತ್ತೆಂದು ಕಲ್ಪಿಸಿ, ಅದರ ತುಲನೆಯಿಂದ ಈಗಿದ್ದ ಸ್ಥಿತಿಯೇ ವಿಹಿತವೆನ್ನುತ್ತಾನೆ. ಇದರಂತೆ ರಾಯಬಹಾದ್ದೂರ ಶಾಮಲಾಲ ಹಾಗು ಅವರ ಹೆಂಡತಿಯವರು ಯಾವಾಗ ಈ ಮಾತಿನ ಬಗ್ಗೆ ಏಕಾಂತದಲ್ಲಿ ಚರ್ಚೆಮಾಡಿದರೋ, ಆಗ ಅವರು ಒಮ್ಮತದಿಂದ-ಆದದ್ದೇ ಒಂದು ರೀತಿಯಿಂದ ನೆಟ್ಟಗಾಯಿತು. ಲಗ್ನವು ನಾಲ್ಕು ವರ್ಷ ಮುಂದೆ ಬಿದ್ದುದು ದುರ್ಯೋಗವಾಗಿರದೆ ಸುಯೋಗವೇ ಎನ್ನಬೇಕು! ಯಾಕಂದರೆ ಗೊತ್ತುಮಾಡಲ್ಪಟ್ಟ ಅಳಿಯನು ಬೇರೆ ಎಲ್ಲ ದೃಷ್ಟಿಯಿಂದ ನೆಟ್ಟಗಿದ್ದರೂ ಪಾರಜದಂತೆ ಇಷ್ಟು ಚಂಚಲಸ್ವಭಾವನಾದಾನೆಂಬದು ಯಾರಿಗೆ ಗೊತ್ತು? ಗುರುಭಜನೆಗೆ ಹತ್ತಿ ಇಂದು ಆಜೀವ ಬ್ರಹ್ಮಚರ್ಯದಿಂದಿರುವದನ್ನು ಇವನು ಘೋಷಿಸಿದನು; ಆದರೆ ಈ ಮೊದಲೇ ಶರಯೂಳ ಜೊತೆಗೆ ಈತನ ಲಗ್ನವಾಗಿಬಿಟ್ಟದ್ದರೆ ಹಾಗು ಈ ವಿಪರೀತ ವಿರಕ್ತಿಯು ಶಿಖರವೆಂದು ಇವನು ಒಂದಾನೊಂದು ದಿನ ತನ್ನ ಹೆಂಡತಿಯನ್ನೇ ತಾಯಿಯೆಂದು ಕರೆದಿದ್ದರೆ, ನಾವೇನು ಮಾಡಬೇಕಿತ್ತು? ಆ ಸಂಕಟದೊಳಗಿಂದ ಪಾರಾದದ್ದೇ ಸುದೈವವೆನ್ನಬೇಕು!

ಚಂದೂನ ಲಗ್ನವು ಮುರಿದ ಬಗ್ಗೆ ಸರ ಗಂಗಾರಾಮರು ಹಿಂದೆ ಹೇಳಿದಂತೆ ತಮ್ಮ ಕರ್ತವ್ಯವನ್ನೆಸಗಿದ ಬಳಿಕ, ಮತ್ತೊಂದು ಮಾತನ್ನು ಅವರು ಒಳ್ಳೇ ನೆನಪಿನಿಂದ ಮಾಡಿದರು. ಅವರು ಚಂದೂನ ಕೋಣೆಯಲ್ಲಿ ಸಹಜವಾಗಿ ಹೋದಂತೆ ಹೋಗಿ:—"ಚಂದೂ, ನಿನ್ನ ಯಾವ ಇಚ್ಛೆಗಳಿಗೂ ಅಡ್ಡಿ ಮಾಡುವ ಇಚ್ಛೆ ನಮಗಿಲ್ಲ. ನಿನಗಿಂತಲೂ ನಿನ್ನ ಆಯ್. ಸಿ. ಎಸ್. ನನಗೆ ಹೆಚ್ಚು ಪ್ರಿಯವಾದೀತೇ? ನೀನು ಸ್ಟೇಟ ಸೆಕ್ರೆಟರಿಯ ಕಡೆಗೆ ಕಳಿಸಲಿರುವ ರಾಜಿನಾಮೆಯು ಬರೆದು ಸಿದ್ಧವಾಗಿದ್ದರೆ ನನ್ನ ಕಡೆಗೆ ಕೊಡು. ಅದರ ಪಾಕೀಟಿನ ಮೇಲೆ ಹೆಸರು-ವಿಳಾಸಗಳನ್ನು ಸಹ ನೀನೇ ಬರೆಕೊಡು. ನಾನು ಇದೀಗ ಹೊರಗೆ ಹೋಗತಕ್ಕವನಿದ್ದೇನೆ. ಆಗ ನಾನು ಸ್ವಂತ ಪೋಸ್ಟಆಫೀಸಿಗೆ ಹೋಗಿ ನನ್ನ ಕೈಯಿಂದಲೇ ಅದನ್ನು ಟಪಾಲಿಗೆ ಹಾಕಿಬರುತ್ತೇನೆ. ಸುಮ್ಮನೆ ಕಾರಕೂನ-ಶಿಪಾಯಿಗಳ ಕೈಗೆ ಅದು ಹೋಗಲಿಕ್ಕೆ ಬೇಡ; ಹಾಗು ಊರಲ್ಲೆಲ್ಲ ಬೊಬ್ಬಾಟವಾಗಲಿಕ್ಕೆ ಬೇಡ."

ಒಳ್ಳೇದೆಂದು ಹೇಳಿ ಚಂದೂಲಾಲನು ಆಯ. ಸಿ. ಎಸ್ಸಿಗೆ ರಾಜಿನಾಮೆ ಬರೆದನು. ಅದನ್ನು ಎರಡೆರಡು ಸಾರೆ ಓದಿ ನೋಡಿದನು; ತನ್ನ ಕೈಯಿಂದಲೆ ಟೈಪ ಮಾಡಿದನು. ಕವ್ಹರಿನಲ್ಲಿ ಹಾಕಿ, ಮುಚ್ಚಿ ಅದರ ಮೇಲೆ ಯೋಗ್ಯವಾದ ವಿಳಾಸ ಬರೆದು ಅದನ್ನು ಸರ ಸಾಹೇಬರ ಕೈಗಿತ್ತನು.

"ಆದರೆ ಪಾಪ! ನಾನು ಆಯ್. ಸಿ. ಎಸ್. ಆಗುವ ಸಲುವಾಗಿ ನೀವು ಎಷ್ಟೆಷ್ಟು ಶ್ರಮವಹಿಸಿರುತ್ತೀರಿ, ಎಷ್ಟು ಖರ್ಚು ಮಾಡಿರುತ್ತೀರೆಂಬದೆಲ್ಲ ನನಗೆ ಚನ್ನಾಗಿ ಗೊತ್ತಿದೆ; ಆದರೆ ನನಗೀಗ ಆ ನೌಕರಿಯ ಹೇಸಿಕೆಯುಂಟಾಗಿದೆ. ಆದರಿಂದ ನೀವು ನನ್ನ ಮೇಲೆ ಸಿಟ್ಟಾಗಲಿಕ್ಕಿಲ್ಲಷ್ಟೇ?"

ಸರ ಸಾಹೇಬರು ಅವಸರದಿಂದ:—"ಚಂದೂ, ನೀನು ಹುಚ್ಚನಿರುತ್ತೀ. ನಿನ್ನ ಮೇಲೆ ಸಿಟ್ಟಾಗಲಿಕ್ಕೆ ನನಗೇನಾದರೂ ಬುದ್ಧಿಯಿದೆಯೋ ಇಲ್ಲವೋ? ಒಂದುವೇಳೆ ನಿನ್ನ ಮೇಲೆ ಸಿಟ್ಟಾಗಿ ಬೇರೆಯವನ ಕಡೆಗೆ ನೋಡಿ ಸಮಾಧಾನ ಪಡೆಯಲಿಕ್ಕೆ ನನಗೆ ಇನ್ನೊಬ್ಬ ಮಗನೇನಾದರೂ ಇರುವನೇ? ಎಲಾ, ಆಯ್. ಸಿ. ಎಸ್. ಆಯ್. ಸಿ. ಎಸ್. ಅಂದರಾವ ದೊಡ್ಡ ವಸ್ತುವಿದೆ? ನೀನು ಸಂತೋಷದಿಂದಿದ್ದೆಯೆಂದರೆ, ಕಾಲಿನಿಂದೊದ್ದಲ್ಲೇ ನೀರು ಹೊರಡಿಸೀ. ಬರಿಯ ಬ್ಯಾರಿಸ್ಟರ ಕೆಲಸ ಮಾಡಿದರೂ ಬೇಕಾದಷ್ಟು ದುಡ್ಡು ಸಿಕ್ಕೀತು; ಕೀರ್ತಿಯೂ ಲಭಿಸೀತು. ನೀನು ನಮ್ಮಗಳ ಸಲುವಾಗಿ ಎಳ್ಳಷ್ಟೂ ವಿಷಾದ ಪಟ್ಟುಕೊಳ್ಳಬೇಡ. ಮನುಷ್ಯರಿಗೆ ಆತ್ಮತೃಪ್ತಿಯಂಥ ಸುಖವು ಲೋಕದಲ್ಲಿ ಬೇರೆಯಿಲ್ಲ. ರಾಜನಾಮೆಯ ಪಾಕೀಟನ್ನು ಚೆನ್ನಾಗಿ ಮುಚ್ಚಿದೆಯಾ? ಅದನ್ನು ನನ್ನ ಕಡೆಗೆ ಕೊಡು; ಮತ್ತು ಕೋಣೆಯೊಳಗೆ ಹೋಗಿ ಸ್ವಸ್ಥವಾಗಿ ವಿಶ್ರಾಂತಿ ಪಡೆ ನೋಡೋಣ."

ಚಂದೂ ಕೊಟ್ಟ ಲಕ್ಕೋಟಿ ತಕ್ಕೊಂಡು ಸರ ಗಂಗಾರಾಮರು ಪೋಷ್ಟಿನ ಕಡೆಗೆ ಹೋಗದೆ ತಮ್ಮ ಕೋಣೆಗೆ ಹೋದರು; ಹಾಗು ತಮ್ಮ ತಿಜೋರಿ ತೆಗೆದು, ಆ ರಾಜನಾಮೆಯ ಕವ್ಹರನ್ನು ಅದರದೊಂದು ಒಳ ಖಾನಿಯಲ್ಲಿ ಭದ್ರವಾಗಿಟ್ಟು, ತಿಜೋರಿಯನ್ನು ಮುಚ್ಚಿದರು. ಬಳಿಕ ಹೊರಗೆ ಹೋದರು.

ಆಗ ಅವರು ತಮ್ಮಷ್ಟಕ್ಕೆ ಒಳ್ಳೇ ಗಟ್ಟಿಯಾಗಿ:—"ಕಾಗೆಗಿಂತಲೂ ಅದರ ಮರಿಯು ಹೆಚ್ಚು ಬುದ್ಧಿಶಾಲಿಯೆಂದು ಲೋಕದಲ್ಲೆನೋ ನಾಣ್ಣುಡಿಯಿದೆ; ಆದರೆ ಈ ರಾಜನಾಮೆಯ ಮಟ್ಟಿಗಂತೂ ನಾನದನ್ನು ಸಟಿಯೆನಿಸಿರುತ್ತೇನೆ."

———

### ಮಠದೊಳಗಿನ ಜೀವನ

ಚಂದುವು ಇಷ್ಟು ಸುಶಿಕ್ಷಿತ ಮನುಷ್ಯನಾಗಿಯೂ ಸಾಧುಭಜನೆಗೆ ತೊಗಿದ್ದನ್ನು ನೋಡಿದರೆ, ಯಾರಿಗಾದರೂ ಸಹಜವಾಗಿಯೇ ಆಶ್ಚರ್ಯವೆನಿಸುವಂತಿತ್ತು; ಆದರೆ ವಾಚಕಮಹಾಶಯರೇ, ನೀವು ಮಾನಸಶಾಸ್ತ್ರದ ಅಭ್ಯಾಸ ಮಾಡಿರುವಿರಾ? ಅಥವಾ ಮನುಷ್ಯ ಸ್ವಭಾವದ ಚರಿತ್ರವನ್ನು ಸೂಕ್ಷ್ಮವಾಗಿ

ನಿರೀಕ್ಷಿಸಿರುವಿರಾ? ಹಾಗೆ ಮಾಡಿದ್ದರೆ ನಿಮಗೆ ಇಂಥ ಸಂಗತಿಯ ಬಗ್ಗೆ ಯೂ ಹೆಚ್ಚಾಗಿ ಆಶ್ಚರ್ಯವೆನಿಸಲಿಕ್ಕಿಲ್ಲ; ಯಾಕಂದರೆ ಶಿಕ್ಷಣದಿಂದ ಹುಟ್ಟುಸ್ವಭಾವವು ಸಹಸಾ ಬದಲಾಗುವದಿಲ್ಲ; ಆದರೆ ಆ ಶಿಕ್ಷಣವು ಹುಟ್ಟುಸ್ವಭಾವ-ಗುಣ ದೋಷಗಳಿಗೆ ಹೆಚ್ಚು ತೀವ್ರತೆಯನ್ನುಂಟು ಮಾಡುತ್ತದೆಂಬದು ನಿಮಗೆ ತಿಳಿದಿದ್ದೀತು.

ಮೂಲಸ್ವಭಾವವು ಶ್ರದ್ಧಾಳುವಿದ್ದರೆ, ಭಾವನಾವಶವಾಗಿದ್ದರೆ ಶಿಕ್ಷಣದಿಂದ ಆತನು ಹೆಚ್ಚು ಶ್ರದ್ಧಾಳುವೂ ಭಾವನಾವಶನೂ ಆಗುತ್ತಾನೆ. ಇನ್ನು ನಮ್ಮ ವಿಶಿಷ್ಟ ಚಿತ್ತವೃತ್ತಿಯ ಬಗ್ಗೆ ಅಂದರೆ ಅದರ ಸಮರ್ಥನ ಮಾಡುವ ಸಲುವಾಗಿ ಕಾರಣಗಳನ್ನು ಹುಡುಕಿ ತೆಗೆಯುವ ಕೆಲಸವನ್ನು ಅಶಿಕ್ಷಿತ ಮನಸ್ಸೂ ಮಾಡುತ್ತದೆ; ಆದರೆ ಇಂಥ ಕೆಲಸದಲ್ಲಿ ಶಿಕ್ಷಣದ ಉಪಯೋಗವು---ಅಥವಾ ಪ್ರಸಂಗ ವಿಶೇಷದಲ್ಲಿ ದುರುಪಯೋಗವು --ಆಗುವದೇನಂದರೆ, ಅಶಿಕ್ಷಿತನಿಗೆ ಯಾವ ಮತ್ತು ಎಷ್ಟು ಕಾರಣಗಳು ಸೂಚಿಸುವವೋ, ಅವುಗಳಗಿಂತಲೂ ಸುಶಿಕ್ಷಿತನಿಗೆ ಅವು ಹೆಚ್ಚು ಸೂಚಿಸುವವು; ಆದರೆ ಅದೊಂದು ಪ್ರಕಾರದ ಪ್ರೌಢಿಯೇ ಇರುತ್ತದೆ. ನಿಜವಾದ ಸಮರ್ಥನವು ಬರಿಯ ಮೂರೇ ಶಬ್ದಗಳಿಂದಾಗಿರುತ್ತದೆ. ಅದೆಂದರೆ 'ಇವೆ ಎಂದು ಇವೆ; ಇಲ್ಲ ಎಂದು ಇಲ್ಲ.'

ಕೆಲವು ಮನಸ್ಸುಗಳ ಸ್ಥಿತಿಯು ಅಕ್ಕಪಕ್ಕಗಳಲ್ಲಿ ದಿನ್ನೆಗಳೂ ಅವುಗಳ ಮೇಲೆ ಶಿಖರಗಳೂ ಈ ಬಗೆಯ ಗುಡ್ಡಗಾಡಿನಂತೆ ಇರುತ್ತದೆ. ಆದರಿಂದ ಅದರ ಮೇಲೆ ಬಿದ್ದ ನೀರು ಎಂದೂ ಸ್ಥಿರವಾಗುಳಿಯುವದಿಲ್ಲ ಅದು ಬಿದ್ದ ಕೂಡಲೆ ಎಡಕ್ಕೆ ಅಥವಾ ಬಲಕ್ಕೆ ಹೊರಳಿ ಇಳುಕಲದ ಕಡೆಗೆ ಓಡಹತ್ತುತ್ತದೆ. ಎಷ್ಟೋ ಗುಡ್ಡಗಳ ಮೇಲಿನ ಕೆಲ ವಿಶಿಷ್ಟಭಾಗಗಳನ್ನು ನೋಡಿದರೆ, ಒಂದು ಇಂಚಿನ ಅಂತರದಲ್ಲಿ ಅದರ ಮೇಲೆ ಬಿದ್ದ ನೀರು ಎಡಗಡೆಗೆ ಹೊರಳಿದರೆ ಪಶ್ಚಿಮ ಸಮುದ್ರಕ್ಕೆ ಹೋದೀತು; ಬಲಗಡೆಗೆ ಹೊರಳಿದರೆ ಪೂರ್ವ ಸಮುದ್ರಕ್ಕೆ ತಲುಪೀತು. ಹೆಚ್ಚಿನ ವೇಗದ ಇಂಜನ್ನಿನಂತೆ ಇಂಥ ಮನಸ್ಸಿನವರ ಪ್ರವೃತ್ತಿಯು ಅತಿಶಯೋಕ್ತಿಯ ಕಡೆಗಿರುತ್ತದೆ; ಮತ್ತು ಅದನ್ನು ಮಾಡದ ಹೊರತು ಅವರಿಗೆ ಆತ್ಮಸಾಧನ (Self realization) ಆದಂತೆ ತೋರುವುದೇ ಇಲ್ಲ.

ಇದಕ್ಕೆ ವಿರುದ್ಧವಾಗಿ ಬೇರೆ ಕೆಲವು ಮನಸ್ಸುಗಳು ಚಹದ ಬಸಿಯ ಆಕಾರದಂತಿರುತ್ತವೆ; ಅಂದರೆ ಅವುಗಳ ನಿಲುವಿಕೆಯು ಕಡಿಮೆ ಕಂಡರೂ ಸಂಗ್ರಾಹಕತೆಯ ಗುಣವು ಅವುಗಳಲ್ಲಿ ಹೆಚ್ಚಾಗಿರುತ್ತದೆ. ಅದರ ವಿಸ್ತೀರ್ಣ ಪಂಘದ ಮೇಲೆ ಎಲ್ಲಿ ನೀರು ಬಿದ್ದರೂ ಅದು ಹೊರಗೆ ಹೋಗದೆ, ಒಳಗೇ

ಬಸಿದು ಬಸಿಯುಲ್ಲೇ ಬರುವುದು.

ಇವೆರಡೂ ಪ್ರಕಾರದ ಮನಸ್ಸುಗಳು ಅಶಿಕ್ಷಿತ ಮತ್ತು ಸುಶಿಕ್ಷಿತ ಇವೆರಡೂ ವರ್ಗದಲ್ಲಿ ಬೇಕಾದಷ್ಟು ಕಂಡು ಬರುತ್ತವೆ. ಭೇದವಿಷ್ಟೇ, ಅಶಿಕ್ಷಿತ ಮನುಷ್ಯನು ಶ್ರದ್ಧಾಳುವಿದ್ದದ್ದನ್ನು ಕಂಡರೆ ಆಶ್ಚರ್ಯವೆನಿಸುವದಿಲ್ಲ. ಸುಶಿಕ್ಷಿತನು ಶ್ರದ್ಧಾಳುವಿದ್ದದ್ದನ್ನು ಕಂಡರೆ ಅದೊಂದು ಹೊಸ ಚಮತ್ಕಾರವೇ ಎನಿಸುತ್ತದೆ; ಆದರೆ ಇಪ್ಪತ್ತನೇ ಶತಮಾನದ ಮೂವತ್ತು-ನಾಲ್ವತ್ತರಲ್ಲಿ ಭೌತಿಕಶಾಸ್ತ್ರವು ವಿಕ್ರಮ ಇಲ್ಲವೆ ಪ್ರಬಲವಾಗಿದ್ದರೂ ಸಾಧುಗಳು, ಶರಣಮ್ಮಗಳು ಇವರ ಬಾಲ ಹಿಡಿದು ಅವರ ದಾಸಾನುದಾಸರಾದಂಥ ಹರೆಯದ ತರುಣ-ಸುಶಿಕ್ಷಿತ-ಮಹಾಸುಶಿಕ್ಷಿತ-ರು ಕಾಣುತ್ತಾರೆ. ಅದರಿಂದ ಕೊನೆಗೆ "ಸ್ವಭಾವೋ ದುರತಿಕ್ರಮಃ" ಎಂಬ ನಾಣ್ಣುಡಿಯು ನಿಜವೆನಿಸುತ್ತದೆ.

ನಮ್ಮ ಚಂದೂನ ಪರಿವರ್ತನವು ಎರಡೇ ದಿನಗಳಲ್ಲಾದದ್ದನ್ನು ಕಂಡು ಎಲ್ಲ ಜನರಿಗೂ ಹೀಗೆಯೇ ಏಕೆ ಆಶ್ಚರ್ಯವೆನಿಸಿರಲಿಕ್ಕಿಲ್ಲ! ಆದರೆ ಭೂಕಂಪದಿಂದ ನೀರಿದ್ದಲ್ಲಿ ನೆಲ, ನೆಲವಿದ್ದಲ್ಲಿ ನೀರು ನಿರ್ಮಾಣವಾಗುತ್ತದೆ. ಗುಡ್ಡದಿನ್ನೆಗಳಿದ್ದಲ್ಲಿ ದರಿ ಕಂದರಗಳಾಗುತ್ತವೆ; ಮತ್ತು, ದರಿ ಕಂದರಗಳಿದ್ದಲ್ಲಿ ಗುಡ್ಡ ಪರ್ವತಗಳು ತಲೆತಕ್ಕೊಂಡು ನಿಲ್ಲುತ್ತವೆ.

ಚಂದೂನ ಮನಸ್ಸಿಗುಂಟಾದ ಆಘಾತದಿಂದ ಅದೇ ಬಗೆಯಾಯಿತು. ದಿನಾಲು ಬೆಳಗಾಗುತ್ತಲೆ ಮುಖಕ್ಷೌರಮಾಡಿಕೊಂಡು ಕನ್ನಡಿಯಂತೆ ಮುಖವು ಮಿನುಗಹತ್ತಿದ ಹೊರತು ಯಾವ ಚಂದುವು ತನ್ನ ಕೋಣೆಯಿಂದ ಹೊರಬೀಳುತ್ತಿರಲಿಲ್ಲವೋ, ಅಂಥವನಿಗೆ ಕಳೆದೆರಡು ದಿವಸಗಳಿಂದ ಕ್ಷೌರ ಮಾಡಿಸಿಕೊಳ್ಳುವ ನೆನಪು ಕೂಡ ಆಗಿರಲಿಲ್ಲ. ಮೈಯಲ್ಲಿ ಕಾಣಬೇಕಾದ ಸರಿ ಪಚ್ಚಿ ಸಟೆಯಾಗಿ ಮಾಡಿದ್ದ ಕಾಲರಿನ ಶರ್ಟು ಇರದೆ, ಮಾಸಿ-ಮುದಡಿದ ಅಂಗಿಯನ್ನು ಆತನೀಗ ತೊಡಹತ್ತಿದ್ದನು. ಆತನ ಕುದುರೆಗೀಗ ಗೂಟದ ಸುಖವೇ ಸುಖವು! ಸಿಗರೇಟಿನ ಪೆಟ್ಟಿಗೆಯೊಳಗಿನ ಬೀಡಿಗಳು ಅಲ್ಲಿಯೇ ಉಳಿದವು. ಮದ್ಯದ ಸೀಸೆಗಳ ಹಾರುವಿಕೆಯ ಸಪ್ಪಳವು ಕೇಳದಾಯಿತು. ಆತನು ಹಗಲೆಲ್ಲ ಹೊಸದಾಗಿ ನಿರ್ಮಿಸಿದ ಆ ಮಠದಲ್ಲಿಯೇ ಇರಹತ್ತಿದ್ದನು.

ತಂದೆ-ತಾಯಿಗಳೊಡನಷ್ಟೇ ಅಲ್ಲ; ಬರ ಹೋಗುವವರ ಸಂಗಡವೂ ಆತನ ರೀತಿಯು ಬದಲಾಯಿತು. ಯಾರನ್ನಾದರೂ ಕರೆಯುವಾಗಿನ ಆತನ ಉಚ್ಚ ಧ್ವನಿಯು ಈಗ ಅದೆಷ್ಟೋ ಸೌಮ್ಯವಾಗಿ ಇಳಿದಿತ್ತು. ಲಷ್ಕರೀ ಪದ್ಧತಿಯ ಸಲಾಮು ಹೋಗಿ, ಜೋಡಿಸಿದ ಕೈಗಳ ನಮಸ್ಕಾರ ಬಂತು; ಮತ್ತು ಎರಡನೆಯವರಿಗೆ ಭೆಟ್ಟಿಯಾದಾಗ ಆತನ ಯಾವ ಒಂದು ವಿಶಿಷ್ಟ ತುಚ

ತಿಯ ಪದ್ಧತಿಯಿದ್ದಿತೋ ಇತ್ತೀಚೆಗದು ಬದಲಾಗಿ, ಅದರ ಸ್ಥಳದಲ್ಲಿ ಹೆಚ್ಚು ನಮ್ರತೆಯು ವ್ಯಕ್ತವಾಗಹತ್ತಿತ್ತು. ಒಬ್ಬ ಖೋಡಿ ಟೀಕಾಕಾರನು ಆತನ ಬಗ್ಗೆ ಆಗ:—"ಈ ಆಯ್. ಸಿ. ಎಸ್. ಬ್ಯಾರಿಸ್ಟರರು ನವಮತವಾದಿಗಳೆಂದು ಹಳೇ ಪದ್ಧತಿಯ ವಧೂ-ವರರ ಭೋಜನದೂಟಕ್ಕೆ ಕಾಡು ಲಕ್ಷಣವೆಂದೆನ್ನು ವರು; ಆದರೆ ಅವರೇ ಈಗ ಕದಾಚಿತ್ ಬೇಗನೆ ಗುರುಪ್ರಸಾದವೆಂದು ಗುರು ವಿನ ಎಂಜಲವನ್ನು ಸ್ವತಃ ತಿಂದದ್ದು ಕಂಡುಬಂದೀತು" ಅಂದನು. ಅವನ ಆ ಮಾತಿನೊಳಗಿನ ಅತಿಶಯೋಕ್ತಿಯು ಚಂದೂನ ಪರಿಸ್ಥಿತಿಯಲ್ಲಿ ಆದ ಬದಲಾ ವಣೆಯ ಅತಿಶಯೋಕ್ತಿಗಿಂತ ಖಂಡಿತವಾಗಿಯೂ ಅಧಿಕವಾಗಿರಲಿಲ್ಲ.

ಗುರುಮಹಾರಾಜರು ಮಠದಲ್ಲಿ ಬಂದು ಇರಹತ್ತಿದ ತುಸದಿನಗಳಲ್ಲೀ ಎಲ್ಲ ಸಗುಣಪೂಜೆಯ ಪ್ರಕಾರಗಳೂ ಚಂದೂನಿಂದ ಮಾಡಿಯಾದವು. ಶಿಷ್ಯನು ಮಾಡಬಹುದಾದ ಗುರುವಿನ ಎಲ್ಲ ಕೆಲಸಗಳನ್ನು ಚಂದುವು ಸ್ವಂತ ಕೈಮುಟ್ಟ ಮಾಡಹತ್ತಿ, ಶಿಷ್ಯವರ ಜಂಬೂನಿಗೆ ಹೋರೆಗೇಡಿ (ಬೇಕಾರ) ಯನ್ನಾಗಗೊಳಿಸಿದನು. ಚಂದುವು ಗುರುಮಹಾರಾಜರ ಬಟ್ಟೆತೊಳೆಯುವ ದನ್ನು ಮೊದಲು ಮಾಡಿದನು. ಆ ಬೈರಾಗಿಯ ಬಟ್ಟೆಗಳನ್ನು ಅವನು ವಿಲಾ ಯತೀ ಸುಗಂಧಯುಕ್ತಸಬಕಾರಹಚ್ಚಿ ತೊಳೆಯುವನು. ಅವುಗಳನ್ನು ಹಿಡಿದು ಕೊಂಡು ಅವರ ಬಚ್ಚಲ ಮನೆಯ ಬಾಗಿಲಲ್ಲಿ ತತ್ಪರತೆಯಿಂದ ಬಂದು ನಿಲ್ಲುವನು; ಮತ್ತು ಗುರುಗಳು ಬಾಗಿಲ ತೆರೆದ ಕೂಡಲೆ ಅವುಗಳನ್ನು ಮುಂದೆ ಮಾಡುವನು. ಅವರ ಸ್ನಾನಕ್ಕಾಗಿ ತಾನೇ ನೀರು ಸೇದಿಕೊಡು ವನು; ಮತ್ತು ಒಮ್ಮೊಮ್ಮೆ ತನ್ನ ಕೈಯಿಂದಲೇ ಅವರ ಸರ್ವಾಂಗ ತಿಕ್ಕುವ ಹಟಹಿಡಿಯುವನು. ಗುರುಮಹಾರಾಜರು ಪೂಜೆಗೆ ಕುಳಿತರೆಂದರೆ, ಅವನು ಕೈಯಲ್ಲಿ ಹೂವಿನ ಬುಟ್ಟಿಯನ್ನು ಹಿಡಕೊಂಡು ನಿಲ್ಲುವನು; ಮತ್ತು ಅವರು ಕೈಮುಂದೆ ಮಾಡುತ್ತಲೇ ಒಂದೊಂದು ಹೂವನ್ನು ಆರಿಸಿ ತೆಗೆದು ಅವರ ಬೊಗಸೆಯಲ್ಲಿ ಚೆಲ್ಲುವನು. ಚಂದೂನ ಆ ಗುರುಮಹಾರಾಜರಿಗೆ ಪೂಜಾ ಮಂತ್ರಗಳು ಹೆಚ್ಚಾಗಿ ಬರುತ್ತಿರಲಿಲ್ಲ; ಆದರೂ ಧ್ಯಾನಕ್ಕೆಂದು ಅವರು ಕಣ್ಣುಮುಚ್ಚಿದರೆಂದರೆ, ಎಷ್ಟೋ ಸಮಯವನ್ನು ನಿಷ್ಕ್ರಿಯತೆಯಲ್ಲಿ ಕಳೆದು ಆ ಪೂಜಾವಿಧಿಯನ್ನು ಸುಮ್ಮನೆ ಉದ್ದುದ್ದ ಬೆಳಸಬರುತ್ತಿತ್ತು. ಮಹಾರಾಜರು ಕಣ್ಣುಮುಚ್ಚಿದರೆಂದರೆ, ಚಂದುವು ಅವರೆದುರಿಗೆ ನಿಂತು ಕೊಂಡು ಅವರ ಆ ಧ್ಯಾನಮುದ್ರೆಯ ಕಡೆಗೆ ದೃಷ್ಟಿಯಿರಿಸಿ ತಟಸ್ಥ ನಾಗುವನು. ಅವರ ತುಟಿ, ರೆಪ್ಪೆ, ಹುಬ್ಬು ಇವುಗಳಾವವಾದರೂ ಕೊಂಚ ಅಲ್ಲಾಡಿದರೂ ಸಾಕು; ಆ ಕ್ರಿಯೆಗೆ ಯಾವುದೋ ಆಧ್ಯಾತ್ಮಿಕ ಗೂಢ ಅರ್ಥ

ವಿದೆಯೆಂದು ಆತನಿಗನಿಸುವದು; ಆದರೆ ಅದನ್ನು ತಿಳಕೊಳ್ಳಲಿಕ್ಕೆ ತಾನು ಅಪಾತ್ರನಿದ್ದ ಬಗ್ಗೆ ಮಾತ್ರ ಅವನಿಗೆ ದುಃಖವಾಗುತ್ತಿತ್ತು.

ಊಟದ್ದಾದರೂ ಹಾಗೆಯೇ ಊಟದ ಪದಾರ್ಥಗಳನ್ನು ಚಂದುವು ಸ್ವತಃ ತಾನೇ ತಂದು ಗುರುಮಹಾರಾಜರ ತಟ್ಟೆಯಲ್ಲಿ ಬಡಿಸುವನು. ತನ್ನ ಕೈಯಿಂದಲೇ ಮಹಾರಾಜರಿಗೆ ಉಣಿಸಲಿಕ್ಕೆ ದೊರೆತರೆ ಅದು ಆತನಿಗೆ ಬೇಕೇ ಆಗಿತ್ತು, ಆದರೆ ಮಹಾರಾಜರಿಗೇ ಆ ಬಗ್ಗೆ ನಾಚಿಕೆಯೆನಿಸಿ, ಅವರು ಅವನಿಗೆ ಹಾಗೆ ಮಾಡಗೊಟ್ಟಿರಲಿಲ್ಲವಿಷ್ಟೇ; ಮತ್ತು ಆ ಭೋಜನೋತ್ಸವದ ಕಾಲಕ್ಕೆ ಕೈಗಳಿಗೆ ಕೆಲಸವಿಲ್ಲೆಂದು ಅವನು ಕೈಯಲ್ಲಿ ಬೀಸಣಿಕೆ ಹಿಡಕೊಂಡು ಅವರಿಗೆ ಗಾಳಿ ಬೀಸುತ್ತ ಮತ್ತು ಪರ್ಯಾಯದಿಂದ ತಟ್ಟೆಯ ಮೇಲಿನ ನೊಣಗಳನ್ನು ನಿವಾರಿಸುತ್ತ ನಿಂತುಕೊಳ್ಳುವನು. ಮಹಾರಾಜರು ಕೈ ತೊಳೆಯಲಿಕ್ಕೆ ಹೋದರೆಂದರೆ ಅವನೂ ಅವರೊಡನೆ ಅವರ ಕೈಮೇಲೆ ನೀರು ಹಣಿಸಲಿಕ್ಕೆ ಹೋಗುವನು; ಆದರೆ ಅವರು ಎಲೆಯ ಮೇಲಿಂದೆದ್ದು ಹೊರಗೆ ಹೊರಡುತ್ತಲೇ ಅವರ ಹಾಗು ಇನ್ನಿತರರ ಕಣ್ಣು ತಪ್ಪಿಸಿ, ಅವರ ಎಲೆಯೊಳಗಿನ ಯಾವದೊಂದು ಎಂಜಲ ತುತ್ತನ್ನು ತನ್ನ ಬಾಯೊಳಗೆ ಚಲ್ಲಿಕೊಳ್ಳಲಿಕ್ಕೆ ಆತನು ಎಷ್ಟು ತವಕಪಡುತ್ತಿದ್ದನೋ ಅದನ್ನು ಹೇಳಲಾಸಲ್ಲ! ಎಂಜಲ ತಿನ್ನುವದು ಮನಸ್ಸಿನ ಇಚ್ಛೆ; ಆದರೆ ಹೊರಗೆ ನಾಚಿಕೆ. ಹೊಟ್ಟೆ ತುಂಬಲಿಕ್ಕೆಂದು ತಿನ್ನುವ ಪದಾರ್ಥಗಳು ಚಂದುವಿಗೇನು ಕಡಿಮೆಯಿದ್ದವೇ? ಮತ್ತೂ ಅದೊಂದೇ ಎಂಜಲ ತುತ್ತಿನಿಂದ ಆತನ ಹೊಟ್ಟೆಯು ಅದೆಷ್ಟು ತುಂಬೀತು! ಆದರೂ ಗುರುವಿನ ಎಂಜಲತುತ್ತಿನ ಗುಣವೇನಂದರೆ, ಅದರಿಂದ ಜಠರದ್ದಲ್ಲದಿದ್ದರೂ ಆತ್ಮದ ಕ್ಷುಧೆಯು ಶಾಂತವಾಗುತ್ತದೆ. ತಾದಾತ್ಮ್ಯವೆಂಬುದೇ ಗುರುಭಕ್ತಿಯ ಧ್ಯೇಯ ಗುರುವು ಶಿಷ್ಯನನ್ನು 'ಕುರುಡೀ ಕುಠಾರದ ಹುಳವು ಎಲ್ಲ ಬಗೆಯ ಕೀಟಗಳನ್ನು ತಂದು ತನ್ನಂತೆಯೇ ಮಾಡಿಕೊಳ್ಳುತ್ತವೆ'ಂದು ಯಾವ ಸಾಧು-ಸತ್ಪುರುಷರು ಅಂದರೂ ಹಾಗೆ ಮಾಡಿಕೊಳ್ಳುವ ಗುರುವು ಮಾತ್ರ ಕ್ವಚಿತ್ತಾಗಿಯೇ ದೊರಕುವನೆಂಬದು ಸುಳ್ಳಲ್ಲ; ಮತ್ತು ಸ್ತ್ರೀವಿಷಯಕ ಜೀವನದಲ್ಲಿ ಪ್ರಣಯಾರಾಧನೆಗೆ (ಕೋರ್ಟಶಿಪ್ಪಿಗೆ) ಯಾವ ಮಹತ್ವವಿದೆಯೋ ಗುರೂಪಾಸನೆಯಲ್ಲಿ ಸಗುಣ ಪೂಜೆಗೆ ಅದೇ ಮಹತ್ವವಿರುವದರಿಂದ, ಅದು ಎಷ್ಟು ಹೆಚ್ಚೀತೋ ಅಷ್ಟು ಹೆಚ್ಚು ಆನಂದವನ್ನು ಶಿಷ್ಯನಿಗೆ ಲೂಟಿ ಮಾಡಲಿಕ್ಕೆ ಸಿಗುತ್ತದೆ. ಗುರುವು ಶಿಷ್ಯನನ್ನು ಒಮ್ಮೆಲೆ ತನ್ನಂತೆ ಮಾಡಿಕೊಂಡರೆ, ಗುರು ಪ್ರಣಯಾರಾಧನದ ಆನಂದವೆಲ್ಲಿ ಸಿಗಬೇಕು?

ಭೋಜನವು ಸುಗ್ರಾಸ ಹಾಗು ಯಥೇಚ್ಛವಾಗುತ್ತಿದ್ದದರಿಂದ ಆ ಮೇಳಿ

ಗುರುಮಹಾರಾಜರಿಗೆ ಬೇಗನೆ ನಿದ್ರಾಸಮಾಧಿಹತ್ತುತ್ತಿತ್ತು. ಆ ಕಾಲಕ್ಕೆ ಮಹಾರಾಜರು ಕಣ್ಣುಮುಚ್ಚಿಕೊಂಡು ಗೊರಕೆಹೊಡೆಯುವ ವರೆಗೆ ಚಂದುವು ಅವರ ಪಾದಸಂವಾಹನ ನಡೆಸುವನು; ಮತ್ತು ನಿದ್ದೆಯಲ್ಲಿ ಅವರ ಬಾಯಿಂದ ಯಾವ ಉದ್ಗಾರ ಹೊರಡುವವೆಂಬ ಕಡೆಗೂ ಆತನ ಲಕ್ಷ್ಯವಿರುತ್ತಿತ್ತು. ಆತ್ಮದ ನಿಜವಾದ ಆವಿಷ್ಕರಣವು ನಿದ್ರಾವಧಿಯಲ್ಲೇ ಆಗುತ್ತದೆ; ಮತ್ತು ಆಗ ಮನುಷ್ಯನು ಏನೇನು ಮಾತಾಡುವನೋ ಅದು ಸಂಪೂರ್ಣ ಸತ್ಯವಿರುತ್ತದೆಂಬದನ್ನು ಚಂದುವು ಹಲವು ಮಾನಸಶಾಸ್ತ್ರದ ಪುಸ್ತಕಗಳಲ್ಲಿ ಓದಿದ್ದನು. ಅವನು ತಿಳಿಯಲು ತವಕಪಡುತ್ತಿದ್ದುದೇನಂದರೆ, ಮೇರಿಯು ಸತ್ತು ಸ್ವರ್ಗವನ್ನೈದಿದಳು; ಆದರೆ ಅಲ್ಲಿ ಆಕೆಗೆ ಸದ್ಗತಿ ದೊರಕಿದೆಯೋ ಇಲ್ಲವೋ? ಅಲ್ಲದೆ ಇದಕ್ಕೂ ಮಹತ್ವದ ಸಂಗತಿಯೆಂದರೆ, ಅವಳು ಆ ದಿವ್ಯಸ್ಥಿತಿಯಲ್ಲಿ ತನ್ನನ್ನು ನೆನೆಸುವಳೋ ಇಲ್ಲವೋ? 'ಅವಳು ಸಾಯುವಾಗ ಅವಳ ತುಟಿಯಲ್ಲಿ ನಿಮ್ಮ ಹೆಸರೇ ಇತ್ತು' ಎಂದು ಆ ತಂತಿಯಲ್ಲಿರಲಿಲ್ಲವೇ? ಅಂತಜ್ಞಾ೯ನಿಗಳಾದ ಗುರುಮಹಾರಾಜರಿಗೆ ಇದರ ಪತ್ತೆಹತ್ತುವದು ಶಕ್ಯವಿದೆಯೆಂದು ಆತನಿಗೆ ಅನಿಸುತ್ತಿತ್ತು; ಆದರೆ ಆ ಬಗ್ಗೆ ಆತನು ಪೂರ್ಣ ನಿರಾಶಪಟ್ಟಿದ್ದನು. 'ಮೇರೀ ವೊಡಹಾಊಸ' ಎಂಬ ಶಬ್ದವು ತಪ್ಪಿಕೂಡ ಮಹಾರಾಜರ ಬಾಯಿಂದ ಎಂದೂ ಹೊರಟಿರಲಿಲ್ಲ; ಮತ್ತು ಅವರ ಮುಖದಿಂದ ಯಾವಶಬ್ದಗಳು ಹೊರಡುತ್ತಿದ್ದವೋ ಅವು ಚಂದುವಿಗೆ ತಿಳಿಯುತ್ತಿರಲಿಲ್ಲ. ಉದಾಹರಣೆಗಾಗಿ—ಫತ್ತರಗಡ, ಸರಕಾರೀ ತಿಜೋರಿ, ರಾಮಪ್ರಸಾದ ಮಾರವಾಡಿಯ ಅಂಗಡಿ, ಮಥುರಾ ವೇಶ್ಯೆ, ಸಂಸ್ಥಾನೀ ಪೋಲೀಸ, ತುರಂಗವಾರಂಟ ಮುಂತಾದ ಶಬ್ದಗಳು ಹೊರಬೀಳುತ್ತಿದ್ದವು; ಆದರೆ ಚಂದುವೆನ್ನುವನು:—"ಯೋಗ್ಯವೇ ಇದೆ. ಮಹಾರಾಜರ ಅಂತಜ್ಞಾ೯ನಕ್ಕೆ ನನ್ನದೊಂದೇ ವಿಷಯವು ಹೇಗಿದ್ದೀತು? ಎಚ್ಚತ್ತಿರುವಾಗ ದೇಹಕ್ಕೆ ಎರಡೇ ಕಣ್ಣುಗಳು! ಆದರೆ ಸಮಾಧಿಯಲ್ಲಿ ಆತ್ಮನಿಗೆ ಅನಂತ ಕಣ್ಣುಗಳು! ಆದರೂ ಆ ಹಲವು ಕಣ್ಣುಗಳಿಂದ ಸಂಗ್ರಹಿಸಿದ ಜ್ಞಾನವನ್ನು ಬಾಯಿಂದ ಹೊರಬೀಳಬೇಕಾದರೆ ಪಾಪ! ನಾಲಿಗೆ ಮಾತ್ರ ಒಂದೇ ಇರುವದಲ್ಲವೆ? ಗುರುಮಹಾರಾಜರಾದ ಮಾತ್ರಕ್ಕೆ ಅವರಿಗೆ ಬೇರೆ ಸಹಸ್ರ ಜಿಹ್ವೆಗಳಿರುವವೇ?

ಮೃತ ಮೇರಿಯ ಆತ್ಮದ ಸಂಬಂಧವಾಗಿ ಗುರುಮಹಾರಾಜರಿಂದ ತನಗೆ ಬೇಕಾಗಿದ್ದ ಮಾಹಿತಿ ಸಿಗುವ ಬಗ್ಗೆ ಚಂದುವಿಗೆ ನಿರಾಶೆಯಾಯಿತು; ಅದಿಲ್ಲದಿದ್ದರೂ ಅವಳ ಅಂತ್ಯಕಾಲದ ಸವಿಸ್ತರ ವರ್ಣನೆ ತಿಳಿದರೆ ಸ್ವಲ್ಪಾದರೂ ಸಮಾಧಾನ ಲಭಿಸೀತೆಂಬ ಆಶೆಯಿಂದ ಆತನು ಇತರ ಪ್ರಯತ್ನಗಳನ್ನು ನಡೆ

ಸಿದನು. ಅದರ ಫಲಶ್ರುತಿಯು ಮುಂದೆ ತಿಳಿದೀತು.

ಗುರುಮಹಾರಾಜರೆದುರು ಚಂದುವು ಕೈಜೋಡಿಸಿಕೊಂಡು ಕುಳಿತಾಗ ಆತನ ವಿಚಾರಗಳೇನಿದ್ದವು? ಇಡೀ ಆಯುಷ್ಯದಲ್ಲಿ ನಮಗಂಥ ಅನುಭವವಿರದ್ದ ರಿಂದ, ಆ ಬಗ್ಗೆ ನಮಗೆ ಬರಿಯ ಕಲ್ಪನೆಯನ್ನಷ್ಟೇ ಮಾಡಬಂದೀತು. ನಮ್ಮ ಮೊದಲನೇ ಕಲ್ಪನೆಯೆಂದರೆ, ಸನಾತನೀಯ ಹಿಂದು ಪದ್ಧತಿಯ ಲಗ್ನದಲ್ಲಿ ಅಂತಃಪಟವನ್ನು ಜಗ್ಗಿಕೊಂಡ ಬಳಿಕ ಮುಂದಿನ ವಿಧಿಗಳು ಪ್ರಾರಂಭವಾಗುವ ಮೊದಲು ಪತಿ-ಪತ್ನಿಯರು ಒಬ್ಬರ ಎದುರೊಬ್ಬರು ಮಣೆಗಳ ಮೇಲೆ ಸುಮ್ಮನೆ ಕುಳಿತಿರುತ್ತಾರೆ. ಆಗ ಪತ್ನಿಯ ಮನಸ್ಸಿನಲ್ಲಿ ಪತಿಯ ವಿಷಯಕವಾಗಿ ಯಾವ ವಿಚಾರಗಳು ಬರುತ್ತಿರಬಹುದೋ, ಅದೇ ಬಗೆಯ ವಿಚಾರಗಳು ಹೊಸದಾಗಿ ಮಾಡಿಕೊಂಡ ಗುರುವಿನ ಬಗ್ಗೆ ಭಕ್ತನ ಇಲ್ಲವೆ ಶಿಷ್ಯನ ಮನಸ್ಸಿನಲ್ಲಿ ಬರುತ್ತಿರ ಬಹುದು. ಗುರುಮಹಾರಾಜರು ಸರ್ವಗುಣಸಂಪನ್ನರು. ಎಲ್ಲ ಬಗೆಯ ನಿಗ್ರಹಾನುಗ್ರಹದ ಅಧಿಕಾರವುಳ್ಳವರು. ಅದಕ್ಕೆ ವಿಪರೀತವಾಗಿ ತಾನು ಗುಣ ಹೀನ, ಶಕ್ತಿಹೀನ, ಕೇವಲ ಅನುಗ್ರಹಾಕಾಂಕ್ಷಿಯು. ಇನ್ನು ಮುಂದೆ ಅವರೇ ತನ್ನ ಜೀವಿತಕ್ಕೆ ಒಳ್ಳೇ ಮಾರ್ಗದೋರುವವರು ಇದೆಲ್ಲದರ ನಿಷ್ಕರ್ಷ ವಿಷ್ಟೇ, ಅವರು ಹೇಳಬೇಕು, ತಾನು ಕೇಳಬೇಕು! ಅವರು ದಾರಿ ದೋರ ಬೇಕು, ತಾನು ಆ ದಾರಿ ಹಿಡಿಯಬೇಕು! ಏನು, ಎಂತು ಎಂದು ವಿಚಾರಿಸುವ ಅಧಿಕಾರವು ತನ್ನದಾಗಿಲ್ಲ. ಮೊಟ್ಟಮೊದಲೇ ಅದನ್ನು ನಾನು ಕಳಕೊಂಡು ಕುಳಿತಿರುವೆನು? ಬುದ್ಧಿಯು ಚಲಿಸುತ್ತಿದ್ದರೂ ಚಲಿಸಕೂಡದು; ಕಣ್ಣಿದ್ದರೂ ನೋಡಬಾರದು; ಕಿವಿಗಳಿದ್ದರೂ ಕೇಳಬಾರದು. ಲಗಾಮಿನ ಸಂಜ್ಞೆಯಿಂದ ನಡೆಯುವ, ಕಣ್ಣಿಗೆ ಕಣ್ಕಟ್ಟು ಹಾಕಿರುವ ಕುದುರೆಯು ನಡೆಯುವಂತೆ ಅಥವಾ ಓಡುವಂತೆ ತಾನು ಚಲಿಸಬೇಕಾಗಿದೆ; ಇಲ್ಲವೆ ಓಡಬೇಕಾಗಿದೆ!

ಆದರೆ ಲಗ್ನದ ಹೆಂಡತಿಯಾದರೂ ಬರಬರುತ್ತ ಚಿಕಿತ್ಸಕಳಾಗುವಳ ಲ್ಲವೆ? ತನ್ನ ಬುದ್ಧಿಯನ್ನು ಚಲಿಸಹತ್ತುತ್ತಾಳಲ್ಲವೇ? ಕುದುರೆಯಾದರೂ ಮಕ ರಾಟಿಕೆ ಮಾಡುವುದಿಲ್ಲವೆ? ಕೇವಲ ಕುರುಡುಭಾವನೆಯದೆಷ್ಟು ದಿನ ಇದ್ದೀತು? ನೀರಲ್ಲಿ ಹತ್ತಿಕ್ಕಿ ಮುಣುಗಿಸಿದ ಕಟ್ಟಿಗೆಯು ಕೆಲಹೊತ್ತಾದ ಬಳಿಕ ಮೇಲೆ ಬರತಕ್ಕುದೇ! ಪ್ರೇಮದಂತೆ ಗುರುಭಕ್ತಿಯ ಉಬ್ಬಾದರೂ ಕಾಲಾಂತರದಲ್ಲಿ ತೀರ ಬತ್ತಿಹೋಗದಿದ್ದರೂ ಕಡಿಮೆ ಕಡಿಮೆಯಾಗುತ್ತ ಹೋಗತಕ್ಕುದೇ. ದಂಡಿನ ನಾಯಕ ಇಲ್ಲವೆ ರಾಜಕೀಯ ಮುಂದಾಳು ಇವರುಗಳಂತೆಯೇ ಗುರುವಿನ ಸ್ಥಿತಿಯಾದರೂ ಇರುತ್ತದೆ; ಅವರು ಒಮ್ಮೆ ಮಾಡಿದ ಪರಾಕ್ರಮವು ಕೆಲ ದಿನ ಜನರನ್ನು ಆಕರ್ಷಿಸಿಕೊಂಡಿರುತ್ತದೆ; ಆದರೆ ಆ ಆಕರ್ಷಕತೆಯು ನಿರಂತರವಾ

ಗುಳಿಯಬೇಕಾದರೆ, ಅವರು ನಡುನಡುವೆ ಹೊಸಪರಾಕ್ರಮಗಳನ್ನು ಮಾಡಲೇ ಬೇಕಾಗುವದು. ಕಾಲಾಂತರದಲ್ಲಿ ಜನರು ಮರೆಯದಿರುವ ಯಾವ ಗುಣವೂ ಜಗತ್ತಿನಲ್ಲಿಲ್ಲ. ಕಬ್ಬಿಣದಂಥ ಹೀನ ದ್ರವ್ಯಗಳೂ ಕುಲಿಮೆಯೊಳಗಿಂದ ಹೊರ ಬಿದ್ದವೆಂದರೆ ಸತೇಜವಾಗಿ ಕಾಣಿಸುತ್ತವೆ; ಆದರೂ ಅವುಗಳಿಗೆ ಜಂಗುಹಿಡಿಯ ಲಿಕ್ಕೆ ತಡಹಿಡಿಯುವದಿಲ್ಲ. ಬಂಗಾರ, ಬೆಳ್ಳಿ ಮುಂತಾದ ಉಚ್ಚ ದ್ರವ್ಯಗಳಿಗೆ ಜಂಗು ಹಿಡಿಯದಿದ್ದರೂ ಕಾಲಾಂತರದಿಂದ ಮಲಿನವಾಗೇ ಆಗುವವು. ಸಂಪ ತ್ತಿಯ ಬಂಡವಾಳವನ್ನು ಬಡ್ಡಿಗೆ ಹಚ್ಚದಿದ್ದರೆ ಹಾಗು ಅದರಿಂದ ಹೊಸ ಉತ್ಪಾ ದನವೇನೂ ಆಗದಿದ್ದರೆ ಅದು ಮೆಲ್ಲಮೆಲ್ಲನೆ ಖರ್ಚಾಗಿ ತೀರಿಹೋಗತಕ್ಕದ್ದೇ. ಒಮ್ಮೆಯೇ ಶ್ರದ್ಧೆಯನ್ನುಂಟು ಮಾಡುವ ಗುರುವಿನ ಪ್ರಭಾವದ ಅವಸ್ಥೆ ಯಾದರೂ ಹೀಗೇಯೇ ಆಗುತ್ತದೆ. ಮೊದಲನೇ ಶ್ರದ್ಧೆಯು ಯಾವ ದೈವೀ ಅಥವಾ ಸಾಮಾನ್ಯವಾದ ಲೋಕೋತ್ತರ ಗುಣದಿಂದ ಶಿಷ್ಯನಲ್ಲಿ ಉಂಟಾಗಿ ರುವುದೋ, ಅದರ ಪ್ರತ್ಯಯುವು ಬೇರೆ ಬೇರೆ ಪ್ರಸಂಗಗಳಲ್ಲಿ ಮತ್ತೆ ಶಿಷ್ಯನಿಗುಂ ಟಾಗಬೇಕಾಗುತ್ತದೆ. ಇಲ್ಲದಿದ್ದರೆ—!!

ಚಂದೂನ ಗುರುಮಹಾರಾಜರಲ್ಲಿ ಅದಾವ ದೈವೀ ಗುಣವಿದ್ದಿತೆಂದು ಅವರ ಪ್ರಭಾವವು ಆತನ ಮನಸ್ಸಿನ ಮೇಲೆ ಅಖಂಡವಾಗುಳಿದೀತು? ಮಿದು ಳಿನ ಮೇಲೆ ಆಘಾತವಾದುದರಿಂದ ಮನುಷ್ಯನು ಒಮ್ಮೆಲೆ ಸುಂದ ಬೀಳುತ್ತಾನೆ; ಆದರೆ ಕೆಲ ಕಾಲದ ಮೇಲೆ ತನ್ನಷ್ಟಕ್ಕೆ ತಾನೇ ಇಲ್ಲವೆ ಕೆಲ ಉಪಚಾರಗಳಿಂದ ಅವನು ಸ್ಮೃತಿ ಹೊಂದಿಯೇ ಹೊಂದುವನು. ಮೇರಿಯ ಮೃತ್ಯುವಿನ ವಾರ್ತೆಯ ಆಘಾತವು ಚಂದೂನ ಮಿದುಳಿನ ಮೇಲೆ ಆಯಿತು; ಮತ್ತು ಗುರುಮಹಾ ರಾಜರಿಗೆ ಅಂತರ್ಜ್ಞಾನದಿಂದ ಆ ಸಾವಿನ ಭವಿಷ್ಯವು ತಿಳಿದಿರಬೇಕೆಂದು ಅವರ ಬಗ್ಗೆ ಆತನಿಗೆ ಅದ್ಭುತತನವೆನಿಸಿತು; ಆದರೆ ಆ ಭಾವನೆಯು ಸ್ಥಿರವಿರಲಿಕ್ಕೆ ಆ ಅದ್ಭುತ ಶಕ್ತಿಯ ಪ್ರಯೋಗದ ಉಪಯೋಗವು ಮೇಲಿಂದ ಮೇಲಾಗಲಿಕ್ಕೆ ಬೇಡವೇ? ಆ ಬಳಿಕ ಆ ಭವಿಷ್ಯದಂತಹ ಮತ್ತೆ ಒಂದಾದರೂ ಭವಿಷ್ಯ (ಚಂದೂಲಾಲನ ಜೀವಾಳಕ್ಕೆ ಸಂಬಂಧಿಸಿದ್ದು)ವನ್ನು ಗುರುಮಹಾರಾಜರು ವರ್ತಿಸಿದ್ದರೆ, ಭವಿಷ್ಯ ಹೇಳುವ ಅವರ ಶಕ್ತಿಯು ಪ್ರಭಾವಿಯಾಗಿವೆ, ಖಾತ್ರಿಯ ದಾಗಿದೆ ಎಂದು ಚಂದುವಿಗೆ ಕಂಡುಬರುತ್ತಿತ್ತು. ಇನ್ನು ಎರಡೇ ಉದಾಹರಣೆ ಗಳಿಂದ ಯಾವ ಸಿದ್ಧಾಂತವೂ ಸಿದ್ಧವಾಗುವದಿಲ್ಲೆಂಬದು ನಿಜವು; ಆದರೂ ಒಂದಕ್ಕಿಂತ ಎರಡು ಉದಾಹರಣಗಳ ಪ್ರತ್ಯಯವು ಹೆಚ್ಚು ವಿಶ್ವಾಸ ಉಂಟಾಗಲಿಕ್ಕೆ ಕಾರಣವಾಗುತ್ತದೆ. ಮಹಾರಾಜರು ವರ್ತಿಸಿದ ಹೊಸ ಭವಿಷ್ಯ ವು ದುಃಖಾತ್ಮಕವಾಗಿರದೆ, ಸುಖಾತ್ಮಕವಾಗಿದ್ದರೂ ನಡೆಯುತ್ತಿತ್ತು. ಏನಾ

ದರೂ ಹೊಸ ಭವಿಷ್ಯವು ಬೇಕೇ ಬೇಕು. ಹಾಗಾಗದಿದ್ದರೆ ಯಾವ ಒಂದಕ್ಕೆ ಭವಿಷ್ಯವೆಂದು ಮೊದಲು ಹೇಳಲಾಯಿತೋ ಅದು ಸಾದಾ ಯೋಗಾಯೋಗ ವಿರಲಿಕ್ಕಿಲ್ಲೆಂದು ಯಾರು ಹೇಳಬೇಕು? ಕಾಗೆ ಕೂರಲಿಕ್ಕೂ ಟೊಂಗೆ ಮುರಿಯ ಲಿಕ್ಕೂ ಗಂಟೇಕೆ ಬಿದ್ದಿರಬಾರದು? ಎಂಬ ಸಂಶಯವುಂಟಾಗುವ ಸಂಭವವಿದೆ.

ಆದರೆ ಗುರುಮಹಾರಾಜರು ನಂದಭುವನದಲ್ಲಿ ಬಂದಿರಹತ್ತಿದಂದಿನಿಂದ ಅವರು ಮತ್ತೊಂದು ಭವಿಷ್ಯ ಹೇಳುವ ಯೋಗ ಕೂಡಿಬರಲಿಲ್ಲ; ಚಂದೂನ ಶ್ರದ್ಧೆಗೆ ಬೀಳಬೇಕಾಗಿದ್ದ ನೀರು-ಗೊಬ್ಬರಗಳು ಬೀಳಲಿಲ್ಲ. ಅದಿರಲಿ. ಮೇರಿ ಯ ಮೃತ್ಯುವಿನ ಭವಿಷ್ಯವು ಅವರಿಗೆ ಅಂತರ್ಜ್ಞಾನದಿಂದ ತಿಳಿದಿರಬಹುದು; ಆದರೆ ಸಾವನ್ನುಂಟು ಮಾಡುವ ಕರ್ತವ್ಯಶಕ್ತಿಯೇನೂ ಗುರುಮಹಾರಾಜರ ದಲ್ಲ; ಅವರ ಇಚ್ಛಾಶಕ್ತಿಯ ಸಂಬಂಧವು ಅದರಲ್ಲೇನೂ ಬರುತ್ತಿರಲಿಲ್ಲ. ಆ ಸಾವನ್ನು ದೇವರು ಉಂಟು ಮಾಡಿದನು. ಆ ದೇವರೇ ಚಂದೂನ ಅಪರಾಧದ ನ್ಯಾಯನಿರ್ಣಯ ಮಾಡುವ ಹಾಗು ಶಿಕ್ಷಿಸುವ ಸಮರ್ಥ ನ್ಯಾಯಾಧೀಶನಾಗಿದ್ದನು. ಗುರುಮಹಾರಾಜರು ಆಗ ಮಾಡಿದ್ದೇನಂದರೆ, ಯಾವದು ಲೌಕಿಕದಲ್ಲಿ ಹಲವು ಸಾರೆ ಕಂಡುಬರುವದೋ, ಅಂದರೆ ಹೀಗೆ: ಯಾವುದೊಂದು ನ್ಯಾಯ ಸಭೆಯಲ್ಲಿ ಯಥಾವಿಧಿಯಿಂದ ಪ್ರಕಟವಾಗುವ ಮೊದಲೇ ನ್ಯಾಯಾಧೀಶನ ಬರೆಹದ ನಿರ್ಣಯವು ಮುಂಗಡ ನೋಡಲಿಕ್ಕೆ ದೊರೆಯುವ ಶಿರಸ್ತೆದಾರನು ಲಂಚ ತಿಂದು ಇಲ್ಲವೆ ಮೈತ್ರಿಗಾಗಿ ಆ ನಿರ್ಣ ಯದ ವರದಿಯನ್ನು ಯಾರಿಗಾದರೂ ಖಾಸಗೀ ರೀತಿಯಿಂದ ತಿಳಿಸುವಂತೆ, ಮೇರಿಯ ಮೃತ್ಯುವಿನ ವಾರ್ತೆಯನ್ನು ಚಂದುವಿಗೆ ಕೇವಲ "ನ್ಯೂಜ ಬಿಫೋರ ಧೀ ಮೇಲ" ಎಂದು ಗುರುಮಹಾರಾಜರು ತಿಳಿಸಿದರು.

ಇನ್ನು ಅಪರಾಧದ ದೃಷ್ಟಿಯಿಂದ ಶಿಕ್ಷೆಯನ್ನು ನೋಡಿದರೂ ಚಂದುವು ಅಂಥ ಅಪರಾಧಗಳನ್ನು ಆವೇಕೆ ಆಗಾಗ್ಗೆ ಮಾಡುವನು! ಆತನು ಅಹಿಂಸೆಯ ವ್ರತವನ್ನೇ ಹಿಡಿದಿದ್ದನು. ಅಂದಬಳಿಕ ಆತನಿಂದ ಹಿಂಸೆಯ ಅಪರಾಧವು ಪುನಃ ಘಟಿಸುವದೇ ಶಕ್ಯವಿರಲಿಲ್ಲ; ಮತ್ತು ಅದಿಲ್ಲವೆಂದು ಶಿಕ್ಷೆಯೂ ಇಲ್ಲ. ಹಾಗು ಶಿಕ್ಷೆಯಿಲ್ಲೆಂದು ಮುಂಗಡ ಭವಿಷ್ಯ ವರ್ತಿಸಿ ತಿಳಿಸತಕ್ಕಂಥಹದೇನೂ ಇಲ್ಲ. ಮೇರಿಯ ಮೃತ್ಯುವು ಒಮ್ಮೆಯೇ ಆಗತಕ್ಕ ಸಂಗತಿಯು; ಅವಳ ಸಂಬಂಧದಲ್ಲಿ ಹಾಗೆ ಮತ್ತೆ ನಡೆಯುವ ಸಂಭವವೇ ಇರಲಿಲ್ಲ. ಅದಕ್ಕಿಂತ ತುಸ ಕಡಿಮೆ ಮಹತ್ವದ ಸಂಗತಿಯೆಂದರೆ, ಆಯ್ ಸಿ. ಎಸ್. ಪರೀಕ್ಷೆ ಪಾಸಾ ಗುವದು ಅದಂತೂ ಪಾಸಾಯಿತು. ದೇವರು ಆತನನ್ನು ನಾಪಾಸ ಮಾಡ ಲಿಲ್ಲ. ಚಂದುವು ತನ್ನ ಮನಸ್ಸಿನಲ್ಲಿ ಆ ಹಾನಿಯಲ್ಲಿ ಈ ಲಾಭವನ್ನು ವಜಾ

ಕಳೆದು ಲೆಕ್ಕ ಹಾಕಿದ್ದರೆ ಅದಕ್ಕೆ ಯಾರು ತಪ್ಪೆಂದಾರು? ಲಾಭಹಾನಿಯು ಬೇರೆ ಬಾಬುಗಳಿದ್ದರೂ ಚಂದೂನ ದೃಷ್ಟಿಯಿಂದ ಅವು ಅಷ್ಟು ಮಹತ್ವದ ವಾಗಿರಲಿಲ್ಲ. ತಾತ್ಪರ್ಯವಿಷ್ಟೇ, ಗುರುಮಹಾರಾಜರ ಅದ್ಭುತ ಶಕ್ತಿಯ ಪ್ರತ್ಯಯವು ಪುನಃಪುನಃ ಆಗುವದು ನಿಂತಿತು. ಆದರಿಂದ ಚಂದೂನ ಮನ ಸ್ಸಿನ ಮೇಲೆ ಬಿದ್ದಿದ್ದ ಶ್ರದ್ಧೆಯ ಪೇಚುಗಳು ಒಂದೊಂದೇ ನೂಲಿನಷ್ಟು ಉಚ್ಚುತ್ತ ಇಲ್ಲವೆ ಸಡಿಲಾಗುತ್ತ ನಡೆದವು; ಆದರೆ ಆದಕ್ಕೆ ಇನ್ನಿತರ ಕಾರಣ ಗಳೂ ಇದ್ದವು.

ದಿವ್ಯಜ್ಞಾನವೊಂದಿರಲಿ; ಆದರೆ ಲೌಕಿಕ, ಐಹಿಕ, ಬೌದ್ಧಿಕಜ್ಞಾನವಾದರೂ ಮಹಾರಾಜರಿಂದ ದೊರೆದೀತೆಂದು ಚಂದುವಿಗೆ ಆಶೆಯಿದ್ದಿತು; ಆದರೆ ಅದೂ ನಿಷ್ಫಲವಾಯಿತು. ಚಂದೂ ಆಕ್ಸಫರ್ಡಿನಲ್ಲಿ ಎಂ. ಏ. ಗೆ ಕ್ಲಾಸಿಕ್ಸ ಮತ್ತು ಫಿಲಾಸಫೀ ವಿಷಯಗಳನ್ನು ಓದಿದವನು. ಅದರೊಳಗಿನ ಯಾವುದೊಂದು ವಿಷಯವನ್ನು ತೆಗೆದು ಮಹಾರಾಜರು ಅದರ ಮೇಲೆ ಏನಾದರೂ ಮಾತಾ ಡುವರೇನೆಂಬ ನೆಲೆಯನ್ನು ಚಂದೂ ನೋಡಿದನು; ಆದರೆ 'ಅಂತರ್ಜ್ಞಾನೀ ಅಧ್ಯಾತ್ಮಜ್ಞಾನೀ ಮನುಷ್ಯನು ಇಂಥ ಓದಿ ಪಾಠ ಮಾಡಿದ ಜ್ಞಾನಕ್ಕೆ ಸ್ಪರ್ಶಿ ಸುವದೆಂದರೆ, ಮನುಷ್ಯನು ದೇವರ ಮನೆಯೊಳಗಿಂದ ಎದ್ದು ಬಂದು ಹಕ್ಕೆ ಯನ್ನು ಹೊಕ್ಕು ದನಗಳ ಸಂಗತಿಯಲ್ಲಿರುವಂತಾಗುವದು' ಹೀಗೆಂದು ಚಂದುವಿಗೆ ಮಹಾರಾಜರು ಒಮ್ಮೆಯೇ ಹೇಳಿಬಿಟ್ಟರು. ಅದರಿಂದ ವಿಚಾರ ವಿನಿಮಯದ ಆತನ ಆ ಮಾರ್ಗವು ಕಟ್ಟಾಯಿತು. ಮಹಾರಾಜರು ಏನೂ ಹರಟುತ್ತಲೇ ಇರಲಿಲ್ಲವೆಂತಲ್ಲ; ಆದರೆ ಅದೆಲ್ಲವೂ ಸಾಂಸಾರಿಕ ವಿಷಯವು.

ಬೈರಾಗಿಗೆ ಸ್ವಂತದ ಸಂಸಾರವಿರುವದೇ ಇಲ್ಲ; ಆದರೆ ಆತನು ಪ್ರಾಯಶಃ ವಿಶ್ವಕುಟುಂಬಿಯಾದುದರಿಂದ, ಅವಾಂತರ ಲೋಕದ ಚಿಂತೆಯನ್ನು ಅವನು ಸ್ವಂತದ ಸಂಸಾರದಂತೆ ಮಾಡುತ್ತಿರುತ್ತಾನೆ; ಮತ್ತು ಬಹುತರ ಶಿಷ್ಯರಿಗಂತೂ ಗುರುಜಿಯು ಅಧ್ಯಾತ್ಮಜ್ಞಾನ ಕೊಟ್ಟದ್ದಕ್ಕಿಂತಲೂ ತಮ್ಮ ಸಂಸಾರದೊಳಗಿನ ಅಡಚಣಿಗಳನ್ನು ನಿವಾರಿಸಿದರೆ ಅದೇ ಹೆಚ್ಚಾಗಿ ಇಷ್ಟವಿರುತ್ತದೆ. ಆರ್ತ ಮತ್ತು ಅರ್ಥಾರ್ಥೀ ಶಿಷ್ಯಸಮೂಹವೇ ಹೆಚ್ಚಾಗಿರುವದು ನಿಜ; ಮುಮುಕ್ಷುಗಳು ಕಡಿಮೆ. ಅದರಿಂದ ಬಹು ಜನ ಗುರುಜಿಗಳ ನಿತ್ಯನೈಮಿತ್ತಿಕ ವ್ಯಾಪಗಳನ್ನು ಕಂಡರೆ, ಅದರಲ್ಲಿ ಅವರು ಶಿಷ್ಯರ ಖಾಸಗಿ ಗೊಂದಲಗಳನ್ನು ನಿವಾರಿಸುವದರ ಲ್ಲಿಯೇ ತೊಡಗಿರುವದು ಕಂಡುಬಂದೀತು. ಯಾವನೊಬ್ಬನ ಹೆಂಡತಿ ಮಕ್ಕಳು ರೋಗಪೀಡಿತರಾಗಿರುವರು; ಯಾವನೊಬ್ಬನ ಉಪವರ ಕನ್ಯೆಯ ಲಗ್ನ ವಾಗುವದಿಲ್ಲ, ಕೆಲವರ ಹೆಂಡಂದಿರು ಮನೆಯಲ್ಲಿ ಸರಿಯಾಗಿ ಬಾಳುವೆ

ಮಾಡುವದಿಲ್ಲ; ಹಲವರ ಹೆಂಡಂದಿರು ಬಂಜೆಯಾಗಿರುತ್ತಾರೆ; ಕೆಲವರ ಮಕ್ಕಳ ಪರೀಕ್ಷೆ ಪಾಸಾಗುವದಿರುತ್ತದೆ, ಕೆಲವರು ಸಾಲದ ಕೆಸರಿನಲ್ಲಿ ಮುಣುಗಿದವರಿರುತ್ತಾರೆ; ಹಲವರಿಗೆ ತಮ್ಮ ಶತ್ರುಗಳ ನಿಃಪಾತಗೊಳಿಸುವದಿರುತ್ತದೆ. ತಾತ್ಪರ್ಯವೇನಂದರೆ, ತಮ್ಮ ಇವೆಲ್ಲ ದುಃಖಗಳನ್ನು ಹೇಳಲಿಕ್ಕೆ ಅವರಿಗೆ ದೇವರೆಲ್ಲಿ ಸಿಗಬೇಕು? ಅಂತೆಯೇ ದೇವರು ತನ್ನ ದುಯ್ಯಮ್ಮ ಪ್ರತಿನಿಧಿಯೆಂದು ತಮ್ಮೆದುರಿಗೆ ಹೂಡಿಟ್ಟ ಗುರುಕೃಪಾಳಾವು ಆ ದುಃಖಗಳ ಪರಿಹಾರವನ್ನು ಮಾಡಬೇಕೆಂದು ಶಿಷ್ಯಪರಿವಾರವು ಅಪೇಕ್ಷಿಸುತ್ತಿರುತ್ತದೆ.

ಚಂದುವು ಪ್ರಥಮದಲ್ಲಿ ತನ್ನ ನಿಜವಾದ ದುಃಖವನ್ನು ಗುರುಮಹಾರಾಜರಿಗೆ ಮನ ಬಿಚ್ಚಿ ಹೇಳಲಿಲ್ಲ; ಮತ್ತು ಗುರುವಾದರೂ ಅದರ ಬಗ್ಗೆ ವಿಚಾರಣೆ ಮಾಡಲಿಲ್ಲ. ಉಭಯ ಪಕ್ಷದ ದೃಶ್ಯವು ಹೀಗಿದ್ದಿತು: ಚಂದುವು ಬೇಟೆಯಾಡಿ ಪಕ್ಷಿಗಳ ಹಿಂಸೆಗಯ್ದನು; ಮಹಾರಾಜರು ಅದನ್ನು ನಿಷೇಧಿಸಿದರು. ಚಂದುವಿಗೆ ಅದು ಸಮ್ಮತವಾಗಿ ಉಪರತಿಯುಂಟಾಯಿತೆಂದು ಆತನು ಅಹಿಂಸೆಯ ಶಪಥ ಮಾಡಿದನು; ಮತ್ತು ಗುರು ಮಾಡಿಕೊಳ್ಳಲಿಕ್ಕೆ ಈ ಮಹಾರಾಜರು ಯೋಗ್ಯರಿರುತ್ತಾರೆಂದೆನಿಸಹತ್ತಿದ್ದರಿಂದ ಚಂದುವು ಅವರನ್ನು ಕರೆತಂದು ತನ್ನ ಮನೆಯಲ್ಲಿರಿಸಿದನು; ಆದರೆ ಆ ಎಲ್ಲ ಘಟನೆಯೊಳಗಿನ ಮುಖ್ಯ ಕೀಲವು ಬೇರೆಯೇ ಇತ್ತು. ಅದೇನಂದರೆ, ಪಕ್ಷಿಯ ಹಿಂಸೆಗಾಗಿ ದೇವರು ನಿನ್ನನ್ನು ದಂಡಿಸುವನು, ಎಂಬ ಶಾಪವು ಮಹಾರಾಜರ ಮುಖದಿಂದ ಹೊರಟಿತು; ಮತ್ತು ಯಾವ ಕಾಲಕ್ಕೆ ಇತ್ತ ಹಿಂಸೆಯ ಅಪರಾಧವು ಘಟಿಸಿತೋ, ಅದೇ ಕ್ಷಣಕ್ಕೆ ಐದು ಸಾವಿರ ಮೈಲುಗಳಾಚೆ ಚಂದೂನ ಪ್ರಿಯಕರಿಣಿಯೂ ಭಾವೀಪತ್ನಿಯೂ ಆದ ಮೇರಿಯು ಸತ್ತಳು! ಚಂದೂನ ಉಪರತಿಗೆ ನಿಜವಾದ ಕಾರಣ ಇದಾಗಿತ್ತು. ಅದು ಘಟಿಸದಿದ್ದರೆ ಅವನು ಆ ಬೈರಾಗಿಯ ಶಾಪವನ್ನು ಕಟ್ಟಿ ಎಳೆಯುತ್ತಿದ್ದನು; ಮತ್ತು ದೇವರು ತನಗೇನೂ ಮಾಡಲು ಶಕ್ತನಾಗಲಿಲ್ಲೆಂಬ ಬಢಾಯಿ ಕೊಚ್ಚುತ್ತ, ವಿಜಯ ಮೆರೆಸುತ್ತ ಆತನು ಮತ್ತೆ ಬೇಟೆಗೆ ಪ್ರವೃತ್ತನಾಗುತ್ತಿದ್ದನು!

ಅಂದಿನ ಆ ಬೇಟೆಯನಂತರವೇ ಚಂದೂ ಪಾಸಾದ ತಂತಿ ಬಂದಿತ್ತು. ಚಂದೂನಿಗೆ ಶಿಕ್ಷಿಸುವ ಬದಲು ದೇವರು ಆತನಿಗೆ ಆ ಬಕ್ಷೀಸನ್ನೇ ಕೊಡಲಿಲ್ಲವೆ? ಆದರೆ ಪರೀಕ್ಷೆ ಪಾಸಾದ ಆನಂದವನ್ನು ನುಂಗಿ ನೀರು ಕುಡಿಯುವಷ್ಟು ದುಃಖವು ಅವನೆದುರಿಗೆ ದೂತ್ತೆಂದು ಬಂದುನಿಂತಿತು; ಅಂದರೆ ಮೇರಿಯ ಮರಣದ ತಂತಿಯು ಅಂದಿನ ರಾತ್ರಿಯ ಊಟದ ಕಾಲಕ್ಕೆ ಬಂದೇ ಬಿಟ್ಟಿತು. ದೇವರು ಚಂದೂನಿಗೆ ಯಾವ ಶಿಕ್ಷೆ ಮಾಡುವನೆಂಬದು ಮಹಾ

ರಾಜರಿಗೆ ಗೊತ್ತಿರಲಿಕ್ಕಿಲ್ಲ, ಮತ್ತು ಅದು ಈಗಲೂ ಗೊತ್ತಿದ್ದಿಲ್ಲ; ಆದರೆ ಏನಾದರೂ ಶಿಕ್ಷೆಕೊಡುವ ಬಗ್ಗೆ ಅವರ ಆದೇಶವಿತ್ತು; ಹಾಗೂ ಅದರಲ್ಲಿ ಅಂತ ಜ್ಞಾನವಿರದಿದ್ದರೆ ಅಂಥ ಆದೇಶವು ಅವರ ಬಾಯಿಂದೆಂತು ಹೊರಡುತ್ತಿತ್ತು?

ತಾತ್ಪರ್ಯ, ಈ ಗುರುವಿನಲ್ಲಿ ಏನೋ ಅಸಾಮಾನ್ಯ ಆಧ್ಯಾತ್ಮಿಕ ಶಕ್ತಿಯಿದೆ ಎಂಬ ಬಗ್ಗೆ ಚಂದೂನ ಖಾತ್ರಿಯಾಯಿತು; ಆದರೆ ಆ ಶಕ್ತಿಯ ಉಪಯೋಗವು ಚಂದುವಿಗೇನಾಗುವಂತಿತ್ತು? ನಿಜ. ಆ ಶಕ್ತಿಯು ಅವರಲ್ಲಿದ್ದರೂ ಮೇರಿ ಪೊಡಹೌಸಳನ್ನು ಆತನು ಮತ್ತೆ ಜೀವವಿರುವಂತೆ ಮಾಡುವನೋ? ಅಂತಜ್ಞಾನದ ಮನುಷ್ಯನ ದಿವ್ಯ ಶಕ್ತಿಗಾದರೂ ಕೆಲ ಮರ್ಯಾದೆ ಇದ್ದೇ ಇರುತ್ತದಲ್ಲವೆ?

ಚಂದುವು ಶ್ರದ್ಧಾಳುವಾಗಿದ್ದರೂ ಯಾವ ಶಕ್ತಿಯಿಂದಲಾದರೂ ಸತ್ತವರ ಪುನರ್ಜನನವಾದೀತೆಂದು ಅವನಿಗೆ ಅನಿಸುತ್ತಿತ್ತೇನು? ಅಂಥ ಆಳವಾದ ಶ್ರದ್ಧೆಯ ಗರ್ತದಲ್ಲಿ ಆತನು ಹೇಗೆ ಹೋದಾನು? ಆತನು ಎಂ. ಏ., ಬ್ಯಾರಿಸ್ಟರ, ಆಯ್. ಸಿ. ಎಸ್. ನಲ್ಲವೇ? ಆದರೆ ನಮಗನಿಸುವದೇನಂದರೆ, ಗುರುಪ್ರಸಾದದಿಂದ ಮೃತ ಮೇರಿಯ ಪುನರುತ್ಥಾನದ ಆಶೆಯುವರೆಗೂ ಚಂದೂನ ಪ್ರವೃತ್ತಿಯಾಗಿರಬೇಕು. ಅದರಿಂದ ಚಂದುವು ಈ ಮಾತನ್ನು ಒಮ್ಮೆ ಗುರುಮಹಾರಾಜರೆದುರು ತೆಗೆದನು. ಮಹಾರಾಜರ ಶಾಪವು ಪ್ರತ್ಯಕ್ಷ ಸಫಲವೆಂತಾಯಿತೆಂಬದನ್ನು ಅವನು ಮಹಾರಾಜರಿಗೆ ವಿವರವಾಗಿ ತಿಳಿಸಿದನು. ಅದನ್ನು ಕೇಳಿ ಅವರಿಗೆ ಮನಸ್ಸಿನಲ್ಲಿ ಪರಮಾವಧಿಯ ಆಶ್ಚರ್ಯವಾಯಿತು. ಕಾಗೆ ಕೂರಲಿಕ್ಕೂ ಟೊಂಗೆ ಮುರಿಯಲಿಕ್ಕೂ ಒಮ್ಮೆಲೆ ಗಂಟುಬಿದ್ದುದನ್ನು ಅವರೆಂದಾದರೂ ಕಂಡಿರಬಹುದು; ಆದರೆ ತಾವು ಏನಾದರೂ ಸುಮ್ಮನೆ ಅಂದದ್ದು ಹೀಗೆ ನಿಜವಾದದ್ದನ್ನು ಕಂಡು ಅವರಿಗೆ ಮನಸ್ಸಿನಲ್ಲಿ ದೇವರನ್ನು ಮೊದಲು ಮಾಡಿಕೊಂಡು ತಮ್ಮ ವರೆಗಿನ ಎಲ್ಲರ ಬಗ್ಗೆಯೂ ನಗೆ ಬಂದಿತು.

ಆದರೆ ಚಂದೂನ ಮನಸ್ಸಿನಲ್ಲಿ ಗುರುಮಹಾರಾಜರ ಬಗ್ಗೆ ಇಷ್ಟು ಭಕ್ತಿಯಿದ್ದರೂ ಶಿಷ್ಯವರ ಜಂಬೂನ ಬಗ್ಗೆ ಆತನಿಗೆ ಪ್ರಥಮದಿನದಿಂದಲೂ ತುಚ್ಛತೆ-ತಿರಸ್ಕಾರವೆನಿಸುತ್ತಿತ್ತು. ತನ್ನ ಗುರುವು ಈ ದೊಡ್ಡ ಮನೆಯಲ್ಲಿ ಆಟ ಹೂಡಿರುವುದನ್ನು ಕಂಡು ಜಂಬೂನಿಗೆ ಅಲ್ಲಿ ತನ್ನ ಪ್ರಸ್ಥನನ್ನು ಬೆಳೆಯಬೇಕೆಂದೆನಿಸಹತ್ತಿತು; ಮತ್ತು ಅವನು ಚಂದುವನ್ನು ನೊರಜಿನಂತೆ ನೋಡಹತ್ತಿದನು. ಆತನು ಚಂದೂನ ಗುರುಸೇವೆಯೊಳಗಿನ ಸಟ-ದಿಟ ತಪ್ಪುಗಳನ್ನು ತೋರಿ ಅವನನ್ನು ನಿಷೇಧಿಸುತ್ತಿದ್ದನು; ಮತ್ತು ಈ ಚಂದುವು ಶಿಷ್ಯತ್ವಕ್ಕೆ ಹೀಗೆ ಅನರ್ಹನಿದ್ದರೂ, ತಮ್ಮ ಉದಾರ ಮನಸ್ಸಿನ ಮೂಲಕ

ಗುರುಗಳು ಈತನಿಂದ ಸೇವೆ ಸ್ವೀಕರಿಸುವರು ಎಂದು ತೋರುತ್ತಿದ್ದನು. ಚಂದುವು ಗುರುಸೇವೆಯ ಹೆಚ್ಚಿನ ಭಾಗವನ್ನು ತನ್ನ ಕಡೆಗೆ ತಕ್ಕೊಂಡದ್ದನ್ನು ಕಂಡು ಜಂಬುವು ಮೆಲ್ಲಮೆಲ್ಲನೆ ಬೇರೆ ಕಡೆಗೆ ಲಕ್ಷ್ಯವಿರಿಸಲಿಕ್ಕೆ ಪ್ರಾರಂಭಿಸಿದನು. ಆತನು ಆ ವಾಡೆಯಲ್ಲಿ ಬೇಕಾದ ಭಾಗಕ್ಕೆ ಹೋಗಿಬರಹತ್ತಿದ್ದನು. ಆಳು-ಹೋಳುಗಳ ಮೇಲೆ ಟಬರು ನಡೆಸಹತ್ತಿದನು. ಸರ ಗಂಗಾರಾಮನನ್ನು ಕೂಡ ಲೆಕ್ಕಿಸದಂತಾದನು; ಅದರ ಅದಕ್ಕೂ ಮುಂದೆ ಹೋಗಿ ಆತನು ಯಾವ ಉಪದ್ವ್ಯಾಪ ನಡೆಸಿದನೋ ಅದು ಬಿಂಬೆಯ ಸಂಬಂಧದ್ದಾಗಿತ್ತು.

ಶಿಷ್ಯವರ ಜಂಬುವು ಮೂವತ್ತರೊಳಗಿನ ತರುಣನಿದ್ದನು ಆತನಿಗೆ ಹೆಚ್ಚಾಗಿ ನೈಸರ್ಗಿಕ ಸೌಂದರ್ಯವು ಇತ್ತು; ಆದರೆ ಆತನು ಮುಖದ ಮೇಲೆ ಮೀಸೆ ಗಡ್ಡಗಳನ್ನು ಬೆಳೆಯಗೊಟ್ಟದ್ದರೂ ಅವೆಲ್ಲ ಬಹು ಕಪ್ಪಗಿದ್ದು, ಸತೇಜವಾಗಿದ್ದವು. ತನ್ನ ಕೇಶ-ಕಲಾಪಗಳನ್ನು ಆತನು ಒಳ್ಳೇ ಪರಿಶ್ರಮಪೂರ್ವಕ ನೋಡಿಕೊಳ್ಳುತ್ತಿದ್ದದರಿಂದ ಆತನ ಸೌಂದರ್ಯವು ಅಡಗಿ ಹೋಗುವ ಬದಲು, ಒಡೆದು ಕಾಣಿಸುವಂತಾಗುತ್ತಿತ್ತು. ಆತನು ತನ್ನ ಕೈಚೀಲದಲ್ಲಿ ಒಂದು ಚಂದನದ ಪುಟ್ಟ ಬಾಚಣಿಕೆ ಮತ್ತು ಕನ್ನಡಿ ಇವುಗಳನ್ನು ಮುಚ್ಚಿರಿಸಿಕೊಂಡಿದ್ದನು. ದಿನಕ್ಕೆ ಒಂದೆರಡುಸಾರೆಯಾದರೂ ಆತನು ಒತ್ತಟ್ಟಿಗೆ ಹೋಗಿ, ಯಾರಿಗೂ ಕಾಣದಂತೆ ತನ್ನ ಗಡ್ಡ ಮೀಸೆಗಳನ್ನು ಹಿಕ್ಕಿಕೊಳ್ಳುವನು; ಮತ್ತು ಅವೆರಡಕ್ಕೂ ಒಳ್ಳೇ ಜೋಕಾದ ತಿರುವುಗಳನ್ನುಂಟುಮಾಡುವನು. ತೀರ ಬಲಿಯದಿದ್ದ ಕೂದಲಿನ ಆ ಗಡ್ಡ ಮೀಸೆಗಳು ಆತನ ಇಚ್ಛೆಯಂತಾಗುತ್ತಿದ್ದವು. ಜಂಬುವಿನ ಧ್ವನಿಯು ಮಧುರವಿದ್ದೇ ಇತ್ತು. ಸವಿಕಟ್ಟಾಗಿ ಮಾತನಾಡುವ ಕಲೆಯೂ ಆತನಿಗೆ ಚನ್ನಾಗಿ ಸಾಧಿಸಿದ್ದಿತು. ಅವೆಲ್ಲವುಗಳಲ್ಲಿ ಲಾಘವ ವೃತ್ತಿಯು ಮಿಶ್ರವಾದದ್ದರಿಂದ, ಆತನ ಪರಿಚಯದ ಪ್ರತಿಯೊಬ್ಬನ ಮೇಲೆಯೂ ಅವನ ಛಾಪು ಕೂರುತ್ತಿತ್ತು; ಆತನು ಮಾತಾಡದಿದ್ದರೆ ಅವನನ್ನು ಮಾತಾಡಿಸಬೇಕೆಂದೆನಿಸುತ್ತಿತ್ತು; ಮತ್ತು ಆತನು ಎಷ್ಟೇ ಮಾತನಾಡಿದರೂ ಆ ಮಾತಿನ ಬೇಸರ ಬರುತ್ತಿರಲಿಲ್ಲ. ದಿನಾಲು ಕೆಲ ನಿಯಮಿತ ವೇಳೆಯಲ್ಲಿ ಹಾಗು ನಿಯಮಿತ ಸೇವೆಯನ್ನು ಗುರುಗಳಿಗೆ ಸಲ್ಲಿಸಿ ಬಿಟ್ಟನೆಂದರೆ, ಮಿಕ್ಕ ವೇಳೆಯಲ್ಲಿ ಆತನು ಸಂಪೂರ್ಣ ತೆರವಿರುತ್ತಿದ್ದನು. ಸ್ವಂತ ಗುರುಗಳ ಸಾಮಾನಿನಲ್ಲಿ ಒಂದೂ ಹೊತ್ತಿಗೆ-ಪುಸ್ತಕಗಳಿಲ್ಲದಿದ್ದ ಬಳಿಕ ಶಿಷ್ಯನ ಬಳಿಯಲ್ಲಿಲ್ಲಿರಬೇಕು? ತಿನ್ನುವದು, ಉಣ್ಣುವುದು, ಕುಡಿಯುವದು, ಅಡ್ಡಾಡುವುದು ಮುಂತಾದವುಗಳ ಹೊರತು ಆತನಿಗೆ ಬೇರೆ ಉದ್ಯೋಗವೇ ಇರಲಿಲ್ಲ. ಗುರುವಿನ ಕೃಪೆಯ ಮೂಲಕ ಆತನ ಪ್ರಸ್ಥವು ಹೆಚ್ಚಾಗಿ ಬೆಳೆದಿತ್ತು. ಯಾಕಂದರೆ

ಯಾರು ಬಂದರೂ ಗುರುಗಳು ತಮ್ಮ ಶಿಷ್ಯನ ಸ್ತುತಿಯನ್ನು ಅವರೆದುರಿಗೆ ಹೆಚ್ಚಾಗಿ ಮಾಡದಿರುತ್ತಿರಲಿಲ್ಲ.

---

### ಗುರು ಪರೀಕ್ಷೆ

ಗುರುಮಹಾರಾಜರು ತಾವಾಗಿ ಯಾವುದೊಂದು ವಿಷಯವನ್ನು ಚರ್ಚಿಸಹತ್ತಬಹುದೆಂದು ಚಂದುವು ದಾರಿಕಾಯುತ್ತಿದ್ದನು; ಆದರೆ ಆ ಬಾಬಿನಲ್ಲಿ ಆತನ ನಿರಾಶೆಯಾಯಿತು. ಒಂದು ಚಿಕ್ಕ ಮಲಿನ ಹೊತ್ತಿಗೆಯ ಹೊರತು ಅವರಲ್ಲಿ ಧಾರ್ಮಿಕ ವಾಙ್ಮಯವೆಂಬದೇನೂ ಇರಲಿಲ್ಲ. ಒಂದು ದಿನ ಚಂದುವು ಗಟ್ಟಿಧೈರ್ಯಮಾಡಿ ಆ ಹೊತ್ತಿಗೆಯನ್ನು ಬಿಚ್ಚಿನೋಡಿದನು. ಆಗ ಅದರಲ್ಲಿ ಪ್ರಾತಃಸ್ಮರಣದ ಹರಿಪಾಠದಂತಹ ಕೆಲ ಶ್ಲೋಕಗಳು, ಕೆಲವು ಪದಗಳು ಇದ್ದವು. ಬಳಿಕ ಒಂದು ದಿನ ಚಂದುವು ಮಹಾರಾಜರನ್ನು ಕುರಿತು "ಅತಿಪ್ರಸಂಗವಾಗುವದಿಲ್ಲೆಂದರೆ ನಾನು ಕೆಲ ಪ್ರಶ್ನೆ ಕೇಳಬೇಕೆಂದಿರುತ್ತೇನೆ."

"ಕೇಳು, ನಿರ್ಭೀತಿಯಿಂದ ಕೇಳು."

"ತಮಗೆ ಅಂತರ್ಜ್ಞಾನವು ಹೇಗಿದೆಯೋ ಹಾಗೆ ನನಗೂ ಲಭಿಸಬೇಕೆಂದು ನನ್ನಿಚ್ಛೆಯಿದೆ. ಅದರಿಂದ ತಾವು ಅದಕ್ಕಾಗಿ ನನಗೆ ಕೆಲ ಸಾಧನಗಳನ್ನು ಹೇಳುವಿರಾ? ನಾನು ಯಾವ ಕರ್ಮಮಾರ್ಗ ಇಲ್ಲವೆ ಯೋಗಮಾರ್ಗವನ್ನು ಹಿಡಿಯಲಿ? ಯಾವ ಅನುಷ್ಠಾನ ಮಾಡಲಿ? ಅಂದರೆ ನನಗಾ ಅಂತರ್ಜ್ಞಾನದ ಶಕ್ತಿಬಂದೀತು?"

ಈಗಂತೂ ಶಿಷ್ಯನು ತನ್ನ ಗುರುವಿನ ಪರೀಕ್ಷೆ ಮಾಡುವ ಪ್ರಸಂಗವನ್ನೇ ತಂದನು! ತಮ್ಮ ಅಜ್ಞಾನವು ಹೊರಬೀಳಬಾರದೆಂದು ಧೂರ್ತ ಚಪಲ ಗುರುಗಳು ಮೌನವನ್ನಾಶ್ರಯಿಸುತ್ತಾರೆ. 'ಮೌನಂ ಸರ್ವಾರ್ಥ ಸಾಧಕಂ' ಎಂದು ದೊಡ್ಡವರು ಹೇಳಿರುತ್ತಾರೆ. ಆ ಮೌನವನ್ನಾಶ್ರಯಿಸಿಯೇ ಗುರುಮಹಾರಾಜರು ಆ ಮಠದಲ್ಲಿರುತ್ತಿದ್ದರು. ತಮ್ಮ ಶಿಷ್ಯನು ಮೂರ್ಖತನದಿಂದ ತಮ್ಮ ಸಂಗತಿಗೆ ಬಿದ್ದಿದ್ದರೂ ಆತನು ಚುರುಕುಬುದ್ಧಿಯವನೆಂಬದು ಆ ಶಿಷ್ಯನ ಕಣ್ಣು-ಮುಖಮುದ್ರೆಗಳಿಂದ ಅವರಿಗೆ ಸಹಜವಾಗಿ ತಿಳಿಯುವಂತಿತ್ತು. ಅದರಿಂದಲೇ ಅವರು ಆತನೊಡನೆ ಮಾತಾಡಲಿಕ್ಕೆ ಅವಾಂತರ ಸಂಗತಿಗಳನ್ನು ಹೆಚ್ಚಾಗಿ ತೆಗೆಯುತ್ತಿರಲಿಲ್ಲ; ಆದರೆ ಗುರುವು ವಾಚಾಲನಾಗಬೇಕು; ಆತನ ಪ್ರತ್ಯಕ್ಷ ಬಾಯಿಂದ ಹೊರಟ ಎಷ್ಟು ಹೆಚ್ಚು ಶಬ್ದಗಳು ಕೇಳಲಿಕ್ಕೆ ದೊರೆತಾವೋ, ಅಷ್ಟು ದೊರೆಯಬೇಕು, ಎಂಬ ಇಚ್ಛೆಯು ಶಿಷ್ಯನಿ

ಗಾಯಿತು. ಆದರಿಂದ ಆ ಪ್ರಶ್ನೆಯ ಉತ್ತರವನ್ನು ವಿಸ್ತಾರವಾಗಿ ಹೇಳ ದಿದ್ದರೂ ಸೂತ್ರರೂಪದಿಂದಲಾದರೂ ಕೊಡಬೇಕಾದ ಪ್ರಸಂಗವೊದಗಿತು. ಶಿಷ್ಯನ ಆ ಪ್ರಶ್ನೆಯು ಅತಿ ವ್ಯಾಪಕವಿದ್ದುದರಿಂದ, ಗುರುಮಹಾರಾಜರು ಗೊಂದಲಕ್ಕೀಡಾದರು; ಆದರೆ ಅವರಿಗೆ ಗುರುಭಜನದ್ದೊಂದು ಪದವು ಬಾಯಿ ಪಾಠಬರುತ್ತಿತ್ತು. ಅದನ್ನು ಅವರು ಜಂಬುವಿಗೂ ಕಲಿಸಿಬಿಟ್ಟಿದ್ದರು. ಆದ್ದ ರಿಂದ ಚಂದೂನಿಗೆ ಉತ್ತರ ಕೊಡಲಿಕ್ಕೆಂದು ಅವರು ಜಂಬುವಿಗೆ ಆ ಪದ ವನ್ನು ಹೇಳುವ ಅಪ್ಪಣೆ ಮಾಡಿದರು.

ಆ ಪದದ ಮಥಿತಾರ್ಥವು 'ಗುರುವೇ, ನಿನ್ನ ಹೊರತು ನನಗಾರು ದಾರಿ ತೋರುವರು? ನನ್ನ ಉದ್ಧಾರಕ್ಕೆ ನಿನ್ನ ಹೊರತು ಬೇರೆ ಗತಿಯುಂಟೆ?' ಇತ್ಯಾದಿಯಾಗಿತ್ತು. ಈ ಉತ್ತರದಿಂದ ಚಂದೂನ ಸಮಾಧಾನವಾಗಲಿಲ್ಲ. ಆಗ ಆತನು ಸುಮ್ಮನಾದನು; ಆದರೆ ಆತನು ನಡುನಡುವೆ ಯಾವದೊಂದು ಯೋಗ್ಯ ಪ್ರಶ್ನೆಯನ್ನು ಕೇಳುವನು; ಹಾಗು ಅದಕ್ಕೆ ಗುರುಗಳಿಂದ ಯಾವ ಉತ್ತರ ದೊರೆಯುತ್ತಿತ್ತೋ, ಆದರಿಂದ ಗುರುಮಹಾರಾಜರ ವಿಷಯದ ಆತನ ಮನಸ್ಸಿನೊಳಗಿನ ವಿಶ್ವಾಸವು ಅಷ್ಟರಮಟ್ಟಿಗಾದರೂ ಕಡಿಮೆಯಾಗು ತ್ತಿತ್ತು. ಒಮ್ಮೆ ಚಂದುವು ದೈವ ಶ್ರೇಷ್ಠವೋ-ಉದ್ಯೋಗ ಶ್ರೇಷ್ಠವೋ? ಎಂದು ಪ್ರಶ್ನೆ ಮಾಡಿದನು. ಅದಕ್ಕೆ 'ಶನಿಮಾಹಾತ್ಮ್ಯವನ್ನೋದು' ಎಂದು ಉತ್ತರ ದೊರೆಕಿತು. 'ದೇವರ ಕೃಪಾ ಅಥವಾ ಅವಕೃಪೆಗಳನ್ನು ಹೇಗೆ ಗುರ್ತಿಸಬೇಕು?' ಎಂದು ಪ್ರಶ್ನೆ ಮಾಡಲು, 'ಇದರ ಉತ್ತರವು ಸತ್ಯನಾರಾ ಯಣನ ಹೊತ್ತಿಗೆಯಲ್ಲಿದೆ' ಎಂದು ಹೇಳಿದರು. 'ಯೋಗ'ವೆಂದರೇನು? ಎಂಬ ಪ್ರಶ್ನೆಗೆ 'ಭೋಗ' ಎಂಬ ಸಂಯಮಕ ಉತ್ತರ ದೊರೆಯಿತು! ಸಂಸ್ಕೃ ತದ ಸಾದಾವಾಕ್ಯವನ್ನುಚ್ಚರಿಸಿದರೂ ಅದು ಮಹಾರಾಜರಿಗೆ ತಿಳಿಯುವ ದಿಲ್ಲೆಂಬದು ಚಂದೂನಿಗೆ ಕಂಡುಬಂತು; ಮತ್ತು ಸ್ವತಃ ಆತನಂತೂ ಎಂ. ಏ ದ ಪರೀಕ್ಷೆಗೆ ಸಂಸ್ಕೃತ ವಿಷಯವನ್ನು ತೆಗದುಕೊಂಡಿದ್ದನು! ತನ್ನ ಗುರುಮಹಾರಾಜರು ನಾಥಪಂಥದವರಿರಬಹುದೆಂದು ತಿಳಿದು, ಅವರಿಗೆ ಆ ಪಂಥದ ಸಾಂಪ್ರದಾಯಿಕ ಮಾಹಿತಿ ಕೇಳಿದನು; ಆದರೆ ಆದಿನಾಥ, ಗೋರಖನಾಥ, ಜಾಲಂದರನಾಥ, ಮಚ್ಛೀಂದ್ರನಾಥ ಇತ್ಯಾದಿಯವರ ಹೆಸರು ಗಳೂ ಅವರವರ ಸಂಬಂಧವೂ ಕೂಡ ಗುರುಮಹಾರಾಜರಿಗೆ ಸರಿಯಾಗಿ ಗೊತ್ತಿಲ್ಲವೆಂಬದು ಚಂದುವಿಗೆ ತಿಳಿದು ಬಂತು.

ಗುರುವಿನೊಡನೆ ಸಂಭಾಷಿಸಬೇಕೆಂದಿದ್ದ ಚಂದುವಿನ ಇಚ್ಛೆಯು ಈಡೇರದ್ದರಿಂದ ಅವನು ಲೌಕಿಕ ಪ್ರಶ್ನೆ ತೆಗೆದನು; ಆದರೆ ಆ ಸಂಬಂಧದಲ್ಲಿ

ಮಾತ್ರ ಅವರು ಅಲ್ಪಸ್ವಲ್ಪ ಜ್ಞಾನವನ್ನು ಪ್ರಕಟಪಡಿಸಿದರು. ಮಾತಿಗೆ ಮಾತು ಹೊರಡಲು, ಅವರು ಹಲವು ಸಂಸ್ಥಾನಗಳ ಮಾಹಿತಿಯನ್ನು ಹೇಳಿದರು. ತಿಜೋರಿ, ಲೆಕ್ಕಪತ್ರದ ವ್ಯವಹಾರ ಈ ಮುಖ್ಯ ವಿಷಯ ಹೊರಡಲು ಆಗಂತೂ ಅವರು ತೀರ ಪ್ರಸನ್ನತೆಯಿಂದ ಎಷ್ಟೋ ಹೊತ್ತಿನವರೆಗೆ ಮಾಹಿತಿ ಹೇಳಿದರು. ಮತ್ತೊಮ್ಮೆ ಮೋಟರಿನ ವಿಷಯು ಹೊರಟಾಗ ಜಂಬುವಿಗೆ ಒಳ್ಳೇ ಸಂಧಿ ದೊರಕಿತು; ಮತ್ತು ಅವನು ಆ ವಿಷಯದ ಮೇಲೆ ದೀರ್ಘ ವ್ಯಾಖ್ಯಾನವನ್ನೇ ಕೊಟ್ಟನು! ನಂದಭುವನದೊಳಗಿನ ಪ್ರತಿಯೊಂದು ಮೋಟರನ್ನು ಆತನು ಪರೀಕ್ಷಿಸಿದ್ದನು; ಮತ್ತು ಯಾವ ಮೋಟರಿನ ಬ್ರೆಕ್ಕು ಸಡಿಲಾಗಿದೆ; ಯಾವ ಮೋಟರು ಸುಮ್ಮನೆ ಹೆಚ್ಚು ಎಣ್ಣೆಯನ್ನು ಸುಡುತ್ತದೆ; 'ಸೆಕಂಡ ಹ್ಯಾಂಡ ಮೋಟರ ಬಾರ್ಗೇನ'ದ ಹಿಡಿತಗಳಾವವು? ಟೋಲು ತಪ್ಪಿಸಬೇಕಾದರೆ ಯಾವ ಯುಕ್ತಿಗಳು ಯಶಸ್ವಿಗಳಾಗುತ್ತವೆ? ಮತ್ತು ಮೋಟರ ಡ್ರಾಯವ್ಹರನ ಪಕ್ಕದಲ್ಲಿ ಗಂಡಸು ಕುಳಿತರೆ ಇಲ್ಲವೆ ಸ್ತ್ರೀಯಿದ್ದರೆ ಅದರಿಂದ ಮೋಟರ ಸಾಗಿಸಲಿಕ್ಕೆ ಯಾವ ಲಾಭ-ಹಾನಿಗಳಾಗುವವು ಮುಂತಾದ ಸಂಗತಿಗಳನ್ನು ಚಂದೂಲಾಲನಿಗೆ ಕೇಳಿಕೊಳ್ಳುವ ಇಚ್ಛೆಯಿರದಿದ್ದರೂ ಆತನು ಅವುಗಳನ್ನು ಪರಿಪರಿಯಿಂದ ತಿಳಿಸಿ ಹೇಳಿದನು. ಈ ಬಗ್ಗೆ ಚಂದೂ ಒಮ್ಮೆ ಗುರುಮಹಾರಾಜರನ್ನುದ್ದೇಶಿಸಿ—''ಮಹರಾಜ, ಜಂಬುವಿಗೆ ಮೋಟರಿನ ಇಷ್ಟು ಅಂತರ್ಜ್ಞಾನವೆಂತಾಯಿತು?'' ಅದಕ್ಕೆ ಅವರು—'ಆತನ ಬುದ್ಧಿಯು ಅಷ್ಟು ಚಾಲಾಕವೇ ಇದೆ. ಅವನು ಏನು ಕಂಡಾನೋ, ಅದನ್ನು ಎತ್ತೇ ಹಾಕುವನು.' ಎತ್ತಿಹಾಕುವನು ಈ ಶಬ್ದದ ಅರ್ಥವನ್ನು ಎಷ್ಟು ವ್ಯಾಪಕಗೊಳಿಸಬೇಕೆಂಬ ಬಗ್ಗೆ ಚಂದುವಿಗೆ ಇತಿಮಿತಿಯೇ ಬಿದ್ದಿತು!

ಮಠದೊಳಗೆ ಎಲ್ಲ ಬಗೆಯು ಶಾಂತತೆಯಿರುವ ವ್ಯವಸ್ಥೆಯನ್ನು ಚಂದುವು ಬಹು ಚೆನ್ನಾಗಿ ಮಾಡಿದ್ದನು. ಗುರುಮಹಾರಾಜರು ಮೆಲ್ಲಗೆ ಮಾತಾಡಹತ್ತಿದ್ದರಾದ್ದರಿಂದ ಜಂಬುವಾದರೂ ಅವರ ಅನುಕರಣವನ್ನೇ ಮಾಡುವನು. ಚಂದುವಾದರೂ ಮೆಲ್ಲನೆ ಮಾತಾಡುವದನ್ನು ಕಲಿತಿದ್ದನು; ಆದರೆ ಒಡೆದು ಕಾಣುವ ಮೋಜು ಏನಂದರೆ, ಮಠದ ಹೊರಗೆ ಹಾಗೆ ಮೆಲ್ಲನೆ ಮಾತನಾಡುವ ಬಂಧನವಿರದ್ದರಿಂದ ಜಂಬೂ ಮತ್ತು ಚಂದೂ ಇವರಿಬ್ಬರೂ ತಮ್ಮ ಸ್ವಾಭಾವಿಕ ದನಿಯಿಂದ ಗಟ್ಟಿಗಟ್ಟಿಯಾಗಿ ಮಾತನಾಡಿ, ಆ ಪ್ರದೇಶವನ್ನೆಲ್ಲ ನಿನಾದಗೊಳಿಸುತ್ತಿದ್ದರು; ಆದರೆ ಮಠದಲ್ಲಿ ಕಾಲಿಟ್ಟ ಕೂಡಲೆ ಮೆಲ್ಲಗೆ ಮಾತಾಡುವ ಬಗ್ಗೆ ಅವರಿಬ್ಬರಲ್ಲಿಯೂ ಕೇವಲ ಸ್ಪರ್ಧೆಯೇ ನಡೆದಂತಾಗುತ್ತಿತ್ತು. ಯಾವನಾದರೂ ತ್ರಯಸ್ಥನು ಅವರ ಆ ರೀತಿಯನ್ನು ಕಂಡಿದ್ದರೆ, ಇದೊಂದು

ಮೂಳರ ಶಾಲೆಯೋ ಏನೋ ಎಂಬಂತಾಗುತ್ತಿತ್ತು. ಮಠದಲ್ಲಿ ಗಟ್ಟಿಯಾಗಿ ಶಬ್ದೋಚ್ಚಾರಮಾಡುವ ಪರವಾನಿಗೆಯು ಆ ಪಂಜರದೊಳಗಿನ ಹಕ್ಕಿಗೊಂದೇ ಇತ್ತು. ಗಟ್ಟಿಯಾಗಿ ಮಾತಾಡುವುದರಿಂದ ಹವೆಯ ಮೇಲೆ ಆಘಾತವಾಗುತ್ತವೆ; ಮತ್ತು ಆ ಆಘಾತದಿಂದ ಹವೆಯಲ್ಲಿ ಸಂಚರಿಸುವ ಸೂಕ್ಷ್ಮಕ್ರಿಮಿಗಳ ಹಿಂಸೆಯಾಗುವುದೆಂದು ಒಮ್ಮೆ ಗುರುಮಹಾರಾಜರು ಅಂದಿದ್ದರು. ಆ ಸೂಚನೆಯು ಚಂದುವಿಗೆ ಯೋಗ್ಯವೆನಿಸಿ, ಆತನು ಸ್ವಂತದ ಉದಾಹರಣೆಯಿಂದ ಅಮಲಿನಲ್ಲಿ ತಂದಿದ್ದನು. ಕಪೋತಪಕ್ಷಿಯು ಮಾತ್ರ ಯಾವಾಗ ಗಟ್ಟಿಗಟ್ಟಿಯಾಗಿ ಧ್ವನಿ ಗೈದು ಗಿರಡಿ ಹೊಡೆಯುವದೋ, ಆಗ ಚಂದುವು 'ತಮ್ಮಾ ನಿನಗೆ ಗಟ್ಟಿಯಾಗಿ ಮಾತಾಡುವ ಪರವಾನಿಗೆಯಿದೆಯಪ್ಪಾ! ಮಾನವನ ನಿಯಮಗಳನ್ನು ಹಕ್ಕಿಗಳಿಗೆ ಹಚ್ಚಲಾಗುವುದಿಲ್ಲವಷ್ಟೇ?' ಆದರೆ ಈ ಕಪೋತದ ಹೆಣ್ಣು ಪಕ್ಷಿಯು (ಚಂದೂನ ಬೇಟಿಯಲ್ಲಿ ಸತ್ತದ್ದು) ಜೀವಂತವಾಗಿದ್ದರೆ ಮತ್ತು ಇವೆರಡೂ ಹಕ್ಕಿಗಳು ಪಂಜರದ ಹೊರಗೆ ಸ್ವತಂತ್ರವಾಗಿದ್ದರೆ ಈ ಕಪೋತವು ಎಷ್ಟು ದೊಡ್ಡದನಿ ತೆಗೆಯುತ್ತಿದ್ದಿತೋ, ಈ ವಿರಹದಿಂದ ಬಳಲುತ್ತಿದ್ದ ಒಂಟಿಗ ಸ್ಥಿತಿಯಲ್ಲಿ ಅಷ್ಟು ದೊಡ್ಡದನಿ ತೆಗೆಯಲು ಶಕ್ತವಾಗಿರಲಿಲ್ಲ.

ಮೆಲ್ಲನೆ ಮಾತನಾಡಿದ ನಿಜವಾದ ಲಾಭವು ಜಂಬೂ ಮತ್ತು ಬಿಂಬಾ ಇವರು ಆ ಮಠದಲ್ಲಿ ಏಕತ್ರಿತ ಕೂಡಿದಾಗ್ಗೆ ಅವರಿಗೆ ಮಾತ್ರ ಆಗುತ್ತಿತ್ತು. ಮೆಲ್ಲನೆ ಮಾತಾಡುವ ನಿಯಮದಿಂದ ಅವರಿಬ್ಬರದೂ ಸಹಜವಾಗಿಯೇ ಕೆಲಸವಾಗುತ್ತಿತ್ತು. ಯಾಕಂದರೆ ಮಿಕ್ಕಕಾಲದಲ್ಲಿ ಮೆಲ್ಲನೆ ಮಾತನಾಡುವದು ಹೇಗೆ ಸಂಶಯಾಸ್ಪದವೆನಿಸುತ್ತಿತ್ತೋ, ಅದು ಅಲ್ಲಿ ಯೋಗ್ಯ ಮತ್ತು ರಾಜಮಾನ್ಯವೆಂದು ನಿಶ್ಚಿತವಾಯಿತು. ಮೆಲ್ಲನೆ ಮಾತಾಡಿದ್ದನ್ನು ಕೇಳಲಿಕ್ಕೆ ಬರುವದಕ್ಕಾಗಿ ಮಾತಾಡುವವರು ಸಹಜವಾಗಿಯೇ ಒಬ್ಬರೊಬ್ಬರ ಮುಖದ ಹತ್ತರ ಮುಖ ಇಲ್ಲವೆ ಕಿವಮಾನಪಕ್ಕ ಕಿವಿಯ ಹತ್ತಿರ ಮುಖವನ್ನಾದರೂ ಒಯ್ಯಬೇಕಾಗುತ್ತದೆ.

ಚಂದು ಮತ್ತು ಗುರುಮಹಾರಾಜ ಇಲ್ಲವೆ ಜಂಬೂ ಮತ್ತು ಗುರುಮಹಾರಾಜ ಇಲ್ಲವೆ ಚಂದು ಮತ್ತು ಜಂಬೂ ಇವರ ಮುಖಗಳು ಸಮಿಸಮೀಪ ಹೋದರೆ ಅದು ಯಾರಿಗೂ ಚಮತ್ಕಾರಿಕವೆನಿಸುವ ಸಂಭವವೇ ಇಲ್ಲ. ಸಂಭವವಿದ್ದಿತೇನಂದರೆ, ಜಂಬೂ ಹಾಗು ಬಿಂಬಾ ಇವರ ಮುಖಗಳು ಹತ್ತರ ಹತ್ತರ ಬಂದರೇ; ಆದರೆ ಹವೆಯೊಳಗಿನ ಸೂಕ್ಷ್ಮಪ್ರಾಣಿಗಳ ಹಿಂಸೆಯಾಗಗೊಡಬಾರದೆಂದು ಮಠದೊಳಗಿನ ಒಂದು ಧ್ಯೇಯವಿದ್ದದರಿಂದ, ಬಿಂಬೆ

ಮತ್ತು ಜಂಬೂ ಇವರಿಗೆ ಮುಖದ ಹತ್ತರ ಮುಖವನ್ನೊಯ್ದು ಮಾತಾಡದ ಹೊರತು ಗತಿಯೇ ಇರಲಿಲ್ಲ. ಬಿಂಬೆಯು ಗುರುಮಹಾರಾಜರೊಡನೆ ಹೆಚ್ಚಾಗಿ ಮಾತಾಡುತ್ತಲೇ ಇದ್ದಿಲ್ಲ. ಅದರಿಂದ ಅವರ ಮುಖದ ಬಳಿ ತನ್ನ ಮುಖವನ್ನೊಯ್ದು ಮಾತನಾಡುವ ಪ್ರಸಂಗಗಳು ಆಕೆಗೆ ಒದಗುತ್ತಿರಲಿಲ್ಲ. ಅವಳು ಗುರುಮಹಾರಾಜರಿಗೇನಾದರೂ ಹೇಳಿ ಕೇಳುವದಿದ್ದರೆ, ಅದನ್ನು ಜಂಬೂನಿಗೆ ಹೇಳಿ, ಅವನ ಮೂಲಕವೇ ಹೆಚ್ಚಾಗಿ ನಡೆಸುತ್ತಿದ್ದಳು.

ಯಾವ ಸಾಧು-ಸಂತರ ಮಠವೆಂದರೂ ಅಲ್ಲಿ ಸ್ತ್ರೀಯರ ಗಲಾಟೆಯು ಖಂಡಿತವಾಗಿ ಆಗತಕ್ಕದ್ದೇ; ಮತ್ತು ನಂದಭುವನದೊಳಗಿನ ಆ ಮಠದಲ್ಲೂ ಆದಾಗಬಹುದಿತ್ತು; ಆದರೆ ಅದಾಗದಿರಲಿಕ್ಕೆ ಒಂದು ಕಾರಣವುಂಟಾಗಿದ್ದಿತೇನಂದರೆ, ನಂದಭುವನದ ಒಡೆಯಳೇ ಸ್ವತಃ ಆ ಮಠದಲ್ಲಿ ಎಂದೂ ಕಾಲಿಡುತ್ತಿರಲಿಲ್ಲ. ಅತಿ ಶಿಕ್ಷಿತ ಎಂ. ಏ., ಬ್ಯಾರಿಸ್ಟರ, ಆಯ್. ಸಿ. ಎಸ್. ಆದ ಚಂದುವು ಗುರುಭಜನೆಗೆ ತೊಡಗಬೇಕು; ಮತ್ತು ಅಶಿಕ್ಷಿತ ಸನಾತನೀ ಮಾಸಾಹೇಬರು ಗುರುಭಜನೆಗೆ ಬಹಿಷ್ಕಾರ ಹಾಕಬೇಕು ಈ ತಿರುವುಮುರವುಗಳು ಜನರ ಧ್ಯಾನದಲ್ಲಿ ಬರದೆ ಉಳಿಯಲಿಲ್ಲ; ಆದರೆ ಏನೇ ಆದರೂ ಆ ಬಹಿಷ್ಕಾರದ ಸ್ವಾಭಾವಿಕ ಪರಿಣಾಮವಾದುದೇನಂದರೆ, ಪಟ್ಟಣದೊಳಗಿನ ಹೆಂಗಸರ ರಹದಾರಿಯು ಅಲ್ಲಿಗೆ ಹೆಚ್ಚಾಗಿ ಆಗಬೇಕಾದುದು ಮಾಸಾಹೇಬರ ಆ ವರ್ತನದಿಂದ ತೀರ ಕಟ್ಟಾಯಿತು. ಆ ಬಹಿಷ್ಕಾರದ ಬಗ್ಗೆ ಗುರು ಮಹಾರಾಜರಿಗೆ ಮನಃಪೂರ್ವಕವಾಗಿ ಕೆಡಕೆನಿಸುತ್ತಿತ್ತು; ಯಾಕಂದರೆ, ಗುರುಮಾಹಾತ್ಮ್ಯದ ಉತ್ಸವದೊಳಗಿನ ಮುಖ್ಯ ಬಂಡವಾಲವೆಂದರೆ, ಗುರುವಿನ ಸುತ್ತಲೂ ನೆರೆಯುವ ಭೋಳೇಭಾವಿಕ ಹೆಂಗಸರ ಗಲಾಟೆಯು! ಅದೆಲ್ಲ ಬಂಡವಲವು ಆ ಒಬ್ಬ ಮಾಸಾಹೇಬರ ಬಹಿಷ್ಕಾರದಿಂದ ಮುಳುಗಿತು; ಮತ್ತು ಗಂಡಸರು ಭಜನೆಗೆ ತೊಡಗಿದರೂ ಅವರ ಗುರುಭಕ್ತಿಯ ಪ್ರೇಮಲತನದಲ್ಲಿ ಸ್ವಾರಸ್ಯವಿರುವದು ಅಷ್ಟಕ್ಕಷ್ಟೇ.

ನಂದಭುವನದಲ್ಲಿಯ ಮಠಕ್ಕೆ ಊರೊಳಗಿನ ಗಂಡಸರು ದರ್ಶನಕ್ಕೆಂದು ಬರುತ್ತಿದ್ದರು. ಅವರಲ್ಲಿಯ ಕೆಲವರು ಭಜನೆಗೆ ಹತ್ತುವರು; ಆದರೆ ಈ ಬಾಬಿನಲ್ಲಿಯೂ ಚಂದುವು ಒಂದು ಸಂಗತಿಯನ್ನು ತನ್ನ ಸ್ವಭಾವಕ್ಕನುಸರಿಸಿ ಮಾಡಿದ್ದನು. ಅದೇನಂದರೆ, ಗುರುಮಹಾರಾಜರ ಗುರುತ್ವವು ಹೆಚ್ಚುವ ಸಲುವಾಗಿ ಮತಪ್ರಚಾರ ನಡೆಸಲಿಲ್ಲ. ಆ ಮತಪ್ರಚಾರದ ಸರ್ವಸಾಧಾರಣ ರೀತಿಯೆಂದರೆ ಹೀಗಿರುತ್ತದೆ:—ಯಾರಾದರೂ ಪರಕೀಯ ಜನರು ಬಂದರೆಂದರೆ, ಅದೇ ಸಮಯಕ್ಕೆ ಶಿಷ್ಯರಿಗೆ ಗುರುಸ್ತವನದ ಸೊನೆ

ಒಡೆಯುತ್ತದೆ; ಅವರ ಗುರುಸೇವೆಯು ಚಿಗುರುತ್ತದೆ; ಮತ್ತು ಅದಕ್ಕೆ ಬಾಯಿಬರುತ್ತದೆ. ಅದನ್ನೆಲ್ಲ ಕಂಡು ಮೊದಲು ಶಿಷ್ಯವರ್ಗದಲ್ಲಿರದವರು ಆ ದೀಕ್ಷೆಯನ್ನು ಪಡೆಯಲಿಕ್ಕೆ ಉತ್ಸುಕರಾಗುತ್ತಾರೆ; ಆದರೆ ಅಂಥ ಮತಪ್ರಚಾರ ದಲ್ಲಿ ಯಾರದಾದರೂ ದ್ರವ್ಯಾಭಿಲಾಷೆಯು ಬುದ್ಧಿಯು ಒಳಗಿಂದೊಳಗೇ ದುಡಿಯುತ್ತಿರುತ್ತದೆ. ನಂದಭುವನದೊಳಗಿನ ಮಠದಲ್ಲಿ ಗುರುಸಂಸ್ಥೆಯು ನಿರ್ಮಾಣವಾದರೂ ಅದು ಧನಲೋಭದಿಂದಾಗಿರಲಿಲ್ಲ. ಅದರಿಂದ ಅದರ ಪ್ರಸಿದ್ಧಿಯನ್ನು ಮಾಡುವ ಕಾರಣವೂ ಇರಲಿಲ್ಲ; ಕಿಂಬಹುನಾ ಈ ಗುರು ಸಂಸ್ಥೆಯು ತನ್ನ ಸ್ವಂತದ್ದು-ಖಾಸಗೀ-ಕಾದಿಟ್ಟದ್ದಾಗಿ ಉಳಿಯಬೇಕೆಂದೇ ಚಂದುವಿನ ಇಚ್ಛೆಯಿದ್ದಿತು ಬೇರೆ ಬಾಬುಗಳಂತೆ ಈ ಬಾಬಿನಲ್ಲಿಯೂ ಆತನು 'ಅರಿಸ್ಟೊಕ್ರಟಿಕ' ಆಗಿದ್ದನು; 'ಡೆಮೊಕ್ರಟಿಕ' ಇದ್ದಿಲ್ಲ. ಆತನು ಗುರುಮಹಾರಾಜರ ಮಟ್ಟಿಗೆ ಲೀನತೆ ಧರಿಸಿದ್ದನು. ಅವರನ್ನುಳಿದು ಮಿಕ್ಕ ಎಲ್ಲ ಸಮಾಜದೊಡನೆ ನಡೆಕೊಳ್ಳುವಾಗ ಆತನ ಔದ್ಧತ್ಯತೆ ಹಾಗೇ ಉಳಿದಿತ್ತು.

ಆ ಮಠದಲ್ಲಿ ಹಗಲೆಲ್ಲ ಅಡ್ಡಾಡುವ ಸ್ತ್ರೀಯೆಂದರೆ ಬಿಂಬೆಯೊಬ್ಬಳೇ; ಆದರೆ ಆಕೆಯು ಅಲ್ಲಿ ಚಲಿಸುವುದು ಚಂದುವಿಗೆ ಮನಃಪೂರ್ವಕವಾಗಿ ಬೇಕಿರಲಿಲ್ಲ. ಆತನ ತಾಯಿಯು ತನ್ನ ಗುರುಭಜನೆಗೆ ತೊಡಗಿದ್ದರೆ ಮಾತ್ರ ಅದು ಆತನಿಗೆ ಹೆಚ್ಚಾಗಿ ರುಚಿಸುವಂತಿತ್ತು; ಯಾಕಂದರೆ ತಾನು ಅನುಸರಿಸಿದ ಆ ನೂತನ ಮಾರ್ಗಕ್ಕೆ ಅದು ಆಶೀರ್ವಾದವೆಂದು ಆತನಿಗೆ ಅನಿಸಬಹುದಿತ್ತು; ಮತ್ತು ಅದರಿಂದ ಅವನಿಗೆ ತನ್ನ ಗುರುಭಕ್ತಿಯನ್ನು ಮೆರೆಯಿಸಬರುತ್ತಿತ್ತು. ಆ ಮೇಲೆ ಚಂದೂ ಹಾಗು ಮಾಸಾಹೇಬ ಇವರಿಬ್ಬ ರಿಗೂ ಯಾವುದು ಸಮ್ಮತವಾಗುತ್ತಿತ್ತೋ, ಅದು ಸರ ಗಂಗಾರಾಮರಿಗೂ ಮಾನ್ಯವಾಗುತ್ತಿತ್ತು; ಆದರೆ ಮಕರಾಟಿಕೆ ಸ್ವಭಾವದ, ತನಗಿಂತ ನಾಲ್ಕು ವರ್ಷಕ್ಕೆ ಚಿಕ್ಕವಳಾದ ಬಿಂಬೆಯು ಸ್ವಂತದ ಇಚ್ಛೆಯ ಮೇರೆಗೆ ತನ್ನ ಉದಾಹರಣೆ ತಕ್ಕೊಂಡು ಗುರುಭಜನೆಗೆ ತೊಡಗಿದುದು ಚಂದುವಿಗೆ ಹೇಗೆ ಹೇಗೋ ಅನಿಸಿತು. ಆತನಿಂದ ಆವಳ ಆ ಚಮತ್ಕಾರಿಕ ವರ್ತನದ ಸಮರ್ಥನವೆಂತಾದೀತು? ಮಠದಲ್ಲಿ ಅವಳು ಜಂಬೂನ ಸಹವಾಸದಲ್ಲಿರು ವಳು. ಮಠದೊಳಗಿನ ಶಾಂತತೆಗೆ ಭಂಗಬರಬಾರದೆಂಬ ನೆವದಿಂದ ಅವರಿ ಬ್ಬರೂ ಮೋರೆಗೆ ಮೋರೆಯಾನಿಸಿ ಮಾತಾಡುವದು, ಕಿವಿಕಿವಿ ಕಚ್ಚಾ್ಯ ಡುವದು ಮುಂತಾದ್ದೆಲ್ಲ ಅವನಿಗೆ ಸೇರುತ್ತಿರಲಿಲ್ಲ. ಪ್ರಸಂಗ ವಿಶೇಷಗಳಲ್ಲಿ ಆತನು ತನ್ನಾ ವಿರೋಧವನ್ನು ಬಿಂಬೆಗೆ ಹೇಳುತ್ತಿದ್ದನು ಸಹ; ಆದರೆ ಅವಳು ಅದನ್ನು ಕಿವಿಯ ಮೇಲೆಯೇ ಹಾಕಿಕೊಳ್ಳುತ್ತಿರಲಿಲ್ಲ; ಮತ್ತು ಒಮ್ಮೆ ಆತನು

ತನ್ನ ವಿರೋಧವನ್ನು ವ್ಯಕ್ತವಾಗಿ ಮಾತಾಡಿ ತೋರಿಸಲು, ಆಗ ಅವಳಿಗೂ ಚಂದೂನಿಗೂ ಜಗಳವೇ ಆಯಿತು.

'ಬಿಂಬೆ, ಈ ಮಠದಲ್ಲಿ ನಿನ್ನದೇನಿಟ್ಟಿದೆಯೇ? ಅನ್ಯರಾರೂ ಇತ್ತಬಾರದ್ದನ್ನು ನೀನು ನೋಡಿಯೇ ನೋಡುತ್ತೀ; ಅಲ್ಲದೆ ಊರೊಳಗಿನ ಯಾವ ಹೆಂಗಸರೂ ಇಲ್ಲಿಗೆ ಬರುತ್ತಿರುವದಿಲ್ಲ.'

''ಭಲೆ! ಹಾಗಾದರೇನಾಯಿತು? ನೀನು ಮಹಾರಾಜರನ್ನು ಹೇಗೆ ಗುರುವೆಂದು ಮನ್ನಿಸುವೆಯೋ, ಹಾಗೆಯೇ ನಾನು ಶಿಷ್ಯವರ ಜಂಬೂ ಇವರನ್ನು ಗುರುಗಳೆಂದು ಮನ್ನಿಸುತ್ತೇನೆ.''

'ಎಲೆ, ನಾನೂ ಗುರುಮಹಾರಾಜರೂ ಇಬ್ಬರೂ ಗಂಡಸರೇ ಇರುವೆವು.'

"ಅಂದರೆ? ಸ್ತ್ರೀಯರು ಪುರುಷ ಗುರು ಮಾಡಿಕೊಳ್ಳಬಾರದೇನು? ಸ್ತ್ರೀಯರು ದೊಡ್ಡ ಮನಸ್ಸಿನವರು! ಯಾಕಂದರೆ, ಅವರು ತಾವೆಂದೂ ಗುರು ಪದಸ್ವೀಕರಿಸುವದಿಲ್ಲ. ದೀಕ್ಷೆ, ಗುರುಮಂತ್ರಗಳನ್ನು ಕೊಡುವದಿಲ್ಲ. ಶಿಷ್ಯಿಣಿಯರನ್ನು ಮಾಡಿಕೊಳ್ಳುವದಿಲ್ಲ. ಸ್ತ್ರೀಯರ ಗುರುಪೀಠ ಸ್ಥಾಪನವಾದುದನ್ನು ನೀನೆಲ್ಲಾದರೂ ನೋಡಿರುತ್ತೀಯಾ ಅಣ್ಣಾ? ಬಹುಶಃ ದೊರೆಯಲಿಕ್ಕಿಲ್ಲ. ಅದು ಸ್ವಾರ್ಥಸಾಧಕರಾದ ಪುರುಷರ ಅಧಿಕಾರದ್ದೇ! ಸ್ವತ್ತಿನದೇ! ಅದಿರಲಿ. ಆದರೆ ಆ ಮೇಲೆ ಸ್ತ್ರೀಯರಿಗೆ ಗುರುಪ್ರಸಾದದ ಇಚ್ಛೆಯುಂಟಾದರೆ ಅವರು ಏನು ಮಾಡಬೇಕು? ಸ್ತ್ರೀಯರಿಗೆ ಮೋಕ್ಷಬೇಡೆನಿಸುವದೇ? ಅವರಿಗೆ ಆತ್ಮವು ಇರುವದಿಲ್ಲವೇ? ಆತ್ಮದ ಮೇಲೆ ನಿನ್ನ ನಂಬಿಗೆಯಿದೆ ಎಂಬದು ಈಗ ಸಿದ್ಧವಾಗಿಬಿಟ್ಟಿದೆ; ಆದರೆ 'A cow has no sole' ಎಂಬ ಯಾವ ವಾಕ್ಯವನ್ನು ನಾನು ಇಂಗ್ಲಿಷ ಪಠ್ಯಪುಸ್ತಕದಲ್ಲಿ ಓದಿರುವೆನೋ, ಅದರಂತೆಯೇ 'A woman has no sole' ಎಂದು ನಿನ್ನ ಅಭಿಪ್ರಾಯವಿದೆಯೇ ಹೇಗೆ? ಸ್ತ್ರೀಯರಿಗೆ ಅವರು ಸ್ತ್ರೀಯರೆಂದು ದೀಕ್ಷೆ ಕೊಡಲಿಕ್ಕೆ ಅದಾವ ಪುರುಷ ಗುರುವು ಇದುವರೆಗೆ ನಿರಾಕರಿಸುತ್ತಾನೆ; ಮತ್ತು ಗುರುವಾಗುವ ಪಾತ್ರತೆಯುಳ್ಳ ವ್ಯಕ್ತಿಯು ಪುರುಷನಾಗಿರುವದರಿಂದ ಯಾವ ಮುಮುಕ್ಷು ಸ್ತ್ರೀಯು ಅವರನ್ನು ಗುರುಮಾಡಿಕೊಳ್ಳಲಿಕ್ಕೆ ಹಿಂದೆಗೆದಿರುತ್ತಾಳೆ? ಆತ್ಮಾ ಇದು ಪುಲ್ಲಿಂಗದ್ದಿದೆ; ಸ್ತ್ರೀಲಿಂಗದ್ದಲ್ಲ. ಅಣ್ಣಾ, ಅದೇ ಮಾತು ಗುರುಶಿಷ್ಯರಿಗೂ ಸಂಬಂಧಿಸುವುದು."

"ಎಲೆ! ಆದರೆ ಜಂಬುವು ಹರೆಯದವನಿರುತ್ತಾನೆ; ಮತ್ತು ನೀನೂ ತರುಣಿಯಗಿರುತ್ತೀ. ಇಷ್ಟು ಹರೆಯದ ಸ್ತ್ರೀ-ಪುರುಷರು ಗುರುಶಿಷ್ಯರಂತಹ ನಂಬಿಗೆಯ ಸಂಬಂಧವಿರಿಸಕೂಡದು."

"ಹಾಗಾದರೇನು, ತರುಣ ಸ್ತ್ರೀ ಪುರುಷರು ಪ್ರೇಮಸಂಬಂಧವನ್ನಷ್ಟೇ ಇಡಬೇಕೋ? ಪ್ರೇಮಸಂಬಂಧಕ್ಕಿಂತ ಧಾರ್ಮಿಕ ಬುದ್ಧಿಯ ಗುರು ಶಿಷ್ಯ ಸಂಬಂಧವು ಹೆಚ್ಚು ವಿಹಿತವಲ್ಲವೇ?"

"ಆದರೆ ನಿನಗೆ ಇಷ್ಟರಲ್ಲೇ ಈ ಗುರುದೀಕ್ಷೆ ಪಡೆಯುವ ಉಸಾಬರಿಯನ್ನು ಯಾರು ಹೇಳಿದರು?

"ಅಣ್ಣಾ, ನೀನು ಸಿಟ್ಟಾಗಲಿಕ್ಕಿಲ್ಲವಷ್ಟೇ, ಈ ಪ್ರಶ್ನೆಯ ಸರಳವಾದ ಉತ್ತರವನ್ನು ನಾನು ನಿನಗೊಂದು ಮರು ಪ್ರಶ್ನೆಮಾಡಿ ಕೊಟ್ಟರೆ? ನಾನು ಈ ಗುರುದೀಕ್ಷೆ ಪಡೆಯಲಿಕ್ಕೆ ತರುಣಿಯೆಂದು ಯೋಗ್ಯಳಲ್ಲ; ಆದರೆ ನೀನು ಮಾತ್ರ ಒಳ್ಳೇ ಯೋಗ್ಯನಲ್ಲವೆ? ನಿನ್ನ ನಸ್ನೊಳಗೆ ಹೆಚ್ಚೆಂದರೆ ನಾಲ್ಕೇ ವರ್ಷಗಳ ಅಂತರವಿದೆ. ಅಣ್ಣಾ, ನೀನಾದರೂ ಯುವಕನೇ ಆಗಿಲ್ಲವೇ? ನನ್ನ ಮದುವೆ ಮತ್ತು ಬಾಳುವೆಯಾಗುವದಿದೆಯೆಂಬದಕ್ಕೆ ಒಪ್ಪಿಗೆ; ಆದರೆ ನಿನ್ನದಾದರೂ ಅದೆಲ್ಲಾಗಿದೆ? ನೀನು ಅಪ್ಪನಿಗೂ ಅವ್ವನಿಗೂ ಮತ್ತು ಆ ಬಡ ಶರಯೂಳಿಗೂ ಎಂಥ ದುಃಖದ ಕಡಲಲ್ಲಿ ನೂಕಿಕೊಟ್ಟಿರುತ್ತೀಯೆಂಬುದು ಗೊತ್ತಿದೆಯೋ ನಿನಗೆ? ಮತ್ತು ನೀನೇ ಈ ಬೈರಾಗಿ ಜೊತೆಯನ್ನು ಮನೆಗೆ ಕರೆತಂದು ಮಠ ನಿರ್ಮಿಸದಿದ್ದರೆ, ನಾನೆಲ್ಲಿ ಹೋಗುತ್ತಿದ್ದೆ ಗುರುವನ್ನು ಹುಡಲಿಕ್ಕೆ ಹೊರಗೆ? ಗುರುವು ತಾನಾಗಿ ಮನೆಗೆ ಸಾಗಿ ಬಂದಿರುವನು. ನೀನು ಹೇಗೆ ಪುಣ್ಯಮಾರ್ಗವನ್ನು ಅನುಸರಿಸುವೆಯೋ, ಆದರಂತೆ ನಾನೂ ಅದನ್ನು ತುಸ ಅನುಸರಿಸಿದರೆ ನಿನ್ನದೇನು ಕೆಟ್ಟಿತು?"

ಚಂದುವು ನಿರುತ್ತರನಾದನು. ಚಂದೂ ಹಾಗು ಬಿಂಬಾ ಇವರಿಬ್ಬರೂ ತಮ್ಮ ಮನದೊಳಗಿನ ನಿಜಸಂಗತಿಗಳನ್ನು ಹೇಳುತ್ತಿರಲಿಲ್ಲ. ಚಂದೂನ ಮನಸ್ಸಿನಲ್ಲಿ ಯಾವ ಸತ್ಯಸಂಗತಿಯನ್ನು ಹೇಳಬೇಕಾಗಿದ್ದಿತೋ ಆತನು ಅದನ್ನು ಬಿಂಬೆಗೆ ಆಡಿತೋರಿಸದಾದನು; ಮತ್ತು ಯಾವುದನ್ನು ಮೇಲ್ಮಾತಿಗೆಂದು ಆತನು ಹೇಳಹೋದನೋ ಅದು ಹೀಗೆ ವ್ಯರ್ಥ ಅಡರಿತು. ಜಂಬೂ ಮತ್ತು ಬಿಂಬಾ ಇವರು ಹರೆಯುದವರಾದುದರಿಂದ ಏಕತ್ರಿತರಾದರೆ ಅವರ ಹೆಜ್ಜೆಯು ತಪ್ಪಿಬಿದ್ದೀತು; ಮತ್ತು ತಮ್ಮ ಕುಟುಂಬದ ಮಾನಹಾನಿಯಾದೀತು. ಈ ನಿಜವಾದ ಭಯವೇ ಚಂದೂನ ಮನಸ್ಸಿನಲ್ಲಿತ್ತು; ಆದರೆ ಹೀಗೆ ಅನ್ನುವದರಿಂದ ಬಿಂಬೆಯ ಶೀಲದಲ್ಲಿ ಅವಿಶ್ವಾಸ ತೋರಿದಂತಾಗುತ್ತಿರಲಿಲ್ಲವೇ? ಅದಕ್ಕೆ ವಿಪರೀತವಾಗಿ ಬಿಂಬೆಗಾದರೂ ತಿಳಿದಿತ್ತೇನಂದರೆ, ಚಂದೂನ ನಿಜವಾದ ಕಟಾಕ್ಷವು ತನ್ನ ಗುರುಕರಣದ ಮೇಲಿರದೆ, ತನ್ನ ಚಾರಿತ್ರ್ಯದ ಮೇಲಿದೆ; ಆದರೆ ಅವಳಾದರೂ ಆ ಆಕ್ಷೇಪವನ್ನು ತನ್ನ ಮೇಲೆಳೆದುಕೊಂಡು ಅದಕ್ಕೆ ಉತ್ತರ

ಕೊಡುವ ಗೊಂದಲಕ್ಕೇಕೆ ಗುರಿಯಾಗುವಳು? ಅಂತೆಯೇ ಅವಳಾದರೂ ಅವನನ್ನು ಮೋಸಪಡಿಸಿ ಉತ್ತರವಿತ್ತಳು. ಗುರುಕರಣದಂತಹ ಸತ್ಕೃತ ದರ್ಶನೀ ನಿರಪವಾದವಾಗಿ ತೋರುವ ನೆವದ ಆಶ್ರಯವನ್ನೇ ಅವಳು ಪಡೆದಳು. ಅವಳಿಗೆ ಗೊತ್ತಿದ್ದುದೇನಂದರೆ, ಗುರು-ಶಿಷ್ಯ ಸಂಬಂಧವೆಂಬದು ಒಂದು ಪ್ರಶಸ್ತವಾದ ಆವರಣವಿರುವದರಿಂದ, ಅದರ ಆಚ್ಛಾದನದ ಕೆಳಗೆ ಸ್ತ್ರೀ-ಪುರುಷರು ಏನು ಬೇಕಾದ್ದನ್ನು ಮಾಡಿದರೂ ಅದು ಸಹಜವಾಗಿ ದಕ್ಕಿಹೋಗುತ್ತದೆ. ಅದಿರಲಿ. ಪ್ರಸಂಗಬಿದ್ದಿದ್ದರೆ ಬಿಂಬೆಯು ತೀರ ಸ್ಪಷ್ಟವಾಗಿ ಉತ್ತರ ಕೊಡಲಿಕ್ಕೆ ಸಿದ್ಧಳಾಗಿ:—“ಹೌದು; ನಾನು ಈ ಯುವಕ ಬೈರಾಗಿಯನ್ನು ಮನಸ್ಸಿನಿಂದ ಮೆಚ್ಚಿರುವೆನು; ಮತ್ತು ಇವನೊಡನೆ ಲಗ್ನವಾಗುವವಳು!” ಹೀಗಂದಿದ್ದರೆ ಚಂದುವು ಅದಕ್ಕೇನೆನ್ನಲು ಶಕ್ಯವಿತ್ತು? ವಿಲಾಯತಿಯಲ್ಲಿ ಚಂದೂನ ಪ್ರೇಮ ಸಂಬಂಧವು ಅಲ್ಲಿಯ ಯಾವಳೊಬ್ಬ ಇಂಗ್ಲಿಷ ಯುವತಿಯೊಡನೆ ಕೂಡಿರಬಹುದೆಂಬ ಸಂದೇಹವನ್ನು ಶರಯೂ, ಬಿಂಬೆ ಇವರು ಪರಸ್ಪರರಿಗೆ ವ್ಯಕ್ತಗೊಳಿಸಿದ್ದರು; ಮತ್ತು ತಂದೆ ತಾಯಿಗಳಿಗೆ ಅಮಾನ್ಯವಾಗಿದ್ದ ಇಂಗ್ಲಿಷ ಕುವರಿಯೊಡನೆ ವಿವಾಹವಾಗಲಿಕ್ಕೆ ಚಂದೂನ ಮನಸ್ಸು ಅವನಿಗೆ ಒತ್ತಾಯ ಪಡಿಸುತ್ತಿದ್ದರೆ, ಬಿಂಬೆಯು ಆ ಹರೆಯದ ಬೈರಾಗಿಯೊಡನೆ ಲಗ್ನವಾದರೆ ಚಂದುವು ಆ ಸಂಗತಿಗೆ ಹೇಗೆ ಹೆಸರಿಡಬೇಕು? ಇನ್ನು ಬೈರಾಗಿಯಾಗಿರುವದು ಲಗ್ನಕ್ಕೆ ವಿರೋಧವಾದ ಸಂಗತಿಯಾಗಿಲ್ಲ; ಯಾಕಂದರೆ ಅಕಾಲದಲ್ಲಿ ವೈರಾಗ್ಯ ತಾಳಿದ್ದ ಒಬ್ಬ ಬ್ರಹ್ಮಚಾರಿಯು ಮುಂದೆ ವಿವಾಹವಾಗಿ ಸಾಂಸಾರಿಕನಾಗುವನು; ಮತ್ತು ಆ ಬೈರಾಗಿಯು ತರುಣನಿರುವ ಮಾತಂತೂ ಲಗ್ನಕ್ಕೆ ಇಷ್ಟವೇ; ಅಲ್ಲದೆ ಹಿಂದುವಾಗಿದ್ದ ಜಂಬುವಿನೊಡನೆ ಲಗ್ನವಾಗುವದೇನೂ ವಿಲಾಯತೀ ಹುಡುಗಿಯೊಡನೆ ಮಿಶ್ರ ವಿವಾಹ ಮಾಡುವಷ್ಟು ಖಂಡಿತವಾಗಿಯೂ ದೂಷಣಾಸ್ಪದವಲ್ಲ. ಜಂಬುವು ಮನೆತನದಿಂದ ಬಡವನಾಗಿರಬಹುದು; ಆದರೆ ವಿಲಾಯತಿಯಲ್ಲಿ ಹಿಂದೂ ತರುಣರ ಕೊರಳಿಗೆಬಿದ್ದು, ಅವರನ್ನು ಮೋಹಗೊಳಿಸಿ ವಿವಾಹಕ್ಕೆ ಸಿದ್ಧಪಡಿಸುವ ಹುಡುಗಿಯರಾದರೂ ಅವರೇನು ಯಾವ ಸರದಾರರ, ಅಮೀರ, ಉಮರಾವರ, ಕೋಟ್ಯಾಧೀಶರ ಮಕ್ಕಳಿರುತ್ತಾರೊ? ಅವರು ಯಾವನೊಬ್ಬ ಹೊಟಲ್ಲ ಕೀಪರನ ಪುತ್ರಿ, ಅಂಗಡಿಗಳಲ್ಲಿ ಸಾಮಾನು ಕೊಡುವ ಸಂಬಳದ ಹೆಣ್ಣಾಳು, ಥರ್ಡಕ್ಲಾಸ ಸಿನೇಮಾ ನಟಿ ಇಂಥ ಬುಭುಕ್ಷಿತರೇ ಆಗಿರುವವರು! ತಾರುಣ್ಯದ ಸೌಂದರ್ಯವಷ್ಟೇ ಅವರ ಮುಖ್ಯ ಬಂಡವಾಲವು; ಮತ್ತು ಬಂಡವಲಗಾರರ ನಾಡಾದ ಆ ವಿಲಾಯತಿಯ ಸ್ವಾತಂತ್ರ್ಯದ ವಾತಾವರಣದಲ್ಲಿ ಆ ಸೌಂದರ್ಯದ

ಬಂಡವಾಲವು ತನ್ನ ಪ್ರಭಾವವನ್ನು ನಮ್ಮ ಹಿಂದೂ ತರುಣರ ಮೇಲೆ ಮೆರೆಯಿಸುವದಿಷ್ಟೇ. ತಾತ್ಪರ್ಯ, ಬಿಂಬೆಯು ಗುರುದೀಕ್ಷೆ ಪಡೆಯುವದಾದರೂ ಇಲ್ಲವೆ ಸ್ವೇಚ್ಛೆಯಿಂದ ಸ್ವಯಂವರ ಮಾಡಿಕೊಳ್ಳುವದಾದರೂ ಆ ಸಂಬಂಧದಲ್ಲಿ ಅಡ್ಡಿಮಾಡಲಿಕ್ಕೆ ಚಂದುವಿಗೆ ವಯಸ್ಸಿನ ಹಾಗು ಅಧಿಕಾರ ಇಲ್ಲವೆ ಯುಕ್ತಿವಾದದ ಆಧಾರವಿರಲಿಲ್ಲವೆಂಬ ಸಂಗತಿಯು ಚೆನ್ನಾಗಿ ಗೊತ್ತಿದ್ದ ಮೂಲಕ ಬಿಂಬೆಯು ಭಿಡೆ ಮುರವತ್ತು ಇಡದೆ ಆತನಿಗೆ ಬೇಕಾದಂತೆ ಉತ್ತರಕೊಡಲಿಕ್ಕೆ ಸಿದ್ಧಳಾಗಿದ್ದಳು.

ಬಿಂಬೆಯು ಮಠದಲ್ಲಿ ಹೆಚ್ಚಾಗಿ ಸುಳಿದಾಡುವಳೆಂಬ ದೂರನ್ನು ಚಂದುವು ಮಾಸಾಹೇಬರಿಗೆ ಹೇಳಿದನು. ಆಗ ಅವರು:—"ಈ ದೂರನ್ನು ನನ್ನೆದುರಿಗೆ ಹೇಳಿ ಪ್ರಯೋಜನವೇನು? ನೀನು ಮಠವನ್ನು ಸ್ಥಾಪಿಸಿದೆ; ಸ್ವಂತಕ್ಕಾಗಿ ಗುರುವನ್ನು ಮಾಡಿಕೊಂಡೆ; ಮತ್ತು ಅವನ ಭಜನೆಗೆ ತೊಡಗಿದೆ. ಅಂದಬಳಿಕ ಅವಳಿಗೆ ಅತ್ತ ಸುಳಿಯಬೇಡೆಂದು ಯಾರು ಅನ್ನಬೇಕು? ನಿನ್ನ ಗುರು ಹಾಗು ಗುರುಬಂಧು ಇವರನ್ನು ನಾವು ಯಾರಾದರೂ ಹೇಗೆ ದೂಷಿಸಬೇಕು? ಅವರಿಗೆ ಹಾಗಂದರೆ ನೀನೇ ಒಮ್ಮೊಮ್ಮೆ ನಮ್ಮ ವಿರುದ್ಧ ಸಿಟ್ಟಾದೀ. ಆದರಿಂದ ನಿನ್ನ ಬಂದೋಬಸ್ತನ್ನು ನೀನೇ ಮಾಡು. ನಾವೇನು ತಂದೆ-ತಾಯಿಗಳು. ನಮಗೆ ಲಜ್ಜೆಯಿಲ್ಲ, ಜಾಣತನಗಳಿಲ್ಲವೆಂದು ತಿಳಿದೇ ನಾವು ನಿಮ್ಮೊಡನೆ ನಡೆಯಬೇಕು. ನೀವು ಹೇಗೆಯೇ ನಡೆದರೂ ನಿಮಗದು ಒಪ್ಪುತ್ತದೆ. ಯಾಕಂದರೆ, ನೀವು ಹುಡುಗರು! ನಿಮ್ಮದೇನಾದರೂ ತಪ್ಪಿದರೆ-ತಾಕಿದರೆ ನಿಮಗೆ ದುಃಖವಾದರೂ ಅದು ನಮಗೇ. ತದ್ವಿರುದ್ಧವಾಗಿ ನಮಗೆ ಬೇಕಾದಷ್ಟು ದುಃಖವಾದರೂ ಅದರ ಪರಿವೆಯನ್ನು ನೀವೇಕೆ ಮಾಡಬೇಕು?"

ಬಿಂಬೆಯು ಜಂಬುವಿನೊಡನೆ ಆವಶ್ಯಕತೆಗಿಂತ ಹೆಚ್ಚು ಕೂಡಿ ನಡೆಯುವ ಸಂಗತಿಯು ಚಂದೂನ ಮನಸ್ಸಿಗೆ ಒಂದೇಸವನೆ ಚುಚ್ಚುತ್ತಿತ್ತು. ಆದ್ದರಿಂದ ತನ್ನ ಮೋಟರನ್ನು ತನ್ನ ಅಪ್ಪಣೆಯಿಲ್ಲದೆ ಜಂಬುವು ಹೊರಗೊಯ್ಯುತ್ತಾನೆಂಬ ನೆವಮಾಡಿ ಚಂದುವು ಒಮ್ಮೆ ಜಂಬುವನ್ನು ಕುರಿತು:—

"ಜಂಬೂ, ನನ್ನ ಮೋಟರನ್ನು ನನಗೆ ಕೇಳದ ಹೊರತು ನೀನು ಒಯ್ಯುವದು ಯೋಗ್ಯವಲ್ಲ."

"ಅದು ನನಗೆ ತಿಳಿಯುತ್ತದೆ; ಆದರೆ ನಾನು ಸ್ವತಃ ಮೋಟರನ್ನೆಂದೂ ಹೊರಹೊಡಿಸುವದಿಲ್ಲ; ಮತ್ತು ಒಯ್ಯುವದಿಲ್ಲ. ಹೊರಹೊರಡಿಸಿದ್ದ ಮೋ-ಟರಿನಲ್ಲಿ ಮೊದಲು ಬಿಂಬೆಯು ಕೂಡ್ರುವಳು. ಬಳಿಕ ಅದನ್ನೇರಲು ನನ್ನನ್ನು ಕರೆಯುವಳು; ಇಲ್ಲವೆ ನನಗೆ ನಡೆಸಲಿಕ್ಕೆ ಬಿನ್ನೈಸುವಳು. ಬಳಿಕ ನಾನ

ದನ್ನು ನಡೆಯಿಸುತ್ತೇನೆ. ಇದರಲ್ಲಿ ನನ್ನಿಂದ ನಿನ್ನ ಅಪರಾಧವಾದದ್ದೇನು?''

ಚಂದುವು ಜಂಬುವಿಗೆ ಯಾಕೋ-ಏನೋ ಎನ್ನಲು, ಅದಕ್ಕೆ ಪ್ರತಿಯಾಗಿ ಜಂಬುವಾದರೂ ಅದೇ ಬಗೆಯ ಭಾಷೆಯನ್ನು ಪಯೋಗಿಸಿದನು. ಆತನು ಮೊದಲೇ ತರುಣ. ಉನ್ಮತ್ತ ಬೈರಾಗಿಯ ಬರಿಯ ವೇಷದಿಂದಲೇ ಮನುಷ್ಯನಿಗೆ ಒಳ್ಳೇ ಆವೇಶವುಂಟಾಗುತ್ತದೆ. ಆದರಂತೆ ಜಂಬೂನಿಗೂ ಅದು ಬಂದಿತ್ತು. ಹಳೇ ಪದ್ಧತಿಯ ಭಾಗವತರಾಟದಲ್ಲಿ ರಾವಣನ ಇಲ್ಲವೆ ನೃಸಿಂಹನ ವೇಷ ಹಾಕುವವನಿಗೆ ಕನ್ನಡಿ ನೋಡುವ ಪ್ರತಿಬಂಧವಿತ್ತು; ಯಾಕಂದರೆ ಆ ಭಯಂಕರ ವೇಷವನ್ನು ನೋಡಿ ಆತನಿಗೆ ನಿಜವಾದ ಆವೇಶವು ಮೈದುಂಬುತ್ತಿತ್ತು. ನಿಸ್ಪೃಹತನದ್ದಾದರೂ ಒಂದು ಬಗೆಯ ಎದೆಗಾರಿಕೆಯೇ ಇರುತ್ತದೆ; ಆದರೆ ಅದನ್ನು ಮಾಡಲಿಕ್ಕೆ ಯಾವನು ಸಿದ್ಧನಾಗುವನೋ, ಅವನಿಗೆ ಇತ್ತಂಡದಿಂದಲೂ ಸಾಧಿಸುವದು. "ಬೇಡದವನ ದಾಸಿ ರಮೆಯಾಗುವಳೋ!" ಎಂಬ ದಾಸೋಕ್ತಿಯಲ್ಲಿ ಹೇಳಿರುವಂತೆ, ಬೇಡದವನಿಗೆ ಕೊಡುವದೂ ತುಚ್ಛೀಕರಿಸುವವನೆಡೆಗೆ ತೆರಳುವದೂ ಈ ಖೋಡಿ ಚಟಗಳು 'ರಮೆ'ಗೆ ನಿರಂತರ ಹತ್ತಿರುವವು. ಈ ಭಿಕ್ಷುಕನು ಬಿಕ್ಕೆ ಬೇಡತಕ್ಕವನಲ್ಲ, ಎಂಬ ಕೀರ್ತಿಯಾಯಿತೆಂದರೆ, ಜನರು ಆತನನ್ನು ಹುಡುಹುಡುಕಿ ಅವನಿದ್ದಲ್ಲಿಗೆ ಹೋಗಿ ಆತನಿಗೆ ಭಿಕ್ಷೆ ನೀಡುತ್ತಾರೆ. ನಮ್ಮ ಗುರುಮಹಾರಾಜರೂ ಶಿಷ್ಯ ಜಂಬುವೂ ಇವರು ಬೈರಾಗಿಗಳ ವೇಷಧರಿಸಿದಂದಿನಿಂದ ಅವರಿಗೆ ಇದೇ ಅನುಭವ ಬಂದಿತ್ತು; ಅಂದರೆ ಅವರ ಸಿರಿಚ್ಛೆಯ ಸೋಗು ಉಳಿದು, ಎಲ್ಲ ಇಚ್ಛೆಗಳೂ ಈಡೇರುತ್ತಿದ್ದವು. ಪೋಲೀಸರ ಕೈಗೆ ಸಿಗದಂತೆ ಹಾಗು ಉದ್ಯೋಗ ಮಾಡದೆ ಅವರ ಚೈನಿ ಹೇಗೆ ನಡೆಯುತ್ತಿತ್ತೆಂಬದು ಈಗ ತಮಗೆ ಗೊತ್ತಿದೆ. ಚಂದು ಈತನು ಹೊಸ ಶಿಷ್ಯನು; ಆದರೆ ಜಂಬುವು ಹಳೆ ಶಿಷ್ಯನು. ಹಳೇ ಶಿಷ್ಯನು ಹೊಸ ಶಿಷ್ಯನಿಗೇಕೆ ಬೊಗ್ಗಬೇಕು? ಚಂದೂ ಮತ್ತು ಜಂಬೂ ಇವರು ಸಾಧಾರಣ ಸಮವಯಸ್ಕರೇ. ಅರ್ಥಾತ್ ಚಂದುವು ಯಾಕೋ-ಏನೋ ಅಂದರೆ, ಜಂಬುವೂ ಚಂದುವಿಗೆ ಹಾಗೆ ಅನ್ನದಿರುವನೇ? ಚಂದುವು ಮನೆಯಿಂದ ಸಿರಿವಂತನಿರಬಹುದು; ಆದರೇನಾಯಿತು?

ಇರಲಿ. ಆ ಏಕವಚನದ ಅವಮಾನವನ್ನು ನುಂಗಿಕೊಂಡು ಚಂದುವು: "ನೀನು ಬಿಂಬಿಯೊಡನೆ ತಿರುಗಾಡ ಹೋಗುವದು ಅಪರಾಧವಾಗಲಿಕ್ಕಿಲ್ಲ, ಆದರೆ ಲೋಕದವರ ದೃಷ್ಟಿಯಿಂದ ಅದು ಚೆನ್ನಾಗಿ ತೋರುವದಿಲ್ಲವೆಂದು ನನ್ನ ಅಂಬೋಣವು"

"ಜನರ ದೃಷ್ಟಿಯಿಂದ ನೋಡುವ ಆವಶ್ಯಕತೆಯು ನನಗೇಕೆ? ನನಗೆ

ಅಹಿಂಸೆಯು ವ್ರತವಿದೆ; ಹಾಗು ಅಹಿಂಸೆಯು ಪ್ರೇಮದ ಹೊರತು ಪೂರ್ಣ ವಾಗುವದಿಲ್ಲ. ಅಂತೆಯೇ ಬಿಂಬೆಯ ಮೇಲೆ ಪ್ರೇಮ ಮಾಡಿ ನನ್ನ ಅಹಿಂಸೆಯ ವ್ರತವನ್ನು ಪೂರ್ಣಾವಸ್ಥೆಗೆ ಒಯ್ಯುತ್ತಿರುವೆನು. ಬಿಂಬೆಯು ಇಚ್ಛೆಗೆ ವಿಪರೀತವಾಗಿ ನಡೆದು ಅವಳಿಗೆ ನಾನು ತೊಂದರೆ ಕೊಟ್ಟಿದ್ದರೆ, ಅದು ಹಿಂಸೆಯಾಗುತ್ತಿತ್ತು; ಆದರೆ ನಾನು ಹಾಗೇನೂ ಮಾಡಿರುವದಿಲ್ಲ.''

ಆ ಧಾರ್ಷ್ಟ್ಯಕ್ಕೆ ಚಂದುವೇನು ಹೇಳುವನು? ಚಂದುವು ತನ್ನ ದೂರನ್ನು ಮಹಾರಾಜರೆದುರು ಹೇಳಿ ನೋಡಿದನು; ಆದರೆ ಅವರು ಅತ್ತ ಲಕ್ಷ್ಯವನ್ನೇ ಕೊಡಲಿಲ್ಲ. ಅವರು:—''ನೀವಿಬ್ಬರೂ ಗುರುಬಂಧುಗಳಾಗಿರುತ್ತೀರಿ. ಆದ್ದರಿಂದ ನೀವು ಪರಸ್ಪರರೊಡನೆ ಪ್ರೇಮದಿಂದಲೇ ನಡೆಕೊಳ್ಳಬೇಕು. ಬಿಂಬೆಯೇನೂ ನನ್ನ ಶಿಷ್ಯಣಿಯಲ್ಲ. ಅವಳ ಹಾಗೂ ಜಂಬೂನ ಸಂಬಂಧಗಳು ಪ್ರೇಮದವಿದ್ದರೆ, ಈ ಮಠದೊಳಗಿನ ಅಹಿಂಸೆಯ ವಾತಾವರಣಕ್ಕೆ ಭರತಿಯೇ ಉಂಟಾದೀತು. ಜಂಬೂನ ಬಗ್ಗೆ ನೀನು ಮನಸ್ಸಿನಲ್ಲಿ ಸಿಟ್ಟಾಗಿ ವರ್ತಿಸಿದರೆ, ನಿನ್ನ ಅಹಿಂಸೆಯು ವ್ರತವು ನಿರರ್ಥಕವಾದೀತಲ್ಲ! ಆಗ ಅದರ ಗತಿಯೇನು?''

ತಾತ್ಪರ್ಯವೇನಂದರೆ, ಬಿಂಬೆಗೆ ಹೇಳಿದರೆ ಆಕೆ ಹಾಗೆ ಅಂದಳು; ಜಂಬೂನಿಗೆ .ಹೇಳ ಹೋದರೆ ಈತನಿಂಥ ಹೀಗೆ ಸಂಭಾವನೆ ಪಡೆಯಬೇಕಾಯಿತು. ಪ್ರಾಣ ಹೀರುವ ಯಾವ ಹಿಂಸೆಯೂ ಚಂದುವಿನಿಂದ ಇತ್ತೀಚೆಗಾಗುತ್ತಿರಲಿಲ್ಲ; ಮತ್ತು ಯಾವುದೊಂದು ಕ್ರಿಮಿ ಕೀಟಕವು ಬಟ್ಟೆ-ಬರೆಗಳ ಮೇಲೆ ಕಂಡರೆ ಅವನು ಅವುಗಳಿಗೆ ತನ್ನ ರಕ್ತಶೋಷಿಸಗೊಡುತ್ತಿದ್ದನು; ಆದರೆ ಅಹಿಂಸೆಯೆಂದರೆ ಪ್ರೇಮ; ಮತ್ತು ಪ್ರೇಮವೆಂದರೆ ಅಹಿಂಸೆ ಈ ಸಮೀಕರಣವು ಮಾತ್ರ ಏನಾದರೂ ಅವನ ಮನಸ್ಸಿಗೆ ಒಪ್ಪದಾಯಿತು.

ದಿನದಿನಕ್ಕೆ ಗುರು-ಶಿಷ್ಯರ ವರ್ತನದ ಬೊಬ್ಬಾಟವು ಊರಲ್ಲಿ ಹೆಚ್ಚಾಗ ಹತ್ತಿತು. ಆ ಮಾತಿನ ವಿಚಾರ ಮಾಡುವದಕ್ಕೆ ಚಿಂತಾತುರನಾದ ಚಂದುವಿನ ಮನಸ್ಸು ಹಲಕೆಲವು ಗಳಿಗೆಗಳನ್ನು ಕಳೆಯಹತ್ತಿತು; ಆತನು ತನ್ನ ಕೋಣೆಯೊಳಗೆ ಟೇಬಲ್ಲಿನೆದುರು ಸುಮ್ಮನೆ ಕೂರುವನು. ಅವನು ಹೊರಗಿನವರ ಸಂಬಂಧವನ್ನು ಹರಕೊಂಡಂತಾದ್ದರಿಂದ ಭೆಟ್ಟಿಗೆಂದು ಬರುವ ಗೆಳೆಯರು ಬಾರದಂತಾದರು. ಭಾವನೆಯಲ್ಲಿ ಬದಲಾವಣೆಯಾದದ್ದು ಒಬ್ಬ ಚಂದುವಿನಲ್ಲೇ. ಆತನ ಮಿತ್ರರ ಭಾವನೆಗಳು ಬದಲಾವಣೆಯಾಗಲಿಕ್ಕೆ ಅಂಥದೇನೂ ಘಟಿಸಿರಲಿಲ್ಲ. ಗುರುಮಹಾರಾಜರ ಕಡೆಗೆ ಪೂಜ್ಯತೆಯಿಂದ ಚಂದುವಿನ ಯಾವ ಗೆಳೆಯನೂ ನೋಡುತ್ತಿರಲಿಲ್ಲ. ಆ ವ್ಯಕ್ತಿಯಲ್ಲಿ ಮಾಹಾತ್ಮ್ಯದ ಅಂಥ ಲಕ್ಷಣವೇನೂ ಅವರಿಗೆ ಕಂಡುಬರಲಿಲ್ಲ.

ಗೆಳೆಯನೆಂದು ಚಂದುವಿನೊಡನೆ ಚರ್ಚಿಸಿ ಆತನ ಭೋಳೆತನವನ್ನು ಕಿತ್ತೊಗೆಯಬೇಕೆಂದು ಆ ಮಿತ್ರರ ಮನಸ್ಸಿನಲ್ಲಿ ಬರುತ್ತಿತ್ತು; ಆದರೆ ಈ ಸೂಕ್ಷ್ಮ ಸಂಗತಿಗೆ ಒಮ್ಮೆಲೆ ಕೈಹಚ್ಚುವದು ಸರಿಯಲ್ಲವೆಂದೂ ಕ್ರಮಕ್ರಮದಿಂದ ಎಲ್ಲವೂ ಸರಳವಾದೀತು; ಅವಸರಪಟ್ಟರೆ ಅದರ ಪರಿಣಾಮವು ಒಂದುವೇಳೆ ವಿಪರೀತವಾದೀತು, ಎಂದೂ ಅವರಿಗೆ ಅನಿಸುವದು. ಬೇರೆ ಕೆಲವರಿಗೆ ಚಂದೂ ನಂತಹ ಸುಶಿಕ್ಷಿತ ನವಮತವಾದಿಯು ಗುರುಭಜನೆಗೆ ಹತ್ತಿರುವದರಿಂದ ಅವನಿಗೆ ಏನಾದರೂ ಅಂಥ ಕಾರಣವೇ ಉಂಟಾಗಿದ್ದೀತು. ಅವರವರ ಅನುಭವ ಅವರಿಗೇ. ಆ ಬಗ್ಗೆ ನಾವೇಕೆ ಸುಮ್ಮನೆ ಅನ್ನಬೇಕು? ಬುವಾಬಾಜಿಗೆ ಬಲಿಬಿದ್ದ ವರನ್ನೆಲ್ಲ ಒಂದೇ ಪಾವಿನಿಂದ ಹೇಗೆ ಅಳೆಯಬಂದೀತು? ಎಡಮುಖದ ಶಂಖ ದಂತೆ ಬಲಮುಖದ ಶಂಖಕ್ಕೂ ಶಂಖವೇ ಅನ್ನುತ್ತಾರೆ; ಆದರೆ ಆ ಬಲ ಮುಖದ ಶಂಖಕ್ಕೆ ಅದೆಷ್ಟೋ ಮನ್ನಣೆ! ಸುಶಿಕ್ಷಿತ ಮನುಷ್ಯನು ದೇವಬ್ರಾಹ್ಮ ಣರಲ್ಲಿ ಶ್ರದ್ಧೆಯುಳ್ಳವನೆಂದಾದರೆ, ಅಶಿಕ್ಷಿತ ಶ್ರದ್ಧಾಳುವಿನಂತೆ ಅವನನ್ನು ತುಚ್ಛತೆಯಿಂದ ಒಮ್ಮೆಲೆ ಬದಿಗೊತ್ತಲಾಗುವದಿಲ್ಲ. ಅಂತೂ ಒಂದಿಲ್ಲೊಂದು ಬಗೆಯಿಂದ ವಿಚಾರಿಸಿದರೂ ಚಂದೂನ ಮಿತ್ರರು ಚಂದೂನಿಂದ ದೂರಿರಹತ್ತಿ ದ್ದರು.

ಆತನು ಆಯ್. ಸಿ. ಎಸ್ಸಿನ ನೌಕರಿಗೆ ಹೋಗತಕ್ಕವನಿದ್ದರೆ ಆತನ ಪತ್ರವ್ಯವಹಾರವು ಮೊದಲಿನಂತೆ ಸಾಗುತ್ತಿತ್ತು; ಆದರೆ ಆತನು ಮನಸ್ಸಿನಿಂದ ಆ ಮಾರ್ಗವನ್ನು ಬಿಟ್ಟೇಬಿಟ್ಟದ್ದರಿಂದ ಆ ಉದ್ಯೋಗವೂ ಈಗ ಕಟ್ಟಾಗಿತ್ತು. ತಾನು ಸಹಿ ಮಾಡಿ ಪೋಸ್ಟಿಗೆ ಹಾಕಲು ಕೊಟ್ಟಿದ್ದ ರಾಜಿನಾಮೆ ವಿಲಾಯತಿಗೆ ಹೋಗಿ ತಲುಪಿರಬೇಕೆಂದು ಆತನ ತಿಳಿವಳಿಕೆಯಿತ್ತಾದ್ದರಿಂದ, ಆ ರಾಜಿನಾಮೆ ಯ ಉತ್ತರ, ಕಿಮಾನಪಕ್ಷ ಔಪಚಾರಿಕ ರಸೀದಿಯಾದರೂ ಬಂದೀತೆಂದು ಚಂದುವು ದಾರಿಕಾಯುತ್ತಿದ್ದನು. ಸಿಗರೇಟ ಸೇದುವದನ್ನು ಆತನು ಬಿಟ್ಟು ಬಿಟ್ಟಿದ್ದನು. ಆದರಿಂದ ಆ ಮನಮೆಚ್ಚಿಗೆಯ ವಿಷಯವೂ ಕಟ್ಟಾಗಿತ್ತು ಹೀ- ಗಾಗಿ ಟೇಬಲ್ಲಿನ ಮೇಲೆ ಮೊಣಕೈಯೂರಿ, ಎರಡೂ ಅಂಗೈಗಳ ಬುಟ್ಟಿ ಮಾಡಿ ಅದರಲ್ಲಿ ಮೋರೆಯಿರಿಸಿಕೊಂಡು ಶೂನ್ಯದೃಷ್ಟಿಯಿಂದ ನೋಡುತ್ತ ಕೂರುವ ಪ್ರಸಂಗವು ಆತನಿಗೆ ಬರತೊಡಗಿತ್ತು.

ಹಗಲೆಲ್ಲ ಹಾರುತ್ತ ಜಿಗಿಯುತ್ತ ಚಂಡಿನಂತೆ ಚಪಲತೆಯಿಂದ ಮನೆ ತುಂಬ ಮತ್ತು ಮನೆ ಹೊರಗೂ ಅಡ್ಡಾಡುವ ಮೊದಲಿನ ಚೆಂದುವೆತ್ತ; ಹಾಗು ತನ್ನ ಕಚೇರಿಯ ಕೋಣೆ, ಗುರುಮಹಾರಾಜರ ಮಠ ಮತ್ತು ವಾಡೆ ಯೊಳಗಿನ ಭೋಜನ ಶಾಲೆ ಈ ಬಂಧಿಸ್ಥ ತ್ರಿಕೋಣದಲ್ಲಿ ಬಸವನ ಹುಳದ

ಹೆಜ್ಜೆಯಿಂದ ಹೊಸೆದಾಡುವ ಚಂದುವೆತ್ತ! ಯಾವನೊಬ್ಬ ಅಫು ತಿನ್ನುವ ಮನುಷ್ಯನಂತೆ ಗುರುಭಕ್ತಿಯಿಂದ ಚಂದುವಿನ ಮನಸ್ಸು ಮತ್ತು ಅದರಿಂದ ಶರೀರ ಇವು ತೂಕಡಿಸುವಂತಾಗಿದ್ದವು. ತಂದೆ-ತಾಯಿಗಳೊಡನೆ ಮಾತು-ಕಥೆಯಾಡುವ ಆತನ ನಿಜವಾದ ಆನಂದವು ಬಹುತರ ಲುಪ್ತವಾಗಿತ್ತು; ಮತ್ತು ನಗೆಚೇಷ್ಟೆ, ವಿನೋದ ಇವುಗಳಂತೂ ಆತನೊಳಗಿಂದ ಎತ್ತೋ ಹೊರಟು ಹೋಗಿದ್ದವು!

---

ಪ್ರಕಾಶದ ಮೊದಲನೇ ಕಿರಣ

ಕೆಲ ದಿನಗಳು ಈ ಸ್ಥಿತಿಯಲ್ಲಿ ಕಳೆಯಲು ಒಂದು ಸಂಗತಿಯು ಅಕಲ್ಪಿತವಾಗಿ ಘಟಿಸಿತು. ಮಾಸಾಹೇಬರ ಒಬ್ಬ ಸೋದರಳಿಯನು ಸಾಗರಪ್ರಾಂತದ ಗುಪ್ತ ಪೋಲೀಸ ಇಲಾಖೆಯಲ್ಲಿ ಇನ್ಸಪೆಕ್ಟರನಾಗಿದ್ದನು. ಆತನು ಇಂದು ತನ್ನ ಸೋದರತ್ತೆಯ ಭೆಟ್ಟಿಗಾಗಿ ಚೋದ್ಯಪುರಕ್ಕೆ ಸಹಜವಾಗಿ ಬಂದಿದ್ದನು. ಆ ಸೋದರಳಿಯನು ಪ್ರೇಮಳನೂ ನಂಬಿಗಸ್ಥನೂ ಆಗಿದ್ದನು. ಮಾಸಾಹೇಬರೇ ಆತನನ್ನು ಸಾಕಿ ಸಲುಹಿ ದೊಡ್ಡವನನ್ನಾಗಿ ಮಾಡಿದ್ದರಿಂದ, ಆತನು ಮಕ್ಕಳಂತೆ ಆಜ್ಞಾಧಾರಕನೂ ಕೃತಜ್ಞನೂ ಆಗಿದ್ದನು. ಚಂದೂನ ಸ್ಥಿತಿಯ ಪರಿವರ್ತನದ ನಂತರ ಆ ಸೋದರಳಿಯನು ಇಂದೇ ಮೊದಲು ಬಂದುದರಿಂದ, ನಡೆದ ಪ್ರಕಾರದ ಬಗ್ಗೆ ಆ ಉಭಯತರಲ್ಲಿ ಸಹಜವಾಗಿಯೇ ಮಾತು ಕಥೆ ನಡೆದವು; ಆದರೆ ತಮ್ಮಗಳ ಸಂಭಾಷಣವು ಇನ್ನಾರಿಗೂ ಕೇಳಿಸಬಾರದೆಂದು ಮಾಸಾಹೇಬರು ಆತನನ್ನು ತಮ್ಮ ಖಾಸ ಕೋಣೆಗೆ ಕರೆದೊಯ್ದರು; ಹಾಗು ಕದವನ್ನಿಕ್ಕಿಕೊಂಡು ಬಳಿಕ ಮುಖ್ಯ ಮುದ್ದೆಯ ಮಾತಿಗೆ ಪ್ರಾರಂಭ ಮಾಡಿದರು.

ಮಾಸಾಹೇಬರು:—"ಬನ್ಸೀಧರ, ನೀನು ತಕ್ಕವೇಳೆಗೇ ಬಂದೆಯೆನಬೇಕು. ಮನಬಿಚ್ಚಿ ಮಾತನಾಡಲಿಕ್ಕೆ ದೊರಕಿರದಿದ್ದರೆ, ಮನದಲ್ಲೇ ನೊಂದು ನೊಂದು ನಾನು ಇಷ್ಟರಲ್ಲೇ ಬೇನೆಬೀಳಬಹುದಾಗಿತ್ತು ನಮ್ಮ ಮನೆಯಲ್ಲಿ ನಡೆದಿರುವ ಪ್ರಕಾರಗಳ ಬಗ್ಗೆ ನಿನಗೇನೆನಿಸುತ್ತದೆ?"

ಬನ್ಸೀಧರ: ಮಾಸಾಹೇಬ, ಅನಿಸುವದೇನು? ನಮ್ಮ ಗುಪ್ತಪೋಲೀಸಿನ ಉದ್ಯೋಗದಲ್ಲಿ ಮನುಷ್ಯಸ್ವಭಾವದ ಅನುಭವವು ನನಗೆ ದಿನಾಲು ಎಷ್ಟು ಬರುವದೋ ಮನೆಯಲ್ಲಿದ್ದ ನಿಮಗೆ ಅಷ್ಟು ಹೇಗೆ ಬರುವದು? ಆದರೆ ನಾನು ಒಮ್ಮೆಲೆ ತಿಳಿಸುವದೇನಂದರೆ, ನಡೆದ ಪ್ರಕಾರವೇನೂ ಸರಳವಾದದ್ದಲ್ಲ. ಇದರಲ್ಲಿ ಏನಾದರೂ ಗೊಂದಲವಿರಬೇಕೆಂದು ನನಗನಿಸುತ್ತದೆ; ಮತ್ತು ನಾನು

ಇಂದು ಇಲ್ಲಿಗೆ ಬಂದಿರುವದು ನಿಮ್ಮ ಭೆಟ್ಟಿಗೆ ಬಂದದ್ದಲ್ಲದೆ, ನನ್ನದೂ ಒಂದು ಸರಕಾರೀ ಕೆಲಸವನ್ನು ಬಗಲಿಗೆ ಹಾಕಿಕೊಂಡೇ ಬಂದಿರುತ್ತೇನೆ. ಅದೇನೆಂಬ ದನ್ನು ನಿಮಗೆ ಆ ಮೇಲೆ ತಿಳಿಸುವೆನು; ಆದರೆ ಇದೆಲ್ಲ ಪ್ರಕಾರ ಹೇಗೆ ಹೇಗೆ ನಡೆಯಿತೆಂಬದನ್ನು ಮೊದಲು ನನಗೆ ಕ್ರಮವಾಗಿ ತಿಳಿಸಿರಿ.

"ಬನ್ಸೀಧರ, ಈ ಬಗ್ಗೆ ನನ್ನ ಸ್ವಂತದ ಮಾಹಿತಿಯೆಂದರೆ ತೀರ ಅಲ್ಪ ವಿದೆ. ಗೊತ್ತಿರುವುದಾದರೂ ಇಷ್ಟೇ. ಚಂದೂ ವಿಲಾಯತಿಯಿಂದ ಬಂದ; ತಾನು ಆಯ್. ಸಿ. ಎಸ್. ಪರೀಕ್ಷೆ ಪಾಸಾಗುವೆನೆಂಬ ಖಾತ್ರಿಯಿಂದಲೇ ಬಂದ. ನಾವೆಲ್ಲರೂ ಆನಂದದಲ್ಲಿದ್ದೆವು. ಮುಂಗಡ ಅಭಿನಂದನದ ಸಮಾರಂಭಗಳು ನಡೆದಿದ್ದವು. ಅವು ನಡೆದಿರುವಾಗ ಒಂದು ದಿನ ಚಂದು ವು ಬೆಳಗಿನ ತನ್ನ ಕುದುರೇ ಸವಾರಿ ಮುಗಿಸಿಕೊಂಡು ಬಂದ; ಹಾಗು ತನ್ನ ಹಿರಿಯರ ತೊಡೆಗೆ ತೊಡೆಯಾನಿಸಿಕೊಂಡು ಬೀಡೀ ಸೇದಿದ. ಆಗ ನಾನು ಆತನಿಗೆ ಕೊಂಚ ಸಿಟ್ಟಿನಿಂದ ಅಂದೆ. ಆತನು ತುಸ ಹೊತ್ತಿನ ಮೇಲೆ ತನ್ನ ಬೇಟೆಯ ತುಬಾಕಿ ತಕ್ಕೊಂಡು ಹಿಮ್ಮಗ್ಗಲಿನ ತೋಟಕ್ಕೆ ಹೋದ. ಆಗ ಬೆಳಗಿನ ಒಂಬತ್ತರ ಸಮಯ. ಅವನು ಅಲ್ಲಿಯ ಮರವೊಂದರ ಮೇಲಿನ ಎರಡು ಹಕ್ಕಿಗಳನ್ನು ಕೊಂದ. ಅಷ್ಟರಲ್ಲಿ ಅತ್ತಣಿಂದ ಬೈರಾಗಿಗಳ ಜೊತೆ ಯೊಂದು ಬಂತು. ಅವರಲ್ಲೊಬ್ಬನು ಅಹಿಂಸೆಯ ನಿಷೇಧ ಮಾಡಿದ. 'ದೇವರು ನಿನ್ನೀ ಹಿಂಸೆಯ ನ್ಯಾಯನಿರ್ಣಯ ಮಾಡುವನು, ನಿನ್ನನ್ನು ಶಿಕ್ಷಿಸುವನು; ಕಾರಣ ಇಂದಿನ ದಿನ ಮತ್ತು ಈಗಿನ ವೇಳೆ ಇವುಗಳನ್ನು ಲಕ್ಷ್ಯದಲ್ಲಿಡು' ಎಂದ. ಆ ಇಬ್ಬರೂ ಬೈರಾಗಿಗಳು ಆ ಎರಡೂ ಹಕ್ಕಿ ಗಳನ್ನೆತ್ತಿಕೊಂಡು ಭದ್ರೇಶ್ವರಕ್ಕೆ ಹೋದರು. ಅವರ ನಿಷೇಧಕ್ಕೆ ಆಗ ಚಂದು ಬೆದರಲಿಲ್ಲ; ಬಿಕ್ಕೆ ಹಾಕಲಿಲ್ಲ. ಅದಕ್ಕೆ ವಿಪರೀತವಾಗಿ ಈತನೇ ಅವರನ್ನು ಹಲವು ಬಗೆಯಾಗಿ ಜರೆದು: 'ಭಲೆ, ಭಲೆ! ದೇವರು ನನ್ನದೇನು ಮಾಡು ವನೋ ನೋಡಿಕೊಳ್ಳುತ್ತೇನೆ' ಎಂದೂ ಅಂದ; ಮತ್ತು ಯೋಗವೂ ಹಾಗೆ ಯೇ ಕೂಡಿ ಬಂದದ್ದರಿಂದ ಅಂದೇ ಮಧ್ಯಾಹ್ನ ಈತನ ಆಯ್. ಸಿ. ಎಸ್. ಪರೀಕ್ಷೆ ಪಾಸಾದ ತಂತಿ ಬಂತು! ಮುಂದೊಂದು ದಿನ ಸಾಯಂಕಾಲದಲ್ಲಿ ಆತನ ವಿಶಿಷ್ಟ ಗೆಳೆಯರು ಔತಣಕ್ಕೆಂದು ಬಂದರು. ಅವರೆಲ್ಲರೂ ಊಟಕ್ಕೆ ಸಜ್ಜಾಗಿ ಟೇಬಲ್ಲಿಗೆ ಬಂದು ಕುಳಿತರು. ಇಷ್ಟರಲ್ಲಿಯೇ ಬೇರೊಂದು ಕೋಣೆಯಲ್ಲಿ ಚಂದೂ ಸೇದುತ್ತಿದ್ದ ಸಿಗರೇಟಿನ ಹೊಗೆಯು ಆತನ ಎದೆಗೆ ಹತ್ತಿ ಅವನಿಗೆ ಬವಳಿ ಬಂತು. ಆತನ ಬಾಲ್ಯ ಸ್ನೇಹಿತ ಡಾಕ್ಟರ ಜಾಲಂ ದರನು ಆತನಿಗೆ ಕೆಲ ಉಪಚಾರ ಮಾಡಿ ಅವನನ್ನು ಭೋಜನದ ಟೇಬಲ್ಲಿಗೆ

ತಂದು ಕೂರಿಸಿದನು; ಆದರೆ ಚಂದುವು ಆ ದಿನ ಉಣಲಿಲ್ಲ; ಕುಡಿಯಲಿಲ್ಲ; ಹೆಚ್ಚಾಗಿ ಮಾತು ಕೂಡ ಆಡಲಿಲ್ಲ. ಅದನ್ನು ಕಂಡು ಆ ಮಿತ್ರ ಪರಿವಾರವು ನಿರಿಚ್ಛೆಯಿಂದ ಹೇಗಾದರೊಮ್ಮೆ ಊಟ ತೀರಿಸಿಕೊಂಡು, ತಮ್ಮ ತಮ್ಮ ಮನೆಗೆ ಹೊರಟು ಹೋಯಿತು. ಚಂದುವು ಆ ಇಡಿ ರಾತ್ರಿಯಲ್ಲಿ ಕೋಣೆಯಲ್ಲೇ ಮಲಗಿದ್ದು, ಬೆಳಿಗ್ಗೆ ಎದ್ದು ತುಸ ಗುಣವೆನಿಸುವದೆಂದ. ಚಹ ತಕ್ಕೊಂಡ; ಮತ್ತು ಮಾಲೀ ಕನ್ನನನ್ನು ಜೊತೆಗೆ ಕರೆಕೊಂಡು ಕಾಲಿಲೆ ನಡೆದೇ ನೆಟ್ಟಗೆ ಭದ್ರೇಶ್ವರಕ್ಕೆ ಹೋದ. ಆಗಿನಿಂದ ಆತನ ವರ್ತನವು ಚಮತ್ಕಾರಿಕದ್ದಾಗಹತ್ತಿತು. 'ನನ್ನಿಂದ ಹಿಂಸೆಯಾಯಿತು' ಎಂದಂದು, ಆತನು ಅತ್ತ; ಮತ್ತು ಅಹಿಂಸೆಯ ವ್ರತಹಿಡಿದ ಬಗ್ಗೆ ಅವನು ಕನ್ನನ ಕೊರಳೊಳಗಿನ ತುಳಸೀ ಮಣಿಗಳ ಮಾಲೆಯನ್ನು ತನ್ನ ಕೊರಳೊಳಗೆ ಹಾಕಿಕೊಂಡ!

'ಮಧ್ಯಾಹ್ನದಲ್ಲಿ ತಾನು ಮನೆಗೆ ಊಟಕ್ಕೆ ಬರಲಾರೆನೆ'ಂಬ ನಿರೂಪವನ್ನು ಆತನು ಕನ್ನನೊಡನೆ ನಮಗೆ ಕಳಿಸಿದನು. ನಾವು ಮನದಲ್ಲಿ ಅಂಜಿದೆವು. ಸಂಜೆಯ ವರೆಗೆ ದಾರಿ ನೋಡಿ ನಾವಿಬ್ಬರೂ ಸಾರೋಟಿನಲ್ಲಿ ಭದ್ರೇಶ್ವರಕ್ಕೆ ಹೋದೆವು; ಮತ್ತು ಗುರುವಾಗಿರುವ ಈ ಬೈರಾಗಿಯು 'ನಾಳೆ ನಿಮ್ಮ ಮನೆಗೆ ವಸತಿಗಾಗಿ ಬರುವೆವು' ಎಂಬ ವಚನವನ್ನು ಚಂದುವಿಗೆ ಕೊಟ್ಟ ಮೇಲೆಯೇ ಚಂದುವು ನಮ್ಮೊಡನೆ ಹಿಂದಿರುಗಿದ; ಹಾಗು ಅದೇ ರಾತ್ರಿಯಲ್ಲಿ ನಮ್ಮ ಅಥಿತಿಗೃಹವನ್ನು ಮಠವನ್ನಾಗಿ ನಿರ್ಮಿಸಿದ. ಅದಕ್ಕೆ 'ಪರ್ಣಶಾಲೆ' ಎಂಬ ಹೆಸರನ್ನು ಇಟ್ಟ; ಮತ್ತು ಆಗಿನಿಂದ ಯಾವನೊಬ್ಬ ವಿರಕ್ತನಂತೆ ಆತ ನಡೆಯಹತ್ತಿದ. ಆಯ್. ಸಿ. ಎಸ್. ನೌಕರಿಗೆ ರಾಜೀನಾಮೆ ಕಳಿಸಿದ; ಹಾಗು ಬ್ರಹ್ಮಚರ್ಯದಲ್ಲೇ ಶೇಷಾಯುಷ್ಯ ಕಳೆಯುವೆನೆಂಬ ಪಣತೊಟ್ಟ! ಬನ್ನೀ, ಈ ಕರ್ಮಭೋಗಕ್ಕೆ ಏನು ಮಾಡಬೇಕೆಂಬುದನ್ನು ನೀನೇ ಹೇಳು ನೋಡೋಣ? ಹುಚ್ಚರಿಗೆ ವಿರುದ್ಧ ಮಾತಾಡಬಾರದೆಂದೆನ್ನುವುದರಿಂದಲೇ ನಾನು ಇದುವರೆಗೂ ಸಿಟ್ಟಿನಿಂದ ಏನೂ ಅಂದಿಲ್ಲ. ಆದಿರಲಿ. ಇವರು ಮನೆಯ ಹಿರಿಯರು-ಗಂಡಸರು. ಇವರು ಏನಾದರೂ ಹಂಚಿಕೆ ಮಾಡಬೇಡವೇ? ಆದರೆ ಇವರು ಮಗನನ್ನು ಹೇಗೆ ಅನುವರ್ತಿಸುವರು? ಅವನಿಗೆ ಹೇಗೆ ವಶವಾಗುತ್ತಾರೆ? ಅವನ ಇಚ್ಛೆ ಹೇಗೆ ಮಾಡುತ್ತಾರೆಂಬುದನ್ನು ಬಾಲ್ಯದಿಂದಲೂ ನೀನು ಕಂಡಿರುವೆ; ಹಾಗು ಅದರಂತೆಯೇ ಈಗ ಆ ಬೈರಾಗಿಯ ಭಜನೆಗೆ ಸ್ವಂತ ಇವರೂ ಹತ್ತಿರುತ್ತಾರೆ; ಆದರೆ ಇವರು ಹಾಗೆ ಮಾಡುತ್ತಿರುವದು ದುಃಖದಿಂದಲೋ ನಿರಾಶೆಯಿಂದಲೊ ತಿಳಿಯದು.

ಚಂದುವಿನಲ್ಲಿಯು ನನ್ನ ಪ್ರೀತಿಯೇನೂ ಕಡಿಮೆಯಿಲ್ಲ; ಆದರೆ ಆತನ ಈ ಹುಚ್ಚುಚಾಕ್ಟಾರದ ಆಟದಲ್ಲಿ ಭಾಗವಹಿಸಲಾಗದೆಂದು ನಾನು ಗಟ್ಟಿಮನಸ್ಸು ಮಾಡಿರುತ್ತೇನೆ. ಈಗ ನೀನು ಬಂದದ್ದು ದೇವರೇ ಒಲಿದಂತಾಗಿದೆ. ಅದರಿಂದ ನೀನು ಇದರಲ್ಲಿ ತುಸ ಲಕ್ಷ್ಯಗೊಡು. ಏನಾದರೂ ಪತ್ತೆಹತ್ತಿದರೆ ಹಚ್ಚು. ನಾನು ಮನೆ ಹಿಡಿದು ಕುಳಿತವಳು-ತೆರೆಯೊಳಗಿನ ಹೆಂಗಸು. ನನ್ನ ಬುದ್ಧಿ ಎಷ್ಟು ಓಡೀತು?"

"ಮಾಸಾಹೇಬ, ನೀವು ಸ್ತ್ರೀಯಾಗಿದ್ದೂ ಸರ ಸಾಹೇಬರಿಗಿಂತ ಹೆಚ್ಚು ಎದೆಗಾರಿಕೆದೋರಿರುತ್ತೀರಿ. ಇದೇನು ಕಡಿಮೆಯಾಯಿತೇ? ಆದಿರಲಿ. ಸಿಗ ರೇಟಿನ ಹೊಗೆಯು ಎದೆಗೆ ತಗಲುವ ವರೆಗೆ ಈ ವಿಪರೀತ ಸ್ಥಿತಿಯು ಖಂಡಿತ ವಾಗಿಯೂ ನಡೆದಿರಲಿಲ್ಲೆಂದು ನಾನು ತಿಳಿಯಬಹುದೇ?"

"ನಾನು ಕೇಳಿರುವ ಸಂಗತಿಯಿಂದ ನನಗಂತೂ ಹಾಗೆನಿಸುತ್ತದೆ. ಆ ದಿನ ಮಧ್ಯಾಹ್ನ ಊಟದ ಹೊತ್ತಿಗೆ ಚಂದೂ ಒಳ್ಳೇ ಆನಂದದಲ್ಲಿದ್ದನೆಂಬ ದನ್ನು ಮಾತ್ರ ನಾನು ಖಾತ್ರಿಪೂರ್ವಕ ಹೇಳಬಲ್ಲೆನು."

ಅದಕ್ಕೆ ಡಿ ಇ. ಬನ್ಸೀಧರನು:—"ಒಳ್ಳೇದು. ವಿಚಾರಣೆಗೆ ಮೊದಲಿ ನಿಂದಲೇ ಪ್ರಾರಂಭಿಸಬೇಕೆಂದು ನಮ್ಮ ಪೋಲೀಸ ಸಂಶೋಧನದೊಳಗಿನ ಪ್ರಥಮ ವಿಷಯುವೇ ಆಗಿದೆ.

ಬಳಿಕ ಮಾಸಾಹೇಬರಿಗೆ ನಾಲ್ಕು ಆಶ್ವಾಸನದ ಮಾತುಗಳನ್ನು ಹೇಳಿ, ಬನ್ಸೀಧರನು ತಿರುಗಾಡಲಿಕ್ಕೆ ಹೋಗುವ ನೆವದಿಂದ ಹೊರಬಿದ್ದನು. ಆಗ ಸ್ವಂತ ಚಂದುವಿಗೆ ಮಠದಲ್ಲಿ ಭೆಟ್ಟಿಯಾಗುವದನ್ನು ಆತನು ಬೇಕಂ ತಲೇ ಬಿಟ್ಟನು; ಯಾಕಂದರೆ, ಆ ಬೈರಾಗಿ ಮಹಾರಾಜರನ್ನು ದಿಟ್ಟಿಸಿ ನೋ ಡಬೇಕಾದರೆ, ಮೊಟ್ಟಮೊದಲಂತೂ ದೂರಿನಿಂದ ರಾತ್ರಿಯ ಮಂದಪ್ರಕಾಶ ದಲ್ಲೇ ನೋಡಬೇಕೆಂದು ಅವನು ತನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡಿದ್ದನು.

ಆತನು ಮನೆಮಾರಿಗೆಯ ತನ್ನ ಸಾದಾ ಉಡುಪನ್ನು ಧರಿಸಿಕೊಂಡು ಡಾ. ಜಾಲಂದರನ ಆಸ್ಪತ್ರೆಯ ಕಡೆಗೆ ನಡೆದನು. ಸಂಜೆಯುಹೊತ್ತಾಗಿದ್ದರೂ ಹೊಸದಾಗಿ ಧಂದೆ ನಡೆಸಹತ್ತಿದ್ದ ಡಾಕ್ಟರ ಜನರಿಗೆ ತಮ್ಮ ಆಸ್ಪತ್ರೆಯಲ್ಲಿ ಕಾದು ಕುಳಿತಿರಲೇಬೇಕಾಗುತ್ತದೆ. ಆಗ ಡಾಕ್ಟರ ಜಾಲಂದರನು ಮಾನಸ ಶಾಸ್ತ್ರದ ಒಂದು ಪುಸ್ತಕವನ್ನೋದುತ್ತ ಕುಳಿತಿದ್ದನು. ಬನ್ಸೀಧರನನ್ನು ಕಂಡೊಡನೆಯೇ ಆತನು ಎದ್ದು ಹಸ್ತಾಂದೋಲನ ಮಾಡಿ:—ಭಲೆ! ಬನ್ಸೀ ಸಾಹೇಬ, ತಾವು ಈ ಚೋದ್ಯಪುರಕ್ಕೆ ಯಾವಾಗ ಬಂದಿರಿ?

ನಿಮ್ಮ ಜವಾಬು ತಕ್ಕೊಳ್ಳಲಿಕ್ಕೆಂದು ಇಂದೇ ಬಂದೆನು." ಬನ್ಸಿಯು

ಬೆದರಿಕೆದೋರುವ ವಿನೋದೀಸ್ವರದಿಂದ ನುಡಿದು ನಕ್ಕನು.

"ನನ್ನ ಜವಾಬು ಕೇಳಲಿಕ್ಕೋ! ಆಶ್ಚರ್ಯವೆನಬೇಕು; ಆದರೆ ಜವಾಬು, ವಿಚಾರಣೆ ಮುಂತಾದವುಗಳ ಅಧಿಕಾರವನ್ನೇ ಸರಕಾರವು ನಿಮಗೆ ಕೊಟ್ಟಿದೆ. ಅಂದಮೇಲೇಕೆ ಅನುಮಾನ? ಚೆನ್ನಾಗಿ ಕೇಳಿಕೊಳ್ಳೋಣಾಗಲಿ."

"ಡಾಕ್ಟರಸಾಹೇಬ, ಗುಹ್ಯೆಯಾಗದ ಹೊರತು ನಾವು ಪೋಲೀಸರಾದರೂ ಈ ಜವಾಬಿನ ಗೊಂದಲಕ್ಕೇಕೆ ತೊಡಗುವೆವು?"

"ನನ್ನಿಂದ ಯಾವ ಗುಹ್ನೆಯಾಗಿದೆಯಪ್ಪಾ! ಮತ್ತು ಅದು ಎಂದಾಗಿದೆ? ಮತ್ತೆ ಯಾರಾದರೂ ಮಾಡಿದ್ದರೆ ಅವರ ಜವಾಬು ನಾನು ಕೊಡಬೇಕೆ?"

"ಫ್ಯಾಮಿಲೀ ಡಾಕ್ಟರ ಎಂದು ವಶಪಡಿಸಿಕೊಂಡಿದ್ದ ಜನರೊಳಗಿನ ಯಾವನೊಬ್ಬನನ್ನು ಬೇನೆಬೀಳಗೊಡುವದಿದು ಫ್ಯಾಮಿಲೀ ಡಾಕ್ಟರನ ಗುಹ್ನೆಯಲ್ಲವೆ?" ಎಂದಂದು ಬನ್ಸೀಧರನು ಖೊಳ್ಳೆಂದು ನಕ್ಕು, ಮತ್ತೆ:—"ನಮ್ಮ ಚಂದೂಲಾಲನು ಬೇನೆಯಿಂದ ಪೀಡಿತನಾಗಿರುವನೆಂಬದನ್ನು ಕೇಳಿ, ಅವಸರದ ಕೆಲಸದಲ್ಲಿಯೋ ತುಸ ಬಿಡುವು ಮಾಡಿಕೊಂಡು ಇತ್ತ ಅಡ್ಡದಾರಿ ಹಿಡಿದು ಬಂದಿರುತ್ತೇನಿಷ್ಟೇ; ಮತ್ತು ರೋಗಿಯ ಪ್ರಕೃತಿಮಾನ ತಿಳಿಯಬೇಕಾದರೆ ಅವನ ಡಾಕ್ಟರನನ್ನು ಕೇಳುವದೇ ಯೋಗ್ಯವೆಂದು ನಿಮ್ಮ ಬಳಿಗೆ ಬಂದಿದ್ದೇನೆ. ಇದಿಲ್ಲದಿದ್ದರೂ ಈ ಊರಿಗೆ ಬಂದ ಬಳಿಕ ನಿಮಗೆ ಭೆಟ್ಟಿಯಾಗದೆ ಹೋಗುತ್ತಿರುವದಿಲ್ಲೆಂಬದು ನಿಮಗೆ ಗೊತ್ತೇ ಇದೆ."

"ಸರಿ-ಸರಿ ತಾವು ನನಗೆ ಭೆಟ್ಟಿಯಾದದ್ದು ಎಲ್ಲ ಬಗೆಯಿಂದಲೂ ವಿಹಿತವೇ ಆಯಿತು. ಇನ್ನು ತಮಗೆ ಕೊಡುವ ಜವಾಬು ಸತ್ಯ ಕೊಡಲೊ, ಖೊಟ್ಟಿ ಕೊಡಲೋ?"

"ಪೋಲೀಸರೆದುರಿಗೆ ಕೊಟ್ಟ ಜವಾಬು ಆ ಮೇಲೆ ಹಿಂದೆಗೆದುಕೊಳ್ಳಲಿಕ್ಕೆ ಬರುವದೆಂಬದು ನಿಜ; ಆದರೆ ಕೊಡುವುದೇ ಆದರೆ ಸತ್ಯವಾಗಿ ಕೊಡುವುದೇ ಎಲ್ಲ ಬಗೆಯಿಂದಲೂ ವಿಹಿತವಿರುತ್ತದೆ. ಮಾರ್ಕಟ ಬೇನದ ಫಿಲಾಸಫರನು ಏನು ಅಂದಿರುವದೆಂಬದು ಗೊತ್ತಿದೆಯೇ?"

"ಅದೇನು?"

"'When in doubt tell the truth' ಆದಿರಲಿ. ಇನ್ನು ನಾನು ಕೇಳುವ ಮುಖ್ಯ ಮಾತಿನ ಉತ್ತರ ಕೊಡಿರಿ. ಅಂದಿನ ರಾತ್ರಿ ಚಂದೂನಿಗೆ ಸಿಗರೇಟಿನ ಹೊಗೆ ಎದೆಗೆ ಹತ್ತಿದ್ದರಿಂದ ಆತನು ಬವಳಿ ಹತ್ತಿ ಬಿದ್ದು, ಔತಣದ ಪಂಕ್ತಿಯಲ್ಲಿ ಊಟ-ಪಾಟಗಳನ್ನೇನೂ ಮಾಡದೆ ಹಾಗೆಯೇ ಹೋಗಿ ಮಲಗಿದನೆಂದು ತಿಳಿಯುತ್ತದೆ; ಆದರೆ ಬೆಳಗ್ಗೆ ತನ್ನಷ್ಟಕ್ಕೆ

ತಾನು ಎದ್ದು ಅಡ್ಡಾಡಹತ್ತಿದ ಕೂಡಲೆ ಅವನು ಭದ್ರೇಶ್ವರಕ್ಕೆ ಹೋಗಿ ಈ ಬೈರಾಗಿಗಳನ್ನು ಮನೆಗೆ ಕರೆತಂದನು; ಮತ್ತು ಅಂದಿನಿಂದ ಸರ್ವಸಂಗ ಪರಿತ್ಯಾಗ ಮಾಡಿ, ಅವನು ಈ ಗುರುವಿನ ಶಿಷ್ಯನಾದನು. ಇದಾದರೂ ಆ ತಂಬಾಕದ ಹೊಗೆಯ ಪರಿಣಾಮವೇ ಏನು?''

"ಬನ್ಸೀಧರ, ಈ ನಿಮ್ಮ ಪ್ರಶ್ನೆಯ ಉತ್ತರವು ನನ್ನ ವೈದ್ಯಕೀಯ ಕಕ್ಷೆಯಲ್ಲಿ ಬರುವದಿಲ್ಲ. ನಾನು ತಂಬಾಕದ ಹೊಗೆಯ ಡಗ್ಗಿಗೆ ಔಷಧಕೊಟ್ಟು ಆತನನ್ನು ಗುಣಪಡಿಸಿದೆನು. ನನ್ನ ಕೆಲಸ ಮುಗಿಯಿತು. ಅದಕ್ಕೆ ವಿಪರೀತವಾಗಿ ವೈರಾಗ್ಯದ ರೋಗಕ್ಕೆ ಏನು ಕಾರಣ ಜರುಗಿತೆಂಬದನ್ನು ನಾನು ಹೇಳಲಶಕ್ಯವು. ಅದನ್ನು ತಿಳಕೊಳ್ಳಲಿಕ್ಕೆ ನೀವು ಯಾವನೊಬ್ಬ ಸುಪ್ರಸಿದ್ಧ ಜ್ಯೋತಿಷ್ಯನನ್ನೇ ಕಾಣಬೇಕಾದೀತು.''

''ಜಾಲಂಧರರೇ, ಮಾನಸಶಾಸ್ತ್ರದ ಚಿಕಿತ್ಸೆಯೂ ನಿಮ್ಮ ವೈದ್ಯಕೀಯ ಗ್ರಂಥಗಳಲ್ಲಿರುತ್ತದೆನ್ನುವರು; ಆದರೆ ಅದಿರಲಿ. ನಾವಿನ್ನು ಈ ಔಪಚಾರಿಕ ವಾಗ್ಜಾಲವನ್ನು ಬಿಟ್ಟುಬಿಡೋಣ. ಚಂದೂನ ಈ ಮಾನಸಿಕ ವಿಕೃತಿಗೆ ಏನು ಕಾರಣವಾಗಿರಬೇಕೆಂದು ನಿಮಗನಿಸುವದು? ಮಾಸಾಹೇಬರು ಈ ಬಗ್ಗೆ ಶೋಧ ಮಾಡಬೇಕಾಗಿದೆ. ಅದನ್ನು ಮಾಡಲಿಕ್ಕೆ ನಾನವರಿಗೆ ನೆರವಾಗಬೇಕೆಂದಿದ್ದೇನೆ; ಮತ್ತು ಅದಕ್ಕೆಂದೇ ನೀವು ನನಗೆ ಸಹಾಯ ಮಾಡಬೇಕು; ಆದರೆ ಈ ಪ್ರಕರ್ಣವನ್ನು ಸದ್ಯಕ್ಕಂತೂ ಸರ ಸಾಹೇಬರ ವರೆಗೆ ಒಯ್ಯಬೇಕಾಗಿಲ್ಲ; ಅಥವಾ ಇದರ ವಾಚ್ಯತೆಯನ್ನು ಬಹಿರ್ಪಡಿಸಲೂ ಬೇಕಿಲ್ಲ. ಕಟ್ಟು ಜ್ವರಗಳು ಇಳಿಯಲಿಕ್ಕೆ ಕೆಲ ನಿಯಮಿತ ಅವಧಿಯನ್ನು ಕೊಡಬೇಕೆಂಬದು ನಿಮಗೆ ಗೊತ್ತೇ ಇದೆ.''

''ಇದೆಲ್ಲ ನನಗೂ ಇಷ್ಟವೇ ಇದೆ; ಅಂತೆಯೇ ನಾನು ನಿಮಗೆ ಮೊದಲೇ ತಿಳಿಸುವದೇನಂದರೆ, ಚಂದುವು ಸಿಗರೇಟಿನ ಹೊಗೆಯಿಂದ ಅಶಕ್ತನಾದನೆಂದು ಹೇಳಿದ್ದು ಕೇವಲ ಆಭಾಸವಾಗಿತ್ತು; ಮತ್ತು ಆ ಆಭಾಸವನ್ನು ಆಗ ನಾನೇ ಉಂಟುಮಾಡಿದವನು. ಹಾಗೆ ಹೇಳದಿದ್ದರೆ ಅಂದು ದೊಡ್ಡ ಫಜೀತಿಯೇ ಆಗುವಂತಿತ್ತು. ಅದೇನಂದರೆ, ಚಂದುವಿಗೆ ಆಗ ಆಗಿದ್ದ ಭಯಂಕರ ಆಘಾತದ ಕಾರಣವನ್ನು ಏನು ಮಾಡಿದ್ದರೂ ಆತನು ಗುಪ್ತವೇ ಇರಿಸುತ್ತಿದ್ದನು; ಹಾಗು ಅದರಿಂದ ಆ ಕೂಡಲೆ ದೊಡ್ಡ ಬೊಬ್ಬಾಟವೇ ಆಗಬಹುದಾದ್ದು ನನ್ನ ಆ ಯುಕ್ತಿಯಿಂದ ಆಗಲಿಲ್ಲವಷ್ಟೇ.''

''ಆ ಬೊಬ್ಬಾಟವು ಆಗಿನಮಟ್ಟಿಗೆ ನಿವಾರಣವಾಗಿರಬಹುದು; ಆದರೆ ಅದು ಕಾಯಮವಾಗಿ ಹೇಗೆ ನಿವಾರಣವಾದೀತು? ನೀವು ಸಿಗರೇಟಿನ ಹೊಗೆ

ಯ ನಾಟಕ ಮಾಡಿ ಒಳ್ಳೇ ಪ್ರಸಂಗಾವಧಾನದೋರಿದರೆಂಬ ಬಗ್ಗೆ ಸಂದೇಹವೇ ಇಲ್ಲ; ಆದರೆ ಆ ಕಾಲಕ್ಕೆ ನೀವು ಅಲ್ಲಿ ಬೇರೆ ಏನೇನು ನೋಡಿದಿರಿ ಮುಂತಾದ್ದೇನಾದರೂ ನಿಮಗೆ ಸ್ಮರಿಸುವದೋ?"

"ನನಗೆ ಚೆನ್ನಾಗಿ ನೆನಪಿರುವದಿಷ್ಟೇ, ಚಂದುವು ಒಮ್ಮೆಲೆ ನೆಲಕ್ಕುರುಳಿ ಬೀಳುವದನ್ನು ಕಂಡು ನಾನು ಆತನನ್ನು ಸಾವರಿಸಿ ಹಿಡಿದೆನು; ಆಗ ಆತನು ತನ್ನ ಕೈಯೊಳಗಿನದೊಂದು ಕಾಗದವನ್ನು ತಟ್ಟನೆ ಮುದುಡಿ ತನ್ನ ಒಳಜೇಬಿನಲ್ಲಿಟ್ಟುಕೊಂಡನು; ಅಂದಬಳಿಕ ಅದು ನನಗೆ ಓದಲಿಕ್ಕೆ ಹೇಗೆ ದೊರೆಯಬೇಕು? ಒಂದುವೇಳೆ ಆ ಕಾಗದದಲ್ಲೇ ಏನಾದರೂ ರಹಸ್ಯವಿರಬೇಕೆಂದು ನನಗನಿಸುತ್ತದೆ."

"ಸಾಧಾರಣವಾಗಿ ಆ ಕಾಗದವು ಯಾವ ಸ್ವರೂಪದಿದ್ದೀತೆಂದು ನಿಮಗನಿಸುತ್ತದೆ?"

"ಆದರ ಬಣ್ಣ-ಆಕಾರಗಳ ಮೇಲಿಂದ ಅದು ತಂತಿಯ ಕಾಗದವಿರಬೇಕೆಂದೆನಿಸುತ್ತದೆ. ಆದೇ ಕಾಲಕ್ಕೆ ತಂತಿ ತಲುಪಿಸುವ ಜವಾನನೊಬ್ಬನು ನಂದಭುವನಕ್ಕೆ ಬಂದಿದ್ದನಂತೆ; ಮತ್ತು ಅದೇ ತಂತಿ ಚಂದೂನ ಕೈಯಲ್ಲಿರಬಹುದೆಂದು ನನ್ನ ತರ್ಕವಿದೆ."

"ಡಾಕ್ಟರ ಸಾಹೇಬ, ನೀವೊಳ್ಳೇ ಮಹತ್ವದ ಮಾಹಿತಿ ತಿಳಿಸಿರುತ್ತೀರಿ. ಈ ನಿಮ್ಮ ಮಾಹಿತಿಯ ಫಲಶ್ರುತಿಯನ್ನು ನಿಮಗೆ ನಾಳೆ ತಿಳಿಸಲು ಶಕ್ಯವಾದೀತು. ನೀವು ನಾಳೆ ಬೆಳಗ್ಗೆ ಸುಮಾರು ಹತ್ತು ಗಂಟೆಗೆ ನಂದಭುವನಕ್ಕೆ ಮಾಸಾಹೇಬರ ಪ್ರಕೃತಿ ನೋಡುವ ನೆವಮಾಡಿ ಬರುವಿರಾ?"

"ಬನ್ಸೀಧರ, ಇದನ್ನೇನು ಕೇಳುವಿರಿ? ಅತ್ಯವಶ್ಯವಾಗಿ ಬರುತ್ತೇನೆ. ಚಂದೂನ ಶರೀರಪ್ರಕೃತಿಗಿಂತ ಆತನ ಮನಃಪ್ರಕೃತಿಯ ಚಿಂತೆಯು ನನಗೀಗ ವಿಶೇಷವಾಗಿ ಅನಿಸುತ್ತದೆ; ಆದರೆ ಆ ತಂತಿಯ ಪತ್ತೆ ಹತ್ತುವ ಬಗೆ ಹೇಗೆ?"

"ನಿಮಗೆ ಅದನ್ನೆಲ್ಲ ನಾಳೆ ಹೇಳುತ್ತೇನೆ."

"ಇಷ್ಟು ಭಾಷಣ ನಡೆದ ಬಳಿಕ ಬನ್ಸೀಧರನು ಅಲ್ಲಿಂದೆದ್ದನು; ಅಷ್ಟರಲ್ಲಿ ಕತ್ತಲುಕವಿಯತೊಡಗಿತ್ತು. ನಂದಭುವನದೊಳಗಿನ ದೀಪಗಳು ಬೆಳಗಹತ್ತಿದವು. ಬನ್ಸೀಧರನು ಒಳಗೆ ಹೋಗಿ ತನ್ನ ಆ ಸಾದಾ ಉಡುಪನ್ನು ಕೂಡ ತೆಗೆದನು. ಒಂದು ಮಾಸಿದ ಧೋತರವನ್ನುಟ್ಟನು; ಅಂಥದೇ ಒಂದು ಅಂಗಿಯನ್ನು ತೊಟ್ಟನು. ಹೆಗಲ ಮೇಲೊಂದು ಖದ್ದರದ ತುಂಡನ್ನು ಚೆಲ್ಲಿಕೊಂಡನು. ಭವ್ಯವಾಗಿ ಕಾಣುವಂತೆ ಹಣೆಗೆ ಭಸ್ಮದ ಪಟ್ಟೆಗಳನ್ನು ಎಳೆದನು; ಮತ್ತು ಮೆಲ್ಲನೆ ಮಠದೊಳಗೆ ಹೊಕ್ಕು ಅಲ್ಲಿ ಹಾಸಿದ್ದ

ಜಮಖಾನೆಯ ತುದಿಗೆ ಕುಳಿತನು. ಆಗ ಆತನ ಮುಖವು ಬಾಗಿದ್ದರೂ ದೃಷ್ಟಿಯು ಎದುರಿಗಿತ್ತು.

ಸಂಜೆಯ ಭಜನೆಗೆ ಅದೇ ಪ್ರಾರಂಭವಾಗಿತ್ತು. ಗುರು ಮಹಾರಾಜರು ಸಾಧಾರಣಗಳಾದ ಒಂದೆರಡು ಭಜನೆಗಳನ್ನಂದ ಬಳಿಕ ಚಂದುವು ಅವರಿಗೆ 'ತುಮಬಿನ ಮೇರೀ ಕೌನ ಖಬರ ಲೇ' ಈ ಪದವನ್ನನ್ನಲು ಬಿನ್ನೈಸಿಕೊಂಡನು; ಆದರೆ ಆ ಪದವು ಗುರೂಜಿಗೆ ಅಷ್ಟು ಮೆಚ್ಚಿನದಿರಲಿಲ್ಲ; ಆದರೂ ಆ ಪದಕ್ಕಿಂತ ಆ ಶಿಷ್ಯನ ಅವಶ್ಯಕತೆಯೇ ಅವರಿಗೆ ಹೆಚ್ಚಾಗಿತ್ತು. ಅಂತೆಯೇ ಅವರು ಆ ಪದವನ್ನು ಹೇಳಹತ್ತಿದರು; ಆದರೆ ಚಂದುವು ಅವರನ್ನು ಆ ಮೊದಲನೇ ಚರಣದ ಮುಂದೆ ಹೋಗಲೇ ಬಿಡಲೊಲ್ಲನು; ಮತ್ತು ಮೇರೀ ಈ ಶಬ್ದದುಚ್ಚಾರವಾಗಹತ್ತಿತೆಂದರೆ, ಅಷ್ಟರಮಟ್ಟಿಗೆ ಚಂದೂನ ಧ್ವನಿಯು ಕಂಪಿತವಾಗುತ್ತಿತ್ತು. ಚಂದೂನ ಈ ಎಲ್ಲ ವಿಪರೀತ ದೃಶ್ಯವನ್ನು ಕಂಡು ಬನ್ಸೀಧರನಿಗೆ ಮನದಲ್ಲಿ ಹೆಚ್ಚಾಗಿ ನಗೆ ಬಂದಿತು; ಆದರೆ ಆತನು ಗೋಣು ಮತ್ತಿಷ್ಟು ತೆಗ್ಗಿಸಿಕೊಂಡು ಅದನ್ನು ನುಂಗಿದನು.

ಆ ಗುರುಜೀ ಮತ್ತು ಶಿಷ್ಯ ಇವರ ಮುಖಗಳ ಕಡೆಗೆ ಬನ್ಸೀಧರನು ಸೂಕ್ಷ್ಮವಾಗಿ ನೋಡುತ್ತಿದ್ದನು. ಅವರಲ್ಲಿ ಗುರುಜಿಯ ಮುಖಚರ್ಯದ ಒಂದಿಷ್ಟು ಗುರುತಾದರೂ ಆಗ ಆತನಿಗೆ ಹತ್ತಿರಬೇಕೆಂದು ತೋರಿತು; ಆದರೆ ಶಿಷ್ಯನ ಬಗ್ಗೆ ಮಾತ್ರ ಅಂದಾಜು ಹರಿಯದಾಯಿತು!

ಭಜನೆಯು ಮುಗಿದ ಬಳಿಕ ಚಂದುವು ಮಹಾರಾಜರ ಕಾಲಿಗೆರಗಿದನು; ಆತನ ಹಿಂದಿನಿಂದ ಬನ್ಸೀಧರನೂ ಹಾಗೆಯೇ ಮಾಡಿದನು. ಆ ಮೇಲೆ ಅವರಿಬ್ಬರೂ ಮಾತನಾಡುತ್ತ ಅಲ್ಲಿಂದ ಹೊರಬಿದ್ದರು.

ಚಂದೂ:—"ಎಲೋ, ನೀನಾವಾಗ ಬಂದೆ? ಬನ್ಸೀ, ಈ ಉಡುಪಿನಲ್ಲಿ ನಾನು ನಿನ್ನನ್ನು ಮೊದಲು ಗುರ್ತಿಸಲೇ ಇಲ್ಲವಲ್ಲ!"

ಬನ್ಸೀ:—"ನನ್ನ ಗುರ್ತು ಸಿಗದಷ್ಟು ರೂಪಾಂತರವು ಈ ಉಡುಪಿನಲ್ಲಿನ್ನೂ ಆಗಿಲ್ಲ; ಅಂಥ ರೂಪಾಂತರವನ್ನು ಮಾಡಲು ಜಟಾ-ಗಡ್ಡ-ಮೀಸೆಗಳಿಂದಲೇ ಶಕ್ಯವಾಗುತ್ತದೆ. ನೀನು ಮೂರು-ನಾಲ್ಕು ದಿನಗಳಿಂದ ಮುಖಕ್ಷೌರ ಮಾಡಿಸಿಲ್ಲೆಂಬಂತೆ ತೋರುತ್ತದೆ; ಮತ್ತು ಇದೇ ಕ್ರಮವನ್ನನುಸರಿಸಿ ನೀನು ಗಡ್ಡ-ಮೀಸೆಗಳನ್ನು ಬೆಳೆಯಗೊಟ್ಟರೆ, ನೀನಂತೂ ಗುರ್ತಿಸದಂತಾದೀ. ನಿನ್ನ ಯೋಚನೆಯು ಹಾಗೇನಾದರೂ ಇದೆಯೇ?"

"ಛೇ! ಛೇ!" ಚಂದುವು ನಕ್ಕು "ನನ್ನ ಆಲೋಚನೆ ಹಾಗೇನಿಲ್ಲ; ಆದರೆ ಸದ್ಯಕ್ಕೆ ಮಪಂಚಿನಂತೆ ದಿನಾಲು ಕ್ಷೌರಮಾಡಿಸುವದಿಲ್ಲೆಂಬದು ಮಾತ್ರ ನಿಜ."

"ಭಲೆ! ಇಷ್ಟೇ ಏನು? ಬೇರೆ ಹಲವು ಬಾಬುಗಳಲ್ಲೂ ನಿನ್ನ ಬದಲಾವಣೆಯಾದಂತೆ ತೋರುತ್ತದೆ; ಆದರೆ ಅದೆಲ್ಲ ನನಗೆ ರುಚಿಸಿರುವದೆಂದು ನಾನು ಈಗಲೆ ನಿನಗೆ ತಿಳಿಸಿಡುತ್ತೇನೆ. ಸುಶಿಕ್ಷಿತ ಜನರು ನಾಸ್ತಿಕರಿರುತ್ತಾರೆಂದು ಅವರ ಮೇಲೊಂದು ಸರ್ವಸಾಧಾರಣ ಆರೋಪವನ್ನು ಜನರು ಇತ್ತೀಚಿಗೆ ಹೊರಿಸುತ್ತಿರುತ್ತಾರೆ. ನೀನು ಅದನ್ನು ತೊಳೆದುಬಿಡುತ್ತೀ ಎಂಬದಕ್ಕೆ ಅನುಮಾನವಿಲ್ಲ; ಆದರೆ ಚಂದು, ಈಗ ನಿನ್ನ ಪ್ರಕೃತಿಯಾದರೂ ಸರಿಯಿದೆಯೆ?"

ಇಂಥ ಕೆಲಮಾತುಗಳನ್ನಾಡಿ ಬನ್ಸೀಧರನು ಮನೆಯೊಳಗೆ ಹೋದನು. ಅವರು ತಮ್ಮ ತಮ್ಮ ಊಟವನ್ನು ಪ್ರತ್ಯೇಕವಾಗಿ ಮಾಡಿ, ಇಬ್ಬರೂ ಮಲಗಲಿಕ್ಕೆ ಹೋದರು.

ಮರುದಿನ ಬೆಳಿಗ್ಗೆ ಆ ಊರ ಟೆಲಿಗ್ರಾಫ್ ಆಫೀಸ ತೆರೆದ ಬಳಿಕ ಬನ್ಸೀಧರನು ತನ್ನ ಪೋಲೀಸ ಪೋಷಾಕು ಹಾಕಿಕೊಂಡು ಅಲ್ಲಿಗೆ ಹೋದನು; ಮತ್ತು ಹೆಡ್ ಸಿಗ್ನಲ್ಲರನನ್ನು ಒತ್ತಟ್ಟಿಗೆ ಕರೆದು 'ಒಂದು ಗುಹ್ನೆಯ ತಪಾಸಣೆ ಮಾಡಬೇಕಾಗಿದೆ' ಎಂದು ತಿಳಿಸಿ, ಆ ರವಿವಾರ ದಿವಸದ ಚಂದೂನ ಹೆಸರಿಗೆ ಬಂದಿದ್ದ ಮತ್ತು ಆತನಿಗೆ ತಲುಪಿದ್ದ ತಂತಿಗಳ ಸ್ಥಳಪ್ರತಿಗಳನ್ನು ನೋಡಲಿಕ್ಕೆ ಇಸಕೊಂಡನು. ಮಿಕ್ಕ ತಂತಿಗಳೆಲ್ಲ ಔಪಚಾರಿಕ ಅಭಿನಂದನದವಿದ್ದವು. ಅವುಗಳನ್ನು ಬಿಟ್ಟು ಅಂದು ಸಾಯಂಕಾಲ ಏಳೂವರೆ ಗಂಟೆಗೆ ಬಂದಿದ್ದ ತಂತಿಯ ನಕಲುಮಾಡಿಕೊಂಡು ಜೇಬಿನಲ್ಲಿರಿಸಿದನು; ಮತ್ತು ಆ ಸಿಗ್ನಲ್ಲರನನ್ನು ಅಭಿನಂದಿಸಿ ಮನೆಗೆ ಹೊರಟನು.

ಮುನ್ನಾ ದಿನ ಹೇಳಿದಂತೆ ಹತ್ತು ಹೊಡೆಯುವ ಮೊದಲೇ ಡಾ. ಜಾಲಂದರನು ನಂದಭುವನಕ್ಕೆ ಬಂದು ಮಾಸಾಹೇಬರೊಡನೆ ಮಾತಾಡುತ್ತ ಕುಳಿತಿದ್ದನು. ಅವರಿಬ್ಬರನ್ನು ಕಂಡು ಬನ್ಸೀಧರನು ನಗೆ ಮೊಗದಿಂದ:— "ಚಂದೂನ ವೈರಾಗ್ಯದ ಪತ್ತೆಹಿಡಿಯುವ ಇಷ್ಟು ಸುಲಭವಾದ ಸಂಶೋಧನವು ನನ್ನ ಪಾಲಿಗಂದೂ ಬಂದಿರಲಿಲ್ಲ. ಇನ್ನು ನಿನ್ನ ರಹಸ್ಯವನ್ನು ನಿನ್ನ ಪೆಟ್ಟಿಗೆಯಲ್ಲಿ ಗುಪ್ತವಾಗಿರಿಸಿಕೊಳ್ಳೆಂದು ಚಂದುವಿಗೆ ಹೇಳಿರಿ." ಎಂದಂದು, ಆ ತಂತಿಯ ನಕಲಿನ ಕಾಗದವನ್ನು ಜೇಬಿನಿಂದ ತೆಗೆದು ಡಾಕ್ಟರನಿಗೆ ಇಂಗ್ಲಿಷನಲ್ಲೇ ಓದಿ ತೋರಿಸಿದನು; ಮತ್ತು ಅವನು ಆ ಸಂಗತಿಯು ಭಾಷಾಂತರ ಮಾಡಿ ಮಾಸಾಹೇಬರಿಗೆ ತಿಳಿಸಿದನು.

"ನನಗೆಲ್ಲ ಹೊಳೆಯಿತು. ಇದು ತಾರುಣ್ಯದ ಮಬ್ಬಿನ ಆಟ. ಇನ್ನೇನು!" ಎಂದು ಒಮ್ಮೆಲೆ ಮಾಸಾಹೇಬರು ನುಡಿದರು.

ಅದಕ್ಕೆ ಬನ್ಸೀಧರನು:—"ಆದರೆ ಈ ಬಗ್ಗೆ ಹೆಚ್ಚಿನ ಶೋಧ ನಡೆಸ

ಲಿಕ್ಕೆ ನಾನು ವಿಲಾಯತಿಯ ಗುಪ್ತ ಪೋಲೀಸ ಖಾತೆಗೆ ಸರಕಾರ ಮೂಲಕ ಬರೆಯ ಬೇಕಾದೀತು; ಮತ್ತು ಅತ್ತ ಕಡೆಯಿಂದ ಎಲ್ಲ ಸಂಗತಿ ತಿಳಿಯು ಲಿಕ್ಕೆ ಸ್ವಾಭಾವಿಕವಾಗಿಯೇ ಕೆಲ ದಿನಗಳ ಅವಕಾಶ ಬೇಕಾದೀತು.''

ಡಾಕ್ಟರ:--''ಅದಿರಲಿ ಬಿಡು. ನಮಗೇನು ಬೇಕಾಗಿದ್ದಿತೋ ಅದು ತಿಳಿಯಿತು. ಇದಕ್ಕೂ ಹೆಚ್ಚು ತಿಳಿದಾದರೂ ಮಾಡುವದೇನಿದೆ? ಮೇರಿ ಯೋ ಫೇರಿಯೋ ಎಂಬ ಹೆಸರಿನ ಯಾವ ಬೀಳೀ ಹುಡುಗಿಯಿದ್ದಳೋ ಆಕೆ ಸತ್ತು ಹೋದಳು; ಮತ್ತು ಅವಳು ಸತ್ತದ್ದೂ ಒಂದು ಬಗೆಯಿಂದ ವಿಹಿತವೇ ಆಯಿತು. ಯಾಕಂದರೆ ಆಕೆ ಜೀವಂತಳಿದ್ದಿದ್ದರೆ, ಅವಳ ಉಪಾ ಧಿಯು ಚಂದೂನ ಸುತ್ತಲೆ ಜನ್ಮದಲ್ಲೆಲ್ಲ ಹತ್ತಿರುತ್ತಿತ್ತು. ಅಂಥ ಹುಡುಗೆ ಯರು ನಮ್ಮಗಳ ಒಳ್ಳೊಳ್ಳೇ ತರುಣರನ್ನು ಕಂಡುಕೊಂಡು ಅವರ ಕೊರಳಿಗೆ ಬೀಳುತ್ತಾರೆ. ಬಳಿಕ ಕೆಲವರು ಲಗ್ನದ ವಚನಪಾಲಿಸಲಿಲ್ಲೆಂದು ಫಿರ್ಯಾದಿ ಮಾಡಿ ದುಡ್ಡು ಎಬ್ಬಿಸುತ್ತಾರೆ! ಕೆಲವರು ಲಗ್ನವಾಗಿದ್ದರೂ ಹಿಂದುಸ್ತಾನದ ಹವೆ ಮನ್ನಿಸುವದಿಲ್ಲೆಂಬ ನೆವಮಾಡಿ ಇತ್ತ ಬಾರದೆ, ಅಲ್ಲಿಗೇ ಹಣ ತರಿಸಿ ಕೊಳ್ಳುತ್ತಾರೆ; ಹಲವರು ಘಟಸ್ಫೋಟವ ಕೇಳುತ್ತಾರೆ. ಒಂದಲ್ಲ, ಎರಡಲ್ಲ! ಚಂದುವು ಆ ಗಾಣದಲ್ಲಿ ಸಿಕ್ಕಿದ್ದನು; ಆದರೆ ದೈವಬಲದಿಂದ ತಾನಾಗಿ ಬಿಡು ಗಡೆ ಹೊಂದಿದನು. ಇನ್ನು ಈ ಗುರುಭಜನದ ಹುಚ್ಚಾದರೂ ಕಾಲಾಂತರ ದಲ್ಲಿ ನೀಗೀತು. ಆ ಬಗ್ಗೆ ಯೋಚಿಸಬೇಕಿಲ್ಲ.

''ಆ ಚಿಂತೆಯನ್ನು ನಾನು ಬೇರೊಂದು ಬಗೆಯಿಂದ ಕೂಡಲೆ ನಿವಾ ರಿಸೇನೆಂದು ಡಾಕ್ಟರ, ನನಗನಿಸುತ್ತದೆ.''

''ಅದು ಹೇಗೆ?''

''ಅದೀಗ ನನ್ನದೊಂದು ಪೋಲೀಸ ರಹಸ್ಯವಿದೆ; ಆದರೆ ತಿಳಿದೀತು, ಬೇಗನೆ ತಿಳಿದೀತು. ನೀರೊಳಗಿನ ಹೊಲಸು ಬಹಳ ಹೊತ್ತು ಒಳಗಿರುವ ದಿಲ್ಲ; ಮೇಲಕ್ಕೆ ಬಂದೇ ಬರುತ್ತದೆ!''

ಡಾಕ್ಟರ:--ಭಲೆ! ಭಲೆ! ಈ ತಂತಿಯ ಬಗ್ಗೆ ನಾನು ನಿನ್ನೆ ಮಾತ್ರ ನಿನಗೆ ತಿಳಿಸಿರಲು, ಬೆಳಗಾಗುವಷ್ಟರಲ್ಲಿ ನೀನಿದನ್ನು ಪತ್ತೆಹಚ್ಚಿ ಆ ರಹಸ್ಯದ ಮೇಲೆ ಹೆಚ್ಚಾಗಿ ಪ್ರಕಾಶ ಕೆಡಹಿದೆ. ಇದು ನಿನಗೆ ಹೇಗೆ ಸಾಧಿಸಿತು?''

''ಡಾಕ್ಟರ, ಇದರಲ್ಲೇನು ಕಠಿಣ? ತಂತಿ ಆಫೀಸಿಗೆ ಬಂದ ಪ್ರತಿ ಯೊಂದು ತಂತಿಯ ನಕಲುಗಳು ಅಲ್ಲಿ ಕೆಲ ತಿಂಗಳವರೆಗೆ ಉಳಿದಿರುತ್ತವೆಂ ಬದು ನಿಮ್ಮ ಡಾಕ್ಟರ ಜನರಿಗೆ ಒಂದುವೇಳೆ ಗೊತ್ತಿರಲಿಕ್ಕಿಲ್ಲ. ಬಳಿಕ ಅವು ಮುಂಬಯಿ, ಕಲಕತ್ತೆಗಳ ಕಡೆಗೆ ರವಾನಿಸಲಾಗುವವು. ಇನ್ನು ಬೇರೆ

ಯುವರಾರಿಗೂ ಆ ನಕಲು ನೋಡಲಿಕ್ಕೆ ಸಿಗುತ್ತಿರಲಿಲ್ಲ; ಆದರೆ ಪೋಲೀಸ ತಪಾಸಿಗೆಂದು ಇಂಥ ತಂತಿಗಳನ್ನು ಓದಲಿಕ್ಕೆ ಪಡೆಯುವ ಅಧಿಕಾರವು ಪೋಲೀಸರಿಗಿರುತ್ತದೆ; ಮತ್ತು ಅವರಂತೆ ನಾನು ಕೇಳುತ್ತಲೆ ನನಗೆ ದೊರೆಯಿತು; ಆದರೆ ಕಾಲಾಂತರದಲ್ಲಿ ತಾರ ಆಫೀಸಿನೊಳಗಿನ ಆ ವಾರ್ತೆಯು ಅನಧಿಕೃತ ರೀತಿಯಿಂದ ಮೆಲ್ಲಮೆಲ್ಲನೆ ಹೊರಬೀಳದಿರುತ್ತಿರಲಿಲ್ಲವೆಂದು ನಾನು ಈಗಲೆ ಹೇಳಿಡುತ್ತೇನೆ; ಯಾಕಂದರೆ, ಯಾವುದಕ್ಕೆ ನಾವು ಸರಕಾರೀ ಗುಪ್ತ ಸಂಗತಿಗಳೆನ್ನುವೆವೋ ಅವುಗಳು ಒಂದಿಲ್ಲೊಂದು ರೀತಿಯಿಂದ ಹೊರಬಿದ್ದೇ ಬೀಳುತ್ತವೆ.''

''ಆದರೆ ಮಠವಲ್ಲಿ ಹಕ್ಕಿಗಳನ್ನಿಟ್ಟು ಕಾಳು ಸೇವು ಕೊಡುವ ಯಾವ ಸೋಗುದೋರುತ್ತಿರುವರೋ ಅದರ ಅರ್ಥವೇನು?''

''ಅದು ನಾಟಕ ತೋರುವ ಮಟ್ಟಿಗಿವೆ. ಕೈಯಿಂದ ಘಟಿಸಿದ ಹತ್ಯೆಯು ವಿಷಾದವೆನಿಸಿದ್ದರಿಂದಲೇ ವೈರಾಗ್ಯವುಂಟಾಯಿತೆಂದು.''

ಬನ್ಸೀಧರನು ನಕ್ಕು—''ಯೋಗ್ಯವೇ ಇವೆ. ಹತ್ಯೆ ಘಟಿಸಿದ ಬಳಿಕ ಚಂದುವಿಗೆ ವಿಷಾದ ವೆನಿಸಿತು; ಮತ್ತು ಗೀತೆಯೊಳಗಿನ ಅರ್ಜುನನಿಗೆ ಮುಂದಾಗುವ ಹತ್ಯೆಯು ಪೂರ್ವದಲ್ಲೇ ವಿಷಾದವೆನಿಸಿತು; ಇಷ್ಟೇ ಭೇದವು; ಆದರೆ ನನಗೆ ಅಂಜಿಕೆಯೆನಿಸುವುದೇನಂದರೆ, ಅಲ್ಲಲ್ಲ, ಆಶೆಯೆನಿಸುವದೇನಂದರೆ, ಯಾವ ಪಾತ್ರೆಯು ಬೇಗನೆ ಕಾಯುವದೋ ಅದು ಬೇಗನೇ ಆರುವದು.''

''ಬನ್ಸೀಧರ, ಹೀಗಂದರೇನೆಂಬದು ನನ್ನ ಮನಸ್ಸಿಗೆ ಹೊಳೆಯಲಿಲ್ಲ'' ಮಾಸಾಹೇಬರೆಂದರು.

ಬನ್ಸಿ ''ಗಾಳಿಯಿಂದುಂಟಾದ ವೈರಾಗ್ಯವು ಬಿರುಗಾಳಿಯಿಂದ ಹೊರಟು ಹೋದೀತು. ಎರಡೂ ಅಭಾವಿತಗಳೇ. ಶ್ರೀಕೃಷ್ಣನು ಗೀತೆಯಲ್ಲಿ ಮಾಡಿದ ಉಪದೇಶವು ಸಮರ್ಪಕ ಮತ್ತು ಬುದ್ಧಿಗೆ ಒಪ್ಪಿತವಾಗುವಂಥದೆಂದು ಬೇಕಾದವರು ಅನ್ನಲಿ; ಆದರೆ ನನಗನಿಸುವದೇನಂದರೆ, ಆ ಉಪದೇಶವು ಸಮ್ಮತವಾಗುವ ಬದಲು ಕೃಷ್ಣನ ಒಲವು ನೋಡಿ, ಭಿಡೆ ಎನಿಸಿತೆಂದು ತೋರಿ ಅರ್ಜುನನು ಆ ಯುದ್ಧಕ್ಕೆ ಸಿದ್ಧನಾದನು ಮನಸ್ಸಿನಲ್ಲಿ ಆತನಿಗೂ ಯುದ್ಧ ಮಾಡುವುದೇ ಇತ್ತು; ಆದರೆ ಕೈಯಿಂದ ಘಟಿಸುವ ಹತ್ಯೆಗೆ ಅದು ಹತ್ಯೆಯಲ್ಲೆಂದು ಹೇಳುವ ಯಾವನೊಬ್ಬ ಲಬ್ಧಪ್ರತಿಷ್ಠಿತನ ನೆವ ಬೇಕಿತ್ತಲ್ಲ, ಅದು ಅವನಿಗೆ ದೊರೆಕಿತು. ಚಂದೂನದಾದರೂ ಒಂದುವೇಳೆ ಹಾಗೆಯೇ ಆದೀತು. ಇಂಥ ನೆವಗಳನ್ನು ಮನುಷ್ಯರು ಹೇಗೆ ಪೂರೈಸುವರೋ ಹಾಗೆ ಪರಿಸ್ಥಿತಿಯ ಘಟನೆಯೂ ಒಮ್ಮೊಮ್ಮೆ ಪೂರೈಸಲು ತತ್ಪರವಾಗುತ್ತದೆ.'

"ಹಾಗಾದರೆ ಇಲ್ಲಿ ಆ ನೆವವನ್ನು ಚಂದುವಿಗೆ ಅದಾರು ಪೂರೈಸುವವರೆನಬೇಕು? ಗುರುಮಹಾರಾಜರಂತೂ ಕುಳಿತಾಗ ನಿಂತಾಗ ಅಹಿಂಸೆಯನ್ನೇ ಹೇಳುತ್ತಿರುವರು; ಮತ್ತು ಈಗಂತೂ ಚಂದುವಿಗೆ ವಿರುದ್ಧ ಉಪದೇಶ ಮಾಡಲಿಕ್ಕೆ ಗುರುಮಹಾರಾಜರ ಹೊರತು ಹೆಚ್ಚು ಶ್ರೇಷ್ಠ ಅಧಿಕಾರಿಗಳಾರೂ ಕಂಡು ಬರುವದಿಲ್ಲ. ಅಂದಬಳಿಕ ಬನ್ಸೀಧರ, ನೀನನ್ನುವಂತೆ ಪರಿಸ್ಥಿತಿಯೇ ಚಂದುವಿನ ಬಗ್ಗೆ ಏನು ಘಟಿಸೀತೋ ಘಟಿಸಲಿ." ಡಾಕ್ಟರನಂದನು.

"ಅದರೆ ಚಂದೂನ ವಿಷಾದದ ಕಾರಣವು ಬೇಟೆಯಿಂದಾದ ಹತ್ಯೆಯಾಗಿರದೆ, ಆತನಿಗೆ ಪ್ರೀತ್ಯಾಸ್ಪದಳಾದ ಯಾವಳೊಬ್ಬ ಹುಡುಗೆಯ ಮರಣ ವಾರ್ತೆಯೇ ಆಗಿದ್ದರೆ, ಆ ಪರಿಸ್ಥಿತಿಯು ಹೇಗೆ ಬದಲಾದೀತು?" ಮಾಸಾಹೇಬರು ಹೀಗೆ ಕಠಿಣ ಮತ್ತು ಸಯುಕ್ತಿಕ ಪ್ರಶ್ನೆ ಮಾಡಿದರು. ಅದಕ್ಕೆ ಜಾಲಂದರನೇ ಏಕೆ, ಬನ್ಸೀಧರನೂ ಸಮಾಧಾನಕರ ಉತ್ತರಕೊಡದಾದನು. ಮೇರಿಯ ಮೃತ್ಯುವಿನ ಪರಿಸ್ಥಿತಿಯಲ್ಲಿ ಬದಲಾವಣೆಯಾಗುವದೆಂದರೆ ಅವಳೇನು ಮರಳಿ ಜೀವಂತಳಾಗಿ ಬರಬೇಕೇ?

"ಛೇ, ಛೇ, ಆ ಮಾತನ್ನೇ ಎತ್ತಬೇಡಿರಿ." ಜಾಲಂದರನು ಅನ್ನುತ್ತಾನೆ "ಯಾಕಂದರೆ, ಆಕೆ ಸತ್ತಿದ್ದರೆ ಜೀವಂತಳಾಗುವದು ಅಶಕ್ಯ; ಆದರೆ ಅವಳು ಸತ್ತದ್ದೇ ವಿಹಿತವೆಂದು ನಾನು ಆಗಲೆ ಅಂದಂತೆ ಈಗಲೂ ಹಾಗೇ ಅನಿಸುತ್ತದೆ."

ಮಾಸಾಹೇಬರು:-"ಹೌದಪ್ಪಾ ಜಾಲಂದರಾ, ನೀನನ್ನುವಂತೆ ನನಗೂ ಅನಿಸುತ್ತಿದೆ. ಚಂದುವು ಇಂದು ಅವಿವಾಹಿತನಾಗಿದ್ದರೆ ಕಾಲಾಂತರದಲ್ಲಿ ಕದಾಚಿತ್ ಈತನ ವೈರಾಗ್ಯವು ಸಣಿಸಿ ಲಗ್ನವಾಗಲಿಕ್ಕೆ ಸಿದ್ಧನಾಗುವ ಸಂಭವವು ಬಾಕಿ ಉಳಿಯುತ್ತದೆ; ಆದರೆ ಆ ವಿಲಾಯತೀ ಹೆಂಗಸು ಮತ್ತೆ ಜೀವಂತಳಾಗಿ ಇಲ್ಲವೆ ನಾನಂದಂತೆ ಮೊದಲೇ ಚಂದೂನ ಕೊರಳಿಗೆಬಂದು ಬಿದ್ದಿದ್ದರೆ ಎಷ್ಟು ಗೊಂದಲ ಮತ್ತು ಎಷ್ಟು ಅವಮಾನವಾಗುತ್ತಿತ್ತು?"

ಬನ್ಸಿ:—'ಭಲೆ! ಮಾಸಾಹೇಬ, ಅದರಲ್ಲೇನು ಗೊಂದಲ ಮತ್ತು ಅವಮಾನಗಳು? ಒಳ್ಳೇ ಸುಶಿಕ್ಷಿತ ಬೀಳೀ ಮುಸುಡೆಯ ಸೊಸೆಯು ನಿಮಗೆ ಅನಾಯಾಸವಾಗಿ ದೊರಕುವಳಲ್ಲ! ನಿಮಗೆ ಕೆಂಪುಕೆಂಪಾದ ಮೊಮ್ಮಕ್ಕಳಾದಾವು. ವಿಲಾಯತಿಯ ಬೀಗರು-ಬಿಜ್ಜರು ದೊರೆತಾರು. ಅದರಿಂದ ಎಷ್ಟು ಮನ್ನಣೆಯಾದಂತಾದೀತು! ವರದಕ್ಷಿಣೆಗೆಂದು ಚಂದುವು ಅರ್ಧಸ್ವರಾಜ್ಯವನ್ನೇ ಮನೆಗೆ ತಂದಂತಾಗಲಿಲ್ಲವೆ? ಲೋಕಮಾನ್ಯ ಟಿಳಕರಾದರೂ ಇದೇ ಬಗೆಯ ಕರೀ-ಬಿಳೀ ಜನರ ಸ್ವರಾಜ್ಯವನ್ನೇ ಕೇಳುತ್ತಿದ್ದರು. ಅದನ್ನು ನಮ್ಮ ಚಂದುವು ದೊರಕಿಸಿದನಲ್ಲವೆ ಹಿಂದೂ ಮನುಷ್ಯನು ಇಂಗ್ಲಿಷ ಹೆಂಡತಿ ಮಾಡಿಕೊಂಡು?

ಇಂಗ್ಲಿಷರು ಒಡೆಯರೆಂದು ಇತ್ತ ಕಡೆಗೆ ಮೆರೆಯುತ್ತಾರೆ; ಮತ್ತು ಹಿಂದು ಜನರನ್ನು ಗುಲಾಮರಂತೆ ನಡೆಸಿಕೊಳ್ಳುತ್ತಾರೆ. ಅಂದ ಮೇಲೆ ಗುಲಾಮನು ಒಡೆಯನ ಮಗಳನ್ನೇ ಮಡದಿಮಾಡಿಕೊಳ್ಳುವದು ಎಂಥ ದೊಡ್ಡ ಪರಾಕ್ರಮ!''

ಮಾಸಾಹೇಬರು:-''ಬನ್ನೀ, ನಿನ್ನ ಜಾಣತನವು ಹೆಚ್ಚಾಯಿತು. ನಿಮ್ಮ ಹರೆಯದ ಜನರಿಗೆ ಸ್ವರಾಜ್ಯ ದೊರಕಿಸುವದೆಂದರೆ, ಗುಲಾಮನು ಒಡೆಯನ ಸೇಡುತೀರಿಸಿಕೊಳ್ಳುವದೇ ಬಹು ಪ್ರೀತಿಯ ಮಾರ್ಗವೆನಿಸುತ್ತಿದ್ದೀತಲ್ಲವೆ? ಆದರೆ ನಿನಗೆ ತಿಳಿಸಿಡುವುದೇನೆಂದರೆ, ಚಂದುವು ಈ ಮಡಮ್ಮನ್ನು ಮಡದಿಮಾಡಿಕೊಂಡು ಮನೆಗೆ ಕರೆತಂದಿದ್ದರೆ, ನಾನು ಆತನಿಗೆ ನನ್ನ ಮನೆಯಲ್ಲಿ ಕಾಲಿಡಗೊಡುತ್ತಿರಲಿಲ್ಲ; ತಿಳಿಯಿತೇ? ತನ್ನ ವಿದೇಶೀಯ ಹೆಂಡತಿಯನ್ನು ಕಟ್ಟಿಕೊಂಡು ಚಂದುವು ದೂರದಲ್ಲಿ ಬೇಕಾದಂತಿರಲಿ. ಅಂದರೆ ನನಗೆ ಎಲ್ಲವೂ ಸಾಧಿಸಿತೆಂದು ನಾನು ಅನ್ನುತ್ತಿದ್ದೆನು.''

ಜಾಲಂದರ:—''ಮಾಸಾಹೇಬ, ಹೋಗಲಿಬಿಡಿ. ಸತ್ತವರು ಜೀವಂತವಾಗುವ ವಿದ್ಯೆಯು ಎಲ್ಲಿಯವರೆಗೆ ಕರಗತವಾಗಿರುವದಿಲ್ಲವೋ, ಅದುವರೆಗೆ ಈ ನಿಷ್ಕಾರಣವಾದವೇತಕ್ಕೆ? ಇನ್ನು ಡಾಕ್ಟರನೆಂದು ನಾನು ತಿಳಿಸುವದಿಷ್ಟೇ, ಚಂದೂನ ವೈರಾಗ್ಯದ ನಿಜವಾದ ರಹಸ್ಯವು ನಮ್ಮ ನಿಮ್ಮಗಳಿಗೆ ತಿಳಿದಿದೆಯೆಂಬ ಸುದ್ದಿಯು ಸದ್ಯಕ್ಕಂತೂ ಆತನಿಗಾರೂ ಹತ್ತಗೊಡಬಾರದು. ನಾವು ಡಾಕ್ಟರ ಜನರು ಕಟ್ಟುಜ್ವರಗಳಿಗೆ ಅವಧಿಕೊಡುತ್ತೇವೆ; ಮತ್ತು ರೋಗಿಯ ಬಳಿಯಲ್ಲಿ ಕುಳಿತು ಆತನ ಪ್ರಕೃತಿಯು ಹೆಚ್ಚು ಕೆಡಬಾರದೆಂಬದರ ಕಡೆಗೆ ಹೇಗೆ ಲಕ್ಷ್ಯವಿರಿಸುವೆವೋ, ಅದರಂತೆಯೇ ಚಂದೂನ ವಿಷಯಕ್ಕೆ ನಿರೀಕ್ಷಿಸುತ್ತಿರೋಣ.

ಚಂದೂನ ವೈರಾಗ್ಯದ ನಿಜವಾದ ಕಾರಣ ತಿಳಿದರೂ ಅದರಿಂದ ಮಾ-ಸಾಹೇಬರಿಗೆ ವಿಹಿತವೆನಿಸುವದು ಶಕ್ಯವೇ ಇರಲಿಲ್ಲ. ಮಗನು ವಿಲಾಯತಿಯಲ್ಲಿ ಮಾಡಿದ್ದ ಆ ವ್ಯವಹಾರವು ಅವರಿಗೆ ರುಚಿಸಲಿಲ್ಲ. ಶರಯೂಳ ವಿಷಯದಲ್ಲಿ ತಮ್ಮನ್ನು ವಿಶ್ವಾಸಘಾತಕ್ಕೊಳಪಡಿಸಿದುದು ಅವರಿಗೆ ಸೇರಲಿಲ್ಲ; ಆದರೆ ಚಂದೂನ ನಡವಳಿಕೆಯ ಗೌಪ್ಯವನ್ನು ತಿಳಿದು ಅವರಿಗೆ ತುಸ ಸಮಾಧಾನವೆನಿಸಿತು. ಅಜ್ಞಾನ ಇಲ್ಲವೆ ಸಂಶಯ ಈ ಸ್ಥಿತಿಯಲ್ಲಿ ಉಪಾಯ ಹುಡುಕಹೋಗುವುದೆಂದರೆ, ಅದು ಕಣ್ಣುಮುಚ್ಚಾಣಿಕೆಯಾಟ ನಡೆಸಿದಂತೆಯೇ ಅಲ್ಲವೇ? ನಮ್ಮಗಳ ಬಗ್ಗೆ ಸಹಾನುಭೂತಿಯುಂಟಾಗಿ, ಗುರುಮಹಾರಾಜರೇ ಒಂದು ವೇಳೆ ಚಂದುವಿಗೆ ಬ್ರಹ್ಮಚರ್ಯವ್ರತ ಬಿಡಲಿಕ್ಕೆ ಹೇಳಬಾರದೇಕೇ? ಎಂಬ ಆಶೆಯೂ ಅವರಿಗನಿಸಿರಬೇಕು; ಆದರೆ ಅವರು ತಮ್ಮ ಮನಸ್ಸಿನಲ್ಲಿ ನಿಶ್ಚಯಿಸಿದ

ರೇನಂದರೆ, ಮತ್ತೆ ಆಗಬಹುದಾದ ಈ ಪರಿವರ್ತನವನ್ನು ನಂಬಿ ಶರಯೂಳ ಲಗ್ನವನ್ನು ನಿಲ್ಲಿಸಬೇಡಿರೆಂದು ರಾಯಬಹಾದ್ದೂರ ಶಾಮುಲಾಲರಿಗೂ ಅವರ ಹೆಂಡತಿಗೂ ತಿಳಿಸಬೇಕೆಂದು. ಯಾಕಂದರೆ, ಇನ್ನು ಆ ಜವಾಬುದಾರಿ ಯಾದರೂ ನಮ್ಮ ಮೇಲೆ ಬೇಡ; ನಮ್ಮದೇನಾಗಬೇಕಾಗಿದೆಯೋ ಅದಾ ಗಲಿ. ಲಗ್ನಕ್ಕೆ ಮೊದಲು ಉಭಯಪಕ್ಷದವರೂ ಹಲವು ಸ್ಥಳಗಳನ್ನು ನೋ ಡೇನೋಡುತ್ತಿರುತ್ತಾರೆ; ಹಾಗು ಅವುಗಳೊಳಗಿನ ಒಂದರ ಹೊರತು ಮಿಕ್ಕವು ಗಳನ್ನೆಲ್ಲ ಬಿಡಬೇಕಾಗುವುದೇ ಅಲ್ಲವೆ? ಇಲ್ಲಿಯೂ ಹಾಗೆ ಮಾಡಿದರಾಯಿತು.

ಈ ವಿಚಾರವು ಅವರೆಲ್ಲರಿಗೂ ಸಮ್ಮತವಾಯಿತು. ಬನ್ಸೀಧರನು ತಿಳಿ ಸಿದನಿಷ್ಟೇ, "ನೀವಿನ್ನು ಸ್ವಸ್ಥವಾಗಿರ್ರಿ. ಬಿಟ್ಟಿಯು ನಾಟಕ ನೋಡಲಿಕ್ಕೇನು ತಕ್ಕೊಳ್ಳುವಿರಿ? ನನಗೆ ಏನಾದರೂ ಹೆಚ್ಚು ಮಾಡಬಂದರೆ ಮಾಡುವೆನು; ಇಲ್ಲ ದಿದ್ದರೆ ಬಿಟ್ಟುಬಿಟ್ಟೇನು."

ಮಾಸಾಹೇಬರು ಈ ಬೇತಿನೊಳಗಿನದೊಂದು ಅಕ್ಷರವನ್ನು ಕೂಡ ತಮ್ಮ ಗಂಡನಿಗೆ ತಿಳಿಯಗೊಡಲಿಲ್ಲ; ಆದರೆ ಅಂದಿನಿಂದ ಅವರು ಚಂದೂನ ಕಡೆಗೆ ನಿರಾಶೆಯಿಂದ ನೋಡದಾದರು. ಇಷ್ಟೇ ಅಲ್ಲ, ಅವನು ಇವರೆದುರಿ ನಿಂದ ಹೋಗುವಾಗ, ಅಡ್ಡಾಡುವಾಗ, 'ತುಮಬಿನ ಮೇರೀ ಕೌನ ಖಬರ ಲೇ' ಈ ತನ್ನ ಪ್ರೀತಿಯ ಭಜನೆಯನ್ನು ಯಾವಾಗ ಗುಣಗುಟ್ಟುವನೋ, ಆಗ ಅವ ರಿಗೆ ಮೋಜೆನಿಸಿ, ತಮ್ಮೊಳಗೇ ಹೆಚ್ಚಾಗಿ ನಗುತ್ತಿದ್ದರು; ಮತ್ತು ಅವನನ್ನು ಕುರಿತು "ಅನ್ನ; ಅನ್ನೋ, ಆ ಪದವನ್ನಿನ್ನೊಮ್ಮೆ ನೋಡೋಣ. ಇದನ್ನು ನೀನು ಬಹು ಚೆನ್ನಾಗಿ ಹಾಡುತ್ತೀ; ಆದರೆ ತುಮಬಿನ ಮೇರೀ ಕೌನ ಖಬರಲೇ ಈ ಪದದ ಅರ್ಥವೇನೆಂಬದನ್ನಾದರೂ ನನಗೆ ತಿಳಿಸಿ ಹೇಳು. ಈ ಪದದೊಳ ಗಿನ ತುಮ ಅಂದರಾರು? ಮೇರಿ ಅಂದರಾರು?" ಎನ್ನಲು, ಚಂದುವು ಬರಿಯ ನಗುವನೇ ಹೊರತು ಮಾತನಾಡುತ್ತಿರಲಿಲ್ಲ.

---

ಬನ್ಸಿಯು ಎರಡನೇ ಸಾರಿಗೆ

ಇದಾದ ಬಳಿಕ ಮತ್ತೆ ಕೆಲ ದಿನಗಳಿಗೆ ಬನ್ಸೀಧರನು ಚೋದ್ಯಪುರಕ್ಕೆ ಬಂದನು. ಮುಂಚಿನ ಸಾರೆಯಂತೆ ಈಗಲಾದರೂ ಆತನು ಸರ ಗಂಗಾರಾಮು ಅಥವಾ ಚಂದೂಲಾಲ ಇವರಿಗೆ ಮೊದಲು ಭೆಟ್ಟಿಯಾಗಲಿಲ್ಲ. ಅಭ್ಯಾಗತ ನೆಂದು ಉಳಕೊಳ್ಳುವ ಆತನ ಕೋಣೆಯು ಪ್ರತ್ಯೇಕವೇ ಇತ್ತು. ಅದರಲ್ಲಿ ಆತನು ತನ್ನ ಎಲ್ಲ ಸಾಮಾನುಗಳನ್ನಿಟ್ಟು ಮಾಸಾಹೇಬರನ್ನು ಕಂಡನು. "ಬನ್ಸೀ, ಈ ಸಾರೆ ನೀನು ಬಹು ಬೇಗನೆ ಹಿಂದಿರುಗಿದೆಯಲ್ಲವೇ?" ಎನ್ನಲು

"ಹೌದು ಮಾಸಾಹೇಬ, ಇನ್ನು ಮುಂದಾದರೂ ಎರಡು-ಮೂರುಸಾರೆ ಇದಕ್ಕಿಂತಲೂ ಬೇಗಬೇಗನೆ ಇಲ್ಲಿಗೆ ಬರಬೇಕಾದೀತು. ಅದಿರಲಿ. ನಾನು ಹೋದ ನಂತರ ಏನಾದರೂ ಹೆಚ್ಚು ಕಡಿಮೆ ನಡೆದಿದೆಯೆ?"

ಮಾಸಾಹೇಬ:—"ಒಂದು ಕಡೆಯಿಂದ ತುಸ ಕಡಿಮೆ; ಹಾಗು ಇನ್ನೊಂದು ಕಡೆಯಿಂದ ತುಸ ಹೆಚ್ಚು ನಡೆದಿದೆ."

"ಅದು ಏನೇನು?"

"ಅದು ಹೀಗೆ:—ಚಂದೂನ ಗುರುಭಕ್ತಿಯು ಪ್ರಕರಣವು ಕೊಂಚ ಹಿಂದಕ್ಕೆ ಳೆಯಹತ್ತಿದಂತೆ ತೋರುತ್ತದೆ; ಆತನು ಮೊದಲಿಗಿಂತಲೂ ಮಠಕ್ಕೆ ಕಡಿಮೆಸಾರೆ ಹೋಗುತ್ತಾನೆ; ಹಾಗು ಅಲ್ಲಿ ನಿಲ್ಲುವದೂ ಕಡಿಮೆ ವೇಳೆಯಾಗಿದೆ. ಗುರುಜಿಯು ಹತ್ತರ ಬುವಾಬಾಜಿಯು ಹೊರತು ಬೇರೆ ಬಂಡವಾಲವೇನೂ ಕಾಣುವದಿಲ್ಲ; ಅದರಿಂದ ಅಷ್ಟರ ಮೇಲೆ ವ್ಯಾಪಾರ ಇಲ್ಲವೆ ಕೊಡ-ಕೊಳ್ಳೋಣವೆಷ್ಟು ನಡೆದೀತು? ಗುರುಮಹಾರಾಜರೇನೂ ಇಲ್ಲಿಯ ವಸತಿಗೆ ಬೇಸತ್ತಿಲ್ಲ; ಆದರೆ ಶಿಷ್ಯನಾದ ಚಂದೂನ ಭಕ್ತಿಗೇ ದಡ್ಡುಬಿದ್ದು, ದಿನ ದಿನ ಮೈಯಲ್ಲಿ ಹಾಕುವ ಅಂಗಿಯಂತೆ ಅದು ಕೊಂಚ ಶಿಥಿಲವಾಗುತ್ತಿರುವ ಹಾಗೆ ತೋರುತ್ತದೆ."

ಬನ್ಸೀಧರನು ನಕ್ಕು:—"ಮಾಸಾಹೇಬ, ಯೋಗ್ಯ ಉದಾಹರಣೆ ಕೊಟ್ಟಿರಿ. ಅದೇ ಉದಾಹರಣೆ ತಕ್ಕೊಂಡು ನಾನು ತಿಳಿಸುವದೇನಂದರೆ, ಈ ಗುರುಭಕ್ತಿಯ ಅಂಗಿಯು ಬರಿಯ ಶಿಥಿಲವೇ ಎಕೆ, ಬೇಗನೆ ಹರಿದುಹೋಗುವಂತೆಯೇ ಚಂದೂನ ಮೈಯ ಆಘಾತಗಳು ಅದಕ್ಕಾಗತಕ್ಕವಿವೆ."

"ಅದು ಹೇಗೆ ಹೇಗಪ್ಪಾ?"

"ಅದನ್ನು ತಿಳಿಸುವ ಸಮಯವಿನ್ನೂ ಪ್ರಾಪ್ತವಾಗಿಲ್ಲ; ಅದಕ್ಕೆ ಕೊಂಚ ಅವಕಾಶವಿದೆ; ಆದರೆ ಅದು ಬೇಗನೆ ತಿಳಿದೇ ತಿಳಿದೀತು! ಇರಲಿ. ಇನ್ನು ಒಂದು ಕಡಿಮೆಯಾದದ್ದನ್ನು ತಿಳಿಸಿದಿರಿ; ಆದರೆ ಮತ್ತೊಂದು ಹೆಚ್ಚಾದುದಾವುದು?"

ಮಾಸಾಹೇಬರು ಕೊಂಚ ಇಳಿಮುಖದಿಂದಲೇ ಹೇಳಿದರು:—'ಬನ್ಸೀ, ಅದನ್ನೇನು ಹೇಳಲಿ? ಪಾಪಗ್ರಹಗಳ ಕಾಟವೇ ನಮಗುಂಟಾದಂತಿದೆ; ಯಾಕಂದರೆ, ಇತ್ತ ಚಂದುವು ಗುರುಮಹಾರಾಜರ ಭಜನೆಗೆ ಹೀಗೆ ತೊಡಗಿರಲು, ಅತ್ತ ಬಿಂಬೆಯು ಆ ಶಿಷ್ಯನೊಡನೆ ಮಾಡಬಾರದಷ್ಟು ಸಲಿಗೆ ಮಾಡಹತ್ತಿರುತ್ತಾಳೆ. ಅದಿನ್ನೂ ಸೂಕ್ಷ್ಮದೃಷ್ಟಿಯಿಂದ ನೋಡದ ಹೊರತು ಬೇರೆಯವರಿಗೆ ಹೆಚ್ಚಾಗಿ ಕಾಣುವಂತಿಲ್ಲ; ಆದರೆ ನನ್ನ ದೃಷ್ಟಿಗೆ ಅದು ಹೇಗೆ ಕಾಣಿಸದಿದ್ದೀತು? ನನ್ನ

ಮನಸ್ಸಿಗೆ ಅದೊಂದು ಅಂತಃಚಿಂತೆಯೇ ಹತ್ತಿಬಿಟ್ಟಿದೆ.''

ಬನ್ಸಿ:—''ಮಾಸಾಹೇಬ, ನೀವು ತಿಳಿಸಿದ್ದು ವಿಹಿತವೇ ಆಯಿತು; ಆದರೆ ಎಲ್ಲ ಪಾಪಗ್ರಹಗಳು ಒಂದೇ ಕುಂಡಲಿಯಲ್ಲಿರುತ್ತವಾದ್ದರಿಂದ ಜ್ಯೋತಿಷ್ಕನಿಗೆ ಒಂದು ಗ್ರಹದ ನಿದಾನ ಬೇರೆ, ಇನ್ನೊಂದು ಗ್ರಹದ ನಿದಾನ ಬೇರೆ ಹೀಗೇನೂ ಮಾಡಬೇಕಾಗುವದಿಲ್ಲ. ವಕ್ರಿಗಳಾಗಿ ನಿಮ್ಮ ಮನೆಗೆ ಬಂದಿರುವ ಈ ಎರಡೂ ಪಾಪಗ್ರಹಗಳ ಕುಂಡಲಿಯು ನನ್ನ ಜೇಬಿನಲ್ಲಿದೆಯೆಂದು ತಿಳಿಯಿರಿ. ಅವುಗಳ ಪರಿಹಾರದ ಅನುಷ್ಠಾನವೂ ನಡೆಯತಕ್ಕಲ್ಲಿ ನಡೆದಿವೆ. ಫಲಶ್ರುತಿಯು ಮಾತ್ರ ಬೇಗನೆ ನಿಮ್ಮ ಉಡಿಯೊಳಗೆ ಬಿದ್ದೀತು'

ಅವರಿಬ್ಬರಲ್ಲಿ ಹಾಗೆ ಸಂಭಾಷಣ ನಡೆದಿರುವಷ್ಟರಲ್ಲಿ ಚಂದುವು ಸಹಜ ವಾಗಿ ಅತ್ತಕಡೆಗೆ ಹೋದನು. ಅವರಿಬ್ಬರನ್ನು ಕಂಡು ಅಲ್ಲಿಯೇ ಕುಳಿತು ಬನ್ಸೀಧರನೊಡನೆ ನಾಲ್ಕು ಮಾತನಾಡಬೇಕೆಂದು ಯೋಚಿಸಿ—''ಪೋಲೀಸ ಇನ್ಸಪೆಕ್ಟರ ಸಾಹೇಬ, ಆದಾವ ಪ್ರಯತ್ನದಲ್ಲಿದ್ದೀರಿ? ಯಾವ ಗುಪ್ಪೆಯ ಗುಪ್ತವಿಚಾರಣೆ ಕೈಕೊಂಡಿರುತ್ತೀರಿ?'' ಎಂದು ಕೇಳಲು,

ಬನ್ಸೀಧರನು ನಕ್ಕು:''ಚಂದೂಲಾಲ, ನಮ್ಮ ಪೋಲೀಸ ಖಾತೆಯ ಪರೀ ಕ್ಷೆಗೆ ಜ್ಯೋತಿಷ ವಿಷಯವನ್ನು ಇಟ್ಟರಾದರೆ ವಿಹಿತವಾದೀತೆಂದೆನಿಸುವುದು! ಯಾಕಂದರೆ ಗುಪ್ಪೆಗಾರಿಕೆ ಮತ್ತು ಫಲಜ್ಯೋತಿಷ ಇವುಗಳ ಜೊತೆಯು ವ್ಯವಹಾರದಲ್ಲಿ ಹೆಚ್ಚಾಗಿ ಕೂಡಿರುವಂತೆ ನನ್ನ ಅನುಭವಕ್ಕೆ ಇತ್ತೀಚೆಗೆ ಬರ ಹತ್ತಿದೆ. ಯಾವುದೊಂದು ಕುಟುಂಬದ ಮೇಲೆ ಕೆಲ ಗುಪ್ಪೆಗಾರರು ದಾಳಿ ಮಾಡಿದರೆಂದು ಆ ಅಪರಾಧದ ವಿಚಾರಣೆಗಾಗಿ ಅವರೆಡೆಗೆ ಹೋಗಲು, ಅವರೇ ಮೊದಲು ಹೇಳಹತ್ತುವರೇನಂದರೆ, ನಮಗೆ ಸದ್ಯಕ್ಕೆ ದುಷ್ಟಗ್ರಹಗಳ ಕಾಟ ವುಂಟಾಗಿದೆಯೆಂದು. ಅದರಿಂದ ಕೆಟ್ಟ ಮನುಷ್ಯ ಮತ್ತು ಕೆಟ್ಟಗ್ರಹ ಇವರಿಬ್ಬರ ಉಪಸರ್ಗವು ಒಂದೇಕಾಲಕ್ಕೆ ಒಳ್ಳೇ ಮನುಷ್ಯರಿಗೆ ಒಮ್ಮೊಮ್ಮೆ ಆಗುತ್ತಿರಬೇಕೆಂದು ಇದರ ಮೇಲಿಂದ ಸಿದ್ಧವಾಗುವುದಿಲ್ಲವೇ?''

ತಮ್ಮಿಬ್ಬರಲ್ಲಿ ಆಗಲೆ ಆದ ಭಾಷಣದುಪಯೋಗವನ್ನು ಬನ್ಸೀಧರನು ಹೀಗೆ ಮಾಡಿದುದನ್ನು ಕಂಡು ಮಾಸಾಹೇಬರಿಗೆ ಸಹಜವಾಗಿಯೇ ನಗೆ ಬಂತು! ಆದರೆ ಚಂದುವಿಗೆ ಮಾತ್ರ ಆ ನಗೆಯ ಅರ್ಥವು ತಿಳಿಯಲಿಲ್ಲ. ಅಂತೆಯೇ ಆತನು ಮುಂದಿನ ಧೋರಣದಿಂದಲೇ ಬನ್ಸೀಧರನನ್ನುದ್ದೇಶಿಸಿ:- ''ಫಲಜ್ಯೋತಿಷವನ್ನು ಲೆಕ್ಕದಲ್ಲಿ ಹಿಡಿಯಲೇ ಬಾರದೆಂದು ನನಗೆ ಮುಂಚೆ ಅನಿ ಸುತ್ತಿತ್ತು; ಆದರೆ ಆ ನನ್ನ ಮತವು ಮಾತ್ರ ಈಗ ಕೊಂಚ ಬದಲಾಗಿರುತ್ತದೆ; ಬನ್ಸೀ, ಈಗ ಯಾವ ಕುಟುಂಬಕ್ಕೆ ನಿನ್ನ ಪೋಲೀಸೀ ಚಾತುರ್ಯದ ಸಹಾಯ

ದೊರಕುತ್ತಿದೆ ಎಂಬದನ್ನು ಹೇಳಬಾರದೇ? ಜನರೇನೋ ಪೋಲೀಸರಿಗೆ ಹೆಸರಿಡುತ್ತಾರೆ; ಆದರೆ ಕೊನೆಗೆ ಪ್ರಸಂಗಬಿದ್ದಿತೆಂದರೆ ಹೆಸರಿಡುವವರೂ ಪೋಲೀಸರ ಬಳಿಗೇ ಓಡಿಹೋಗಬೇಕಾಗುತ್ತದೆ."

ಬನ್ನೀ:—"ಆ ಕುಟುಂಬದ ಹೆಸರನ್ನು ನಾನು ಇಂದೆಯೇ ತಿಳಿಸಬಯಸುವುದಿಲ್ಲ; ಆದರೆ ಅವರಿಗೆ ಯಾರಿಂದ ಉಪದ್ರವವಾಗಿದೆಯೋ ಅಥವಾ ಆಗುತ್ತಿರುವದೋ ಆ ಗುಪ್ತೆಗಾರರ ಮಾಹಿತಿಯನ್ನು ಮಾತ್ರ ತುಸಮಟ್ಟಿಗೆ ಹೇಳವೆನು. ಉತ್ತರ ಹಿಂದುಸ್ತಾನದಲ್ಲಿ ಘತ್ತರಗಡವೆಂಬದೊಂದು ದೇಶೀಯ ಸಂಸ್ಥಾನವಿದೆ ಎರಡು ವರ್ಷಗಳ ಮುಂಚೆ ಆ ಸಂಸ್ಥಾನದ ತಿಜೋರಿಯ ಕೆಲಸದಲ್ಲಿ ಗಂಗಾಪ್ರಸಾದ ಎಂಬ ಹೆಸರಿನ ಒಬ್ಬ ಅಧಿಕಾರಿಯಿದ್ದನು. ಅವನು ಎಷ್ಟೋ ದಿನಗಳಿಂದ ಮಥುರಾ ಎಂಬ ಹೆಸರಿನ ವೇಶ್ಯೆಯ ಜಾಲಕ್ಕೆ ಬಲಿಬಿದ್ದಿದ್ದನು. ಆತನು ತನಗೆ ಸಂಪೂರ್ಣ ವಶವಾದುದನ್ನು ಮತ್ತು ಆತನ ಕೈಯೊಳಗೆ ಸಂಸ್ಥಾನದ ತಿಜೋರಿಯಿರುವದನ್ನು ಕಂಡು, ಆ ನಾಯಕಸಾನಿಯ ಲೋಭವು ಹೆಚ್ಚಿತು; ಮತ್ತು ಅವಳು ಆತನ ಮನಸ್ಸಿನಲ್ಲಿ ಆ ತಿಜೋರಿಯ ಮೇಲೆ ಪಾಳಿಯಿಕ್ಕುವ ಕಲ್ಪನೆಯನ್ನು ತುಂಬಿದಳು. ಆ ಮಾತಿಗೆ ಆ ನಾಯಕಸಾನಿಯ ಮೋಹದಿಂದ ಆ ಸರಾಫನು ಒಪ್ಪಿದನು. ಸಂಸ್ಥಾನಿಕನಲ್ಲಿ ಅನೇಕ ಮೋಟರಗಳಿದ್ದವು. ಅದರೊಳಗಿನದೊಂದು ಮೋಟರಿನ ಡ್ರಾಯವ್ಹರನನ್ನು ಆ ಸರಾಫನು ವಶಮಾಡಿಕೊಂಡು ಸುಮಾರು ಎರಡು ವರ್ಷಗಳ ಹಿಂದೆ ಒಂದು ರಾತ್ರಿಯಲ್ಲಿ ಸಂಧಿಸಾಧಿಸಿ, ಪಹರೆಯುವನನ್ನು ಏನೋ ನೆವಮಾಡಿ ದೂರ ಕಳಿಸಿ, ಸರಾಸರಿ ಮುಕ್ಕಾಲು ಲಕ್ಷ ಬೆಲೆಯ ಚಿನ್ನದ ನಾಣ್ಯ, ನೋಟು ಮುಂತಾದವುಗಳನ್ನು ಚೀಲದಲ್ಲಿ ಹಾಕಿಕೊಂಡು ಎತ್ತಿಹಾಕಿದರು. ಆ ಚೀಲಗಳನ್ನು ಮೋಟರಿನಲ್ಲಿಟ್ಟುಕೊಂಡು ಆ ಡ್ರಾಯವ್ಹರ ಮತ್ತು ಗಂಗಾಪ್ರಸಾದ ಇವರು ಮೋಟರಿನೊಡನೆ ಆ ಊರ ಅಗಸೆಯ ದಾಟಿದರು ಅಲ್ಲಿಗೆ ಮಥುರಾ ವೇಶ್ಯೆಯು ಮೊದಲೇ ಹೋಗಿ ಕುಳಿತಿದ್ದಳು. ಬಳಿಕ ಅವರು ಅವಳನ್ನೂ ಮೋಟರಿನಲ್ಲಿ ಕೂರಿಸಿಕೊಂಡರು; ಹಾಗು ಆ ಮಧ್ಯರಾತ್ರಿಯಲ್ಲೇ ನೂರೈವತ್ತು ಮೈಲುಗಳ ಪ್ರವಾಸ ಮಾಡಿ, ಅವರು ಚಾಂದನಪುರ ಸಂಸ್ಥಾನದೊಳಗಿನದೊಂದು ಹಳ್ಳಿಗೆ ತಲುಪಿದರು. ಆ ಊರಲ್ಲೇ ಆ ಮೂವರ ಮನೆಗಳಿದ್ದವು ಅಂತೆಯೇ ಆ ತ್ರಿವರ್ಗರಿಗಷ್ಟು ಗುರುತು--ಪರಿಚಯ! ಗಂಗಾಪ್ರಸಾದನೇ ಘತ್ತರಗಡದಲ್ಲಿ ಮೊದಲು ನೌಕರಿಗೆ ಸೇರಿದವನು. ಆತನು ಅಲ್ಲಿ ಸ್ಥಿರವಾದ ಬಳಿಕ, ಅವನು ಮಥುರಾ ನಾಯಕಸಾನಿಯನ್ನು ಅಲ್ಲಿಗೆ ಕರೆತಂದನು. ಯಾಕಂದರೆ ಅದು ರಾಜಧಾನಿಯ ನಗರವಾದ್ದರಿಂದ, ಅಲ್ಲಿ ಆಕೆಯ ನಾಚು ಬೈಠಕಗಳು ಚೆನ್ನಾಗಿ

ನಡೆಯುವ ಸಂಭವದೋರಿತು. ಆ ಡ್ರಾಯವ್ಹರನ ಹೆಸರು ಫತ್ತೇಸಿಂಗನೆಂದು. ಅವನು ಮೋಟರಿನ ಶಿಕ್ಷಣ ಪಡೆದ ಬಳಿಕ ಗಂಗಾಪ್ರಸಾದನ ಮೂಲಕ ಸಂಸ್ಥಾನ ದರ್ಬಾರದಲ್ಲಿ ವಶೀಲಿಹಚ್ಚಿ, ಅಲ್ಲಿ ಮೋಟರ ಡ್ರಾಯವ್ಹರನ ನೌಕರಿ ದೊರಕಿಸಿದನು.

ಆ ಮೂವರೂ ಹಾಗೆ ಆ ರಾತ್ರಿ ಒಮ್ಮೆಲೆ ತಮ್ಮೂರಿಗೆ ಹೊರಟು ಬಂದ ಮೇಲೆ ಅವರು ಆ ಸುಲಿಗೆಯನ್ನು ಕ್ರಮವಾಗಿ ಹಂಚಿಕೊಂಡರು. ಬಳಿಕ ಮಥುರಾ ಸಾನಿಯು ತನ್ನೂರಲ್ಲೇ ಸ್ಥಿರವಾಗಿರಹತ್ತಿದಳು; ಯಾಕಂದರೆ ಫತ್ತರಗಡದ ಪೋಲೀಸರಿಗೆ ಆ ಕಳವಿನ ವಿಷಯದಲ್ಲಿ ಅವಳ ಸಂಶಯಬರುವ ಸಂಭವವಿರಲಿಲ್ಲ; ಆದರೆ ಸಂಸ್ಥಾನದ ತಿಜೋರಿಯೊಳಗಿನ ಮುಕ್ಕಾಲು ಲಕ್ಷದ ನಿಧಿಯು ಕಳವಾಗಿದ್ದು, ಸಂಸ್ಥಾನೀ ತಿಜೋರಿಯ ಸರಾಫನೂ ಮೋಟರ ಡ್ರಾಯವ್ಹರನೂ ಫರಾರಿಯಾದುದಲ್ಲದೆ, ಸಂಸ್ಥಾನೀ ಮೋಟರು ಕೂಡ ಇಲ್ಲದಂತಾಗಿತ್ತು! ಅವರೆಲ್ಲ ಒಂದೇ ರಾತ್ರಿಯಲ್ಲಿ ಇಲ್ಲದಂತಾದ್ದರಿಂದ, ತಿಜೋರಿಯಲ್ಲಿ ಹೇಗೆ ಕಳವಾಯಿತೆಂಬ ಅನುಮಾನವು ಬಯಲಾಗುತ್ತಿತ್ತು; ಆದರೆ ನಮ್ಮ ದೇಶದ್ದೊಂದು ಮೋಜೇನಂದರೆ, ಸಂಸ್ಥಾನೀ ಅಮಲು ಹಾಗು ಬ್ರಿಟಿಶ ಅಮಲು ಇವುಗಳು ಭತ್ತಮೊಸರು ಕಲಸಿದಂತಿವೆ. ಆದರಿಂದ ಗುಹ್ನೆಗಳ ತಪಾಸಣೆಯೂ ಖಟ್ಲೆ ಹಾಕಿ ಗುಹ್ನೆಗಾರರನ್ನು ನ್ಯಾಯಕೋರ್ಟಿಗೆಳೆದು ಶಿಕ್ಷಿಸುವುದೂ ಈ ಕೆಲಸಗಳು ಬಹುತೊಂದರೆಯುವಾಗಿ ಕೂಡ್ರುವವು. ಯಾಕಂದರೆ ಬ್ರಿಟಿಶ ಹದ್ದಿನೊಳಗಿನ ಪೋಲೀಸ ಅಧಿಕಾರಿಗಳು ಸ್ವತಂತ್ರ ಅಧಿಕಾರದಿಂದ ಸಂಸ್ಥಾನಗಳಲ್ಲಿ ತಮ್ಮ ಕೆಲಸ ನಡೆಸಲು ಶಕ್ಯವಿಲ್ಲ; ಅದರಂತೆಯೇ ಸಂಸ್ಥಾನೀ ಪೋ-ಲೀಸ ಅಧಿಕಾರಿಗಳ ಕೈಕಾಲುಗಳು ಬ್ರಿಟಿಶ ಹದ್ದಿಯಲ್ಲಿ ಶಕ್ತಿಹೀನವಾಗುವವು! ಇನ್ನು ಒಂದು ವೇಳೆ ಒಂದು ಸಂಸ್ಥಾನ ಹಾಗು ಬ್ರಿಟಿಶ ಹದ್ದು ಇವುಗಳದೇ ಸಂಬಂಧ ಬಂದರೆ ಹೇಗಾದರೂ ಆದೀತು; ಆದರೆ ಒಂದು ಸಂಸ್ಥಾನದಲ್ಲಿ ಗುಹ್ನೆ, ಇನ್ನೊಂದು ಸಂಸ್ಥಾನದಲ್ಲಿ ಗುಹ್ನೆಗಾರರು ಹೀಗೆ ಘಟಿಸಿದರಂತೂ ನಮ್ಮ ಪೋಲೀಸರ ತೊಂದರೆಯು ಮೇರೆದಪ್ಪುವುದು! ಇದೇ ಗುಹ್ನೆಯನ್ನು ನೋಡು. ಈ ಗುಹ್ನೆಯ ತಪಾಸಣೆ ಮಾಡುವುದೆಂದರೇನೂ ಉಳಿದೇ ಇಲ್ಲ; ಆದರೆ ಕಳೆದ ಒಂದು ವರ್ಷ ವಾರಂಟು ಬಜಾಯಿಸುವದರಲ್ಲೇ ಸಂದು ಹೋಗಿದೆ.

ಚಂದುವು ಆಶ್ಚರ್ಯದಿಂದ ಕೇಳುವನು:—"ಹಾಗಾದರೆ ಕೊನೆಗೆ ಆ ಗುಹ್ನೆಗಾರರು ಇರುತ್ತಿರುವುದಾದರೂ ಎಲ್ಲಿ?"

ಬನ್ಸಿ—"ಹೇಳಲೇನಪ್ಪಾ! ತೀರ ನನ್ನ ಕಣ್ಣೆದುರಿಗೇ ಇರುತ್ತಾರೆ. ಅವರು ಬೈರಾಗಿಗಳ ಗುಪ್ತವೇಷ ಧರಿಸಿರುತ್ತಾರೆ. ಒಬ್ಬನ ಫೋಟೋ ಹಾಗು ಇನ್ನೊ

ಬ್ಬನದೊಂದು ಹಳೇ ಸ್ಕೆಚ್ಚು ಕೂಡ ನಮ್ಮಲ್ಲಿವೆ. ಆದರೆ ವಾರಂಟುಗಳ ಮೇಲೆ ಆ ಸಂಸ್ಥಾನೀ ಪೋಲೀಸರು ಬರೆದ ಶರಾ ದೊರೆಯುವದಿಲ್ಲ; ಮತ್ತು ಆ ಶರಾ ಇಲ್ಲೆಂದು ಸ್ಥಾನಿಕ ಪೋಲೀಸರ ಸಹಾಯವಿಲ್ಲ.''

ಚಂದು:-''ಆದರೆ ಬೈರಾಗಿಗಳು ತಮ್ಮಲ್ಲಿ ದುಡ್ಡೇಕೆ ಇರಿಸುವರು; ಮತ್ತು ಏತಕ್ಕಾಗಿ ಇರಿಸುವರು?''

''ಅವರು ಆ ಮುದ್ದೆ-ಮಾಲು ಸಂಗಡ ಕಟ್ಟಿಕೊಂಡು ತಿರುಗುತ್ತಿರುವ ರೆಂದು ನಾನೆಲ್ಲಿ ಹೇಳಿದ್ದೇನೆ? ಅವರು ಆ ಸುಲಿಗೆಯನ್ನು ರೂಪಾಂತರಗೊಳಿಸಿದರು; ತಮ್ಮ ಮನೆ-ಮಾರುಗಳಲ್ಲಿ ತುಂಬಿದರು; ಮತ್ತು ಬೇರೆ ಬಗೆಯಿಂದ ಕೆಲ ರಕಮು ಹಂಚಿಟ್ಟಿರುತ್ತಾರೆ; ಹಾಗು ಆ ಇಬ್ಬರೂ ಬಿಡಿ ಬೈರಾಗಿಗಳಾಗಿ ದೇಶಾಟನಕ್ಕೆ ಹೊರಟಿರುತ್ತಾರೆ. ಬೈರಾಗಿಗಳಿಗೆ ಪರಭಾರೆ ಹೊಟ್ಟೆಹೊರೆಯುಲಿಕ್ಕೇನು ಕಠಿಣ? ನಮ್ಮ ನಿಮ್ಮಂತಹ ಹಲವು ಧನಿಕ ಭಾವಿಕ ಜನರಿಲ್ಲವೇ ಅವರಿಗೆ ದಿನಾಲು ಮೈದಾ-ಸಕ್ಕರಿ-ತುಪ್ಪ ಮುಂತಾದ ಸೀದಾ ಪೂರೈಸಲಿಕ್ಕೆ, ದಿನಾಲು ಬೇಕುಬೇಕಾದ್ದನ್ನು ಮಾಡಿ ಉಣಿಸಲಿಕ್ಕೆ? ಇಷ್ಟೇ ಅಲ್ಲ, ಗುರುವಾಗಿ ಮಾಡಿಕೊಳ್ಳಲಿಕ್ಕೆ? ಆದರೆ ಚಂದೂ, ನಾನು ನನ್ನೀ ಕೊನೆಯ ಮಾತನ್ನು ಹಿಂದೆಗೆದುಕೊಳ್ಳುತ್ತೇನಪ್ಪಾ: ಯಾಕಂದರೆ, ಅದನ್ನು ನಿನಗೆ ನಡುವಂತೆ ಆಡಿದಂತಾದೀತು! ಇನ್ನು ನಿನ್ನ ಮಾತು ಬೇರೆ! ಬೇರೆಯವರ ಮಾತು ಬೇರೆ!! ನಾನು ಲೋಕದ ಸಾಮಾನ್ಯರೀತಿಯನ್ನು ತಿಳಿಸಿರುತ್ತೇನಷ್ಟೇ.''

ಚಂದೂ:—''ನೀನು ನನ್ನೊಳಗೂ ಇತರರೊಳಗೂ ತುಸ ಭೇದವೆಣಿಸುತ್ತಿರುವದೇ ಯೋಗ್ಯವು; ಯಾಕಂದರೆ, ನನಗೆ ಹೇಗೆ ನಮ್ಮ ಈ ಗುರುವಿನ ಅಂತರ್ಜ್ಞಾನ ಅಧ್ಯಾತ್ಮಜ್ಞಾನಗಳು ಪ್ರತ್ಯಕ್ಷ ಅನುಭವಕ್ಕೆ ಬಂದವೋ, ಹಾಗೆ ಬಹು ಸ್ವಲ್ಪ ಜನರ ಅನುಭವಕ್ಕೆ ಬರುತ್ತಿರಬಹುದು. ಬರಿಯ ವೈರಾಗ್ಯದ ವೇಷ ನೋಡಿಯೇ ಅವರ ಭಜನೆಗೆ ತೊಡಗುವವರು ಹಲವರು; ಆದರೆ ಅವರಿಗೆ ಭಾವಿಕರೆನ್ನುವದಕ್ಕಿಂತ ನಾನವರಿಗೆ ಮೂರ್ಖರೇ ಅಂದೇನು! ನಿಜವಾದ ಭಾವಿಕತನವು ಅನುಭವದ ಆಧಾರದ ಮೇಲೆಯೇ ಇದೆ.

ಹ್ಹೊ! ಹ್ಹೊ! ಹ್ಹೊ! ಎಂದು ಬನ್ಸೀಧರನು ನಕ್ಕು:—''ನಿನ್ನ ಮಾತೆತ್ತ, ಇತರರ ಮಾತೆತ್ತ? ನೀನಿಂಥ ಸುಶಿಕ್ಷಿತ. ನಾಲ್ಕು ವರ್ಷ ವಿಲಾಯತಿಯಲ್ಲಿದ್ದು ಓದಿದವ. ಎಂ. ಏ. ಬಾರಿಸ್ಟರ, ಆಯ್. ಸಿ. ಎಸ್ ಪಾಸಾದವ. ಇಂಥ ನೀನು ಪೂರ್ಣ ವಿಚಾರ ಮಾಡದೆ ಯಾರನ್ನಾದರೂ ಆತನು ಬೈರಾಗಿಯೆಂದು ಸಮೀಪಕ್ಕೆ ಬರಗೊಟ್ಟೀಯಾ? ಹೋಗಲಿ ಬಿಡು. ನನಗಿಂದು ನಿಮ್ಮ ಗುರುಗಳ ದರ್ಶನ ಪಡೆಯಬೇಕೆಂದೆನಿಸುತ್ತದೆ. ಆದೀತೋ ಇಲ್ಲವೋ?

ಚಂದು:—'ಅದರಲ್ಲೇನು ಕಠಿಣ? ಈಗ ಹೇಗೂ ಸಂಜೆಯೇ ಆಗಿದೆ. ಮಹಾರಾಜರು ಭಜನೆಗಾಗಿ ಹೊರಗೆ ಬಂದು ಕೂಡ್ರುವ ಸಮಯುವೇ.' ಎಂದಂದು ಅಲ್ಲಿಂದೆದ್ದು ಹೋದನು. ಆಗ ಬನ್ಸೀಧರ:—ಮಾಸಾಹೇಬ, ನಿಮ್ಮ ಇಲ್ಲವೆ ಸರ ಸಾಹೇಬರ ಅಥವಾ ಚಂದೂಲಾಲನ ಜನ್ಮಪತ್ರಿಕೆಯು ನಿಮ್ಮಲ್ಲಿದ್ದರೆ ಕೊಡಿ ನೋಡೋಣ. ಅದರ ಮೇಲಿಂದ ಏನಾದರೂ ತಿಳಿಯುವುದೇ ನೆಂದು ನೋಡುತ್ತೇನೆ. ಏತರಿಂದಲೇ ಆಗಲಿ, ನಿಮ್ಮಗಳ ಗ್ರಹಬಾಧೆಯು ದೂರವಾದರೆ ಸಾಕು! ನಿಮ್ಮಗಳಿಗೆ ಯಾವ ಗ್ರಹಗಳಿಂದ ಯಾವ ಬಗೆಯ ಪೀಡೆಯಾಗುತ್ತದೆಂಬದು ಇಂದು ನಿಮಗಿಂತ ನನಗೇ ತುಸ ಹೆಚ್ಚು ಗೊತ್ತಿದೆ ಯೆನ್ನಿರಿ! ಆದ್ದರಿಂದ ಯೋಗ್ಯವಾದ ಉಪಾಯ ಮಾಡುವದೇ ನನ್ನ ಕೆಲಸ. ಇರಲಿ. ಚಂದೂನ ಭೆಟ್ಟಿಯಾಯಿತು; ಆದರೆ ಬಿಂಬೆಯು ಎಲ್ಲಿಯೂ ಕಾಣುವುದಿಲ್ಲವಲ್ಲ!"

"ಆಕೆ ಇಂಥಲ್ಲಿಯೇ ಇರುತ್ತಾಳೆಂದು ಹೇಳಲಿಕ್ಕಾಗುವುದಿಲ್ಲ. ಆ ಹುಡುಗೆಯೆಂದರೆ ಹೂವಿನ ಮೇಲಿನ ಪಾತರಗಿತ್ತಿಯಂತಿರುತ್ತಾಳೆ. ಹಗಲೆಲ್ಲ ರೆಕ್ಕೆಗಳು ಬಡಿಯುತ್ತಿರುವುದು, ಹಾಗು ಕಾಲುಗಳಂತೂ ಒತ್ತಟ್ಟಿಗೆ ಎಂದೂ ಅಂಟಿಕೊಂಡಿರಲಾರವು. ಅದರಲ್ಲೂ ಅವಳು ಮೋಟರು ನಡೆಸಲು ಕಲಿತಿರುತ್ತಾಳೆ. ಅದರಿಂದ ಬೇಕಾದಾಗ ತನ್ನಷ್ಟಕ್ಕೆ ತಾನೇ ಮೋಟರನ್ನು ಶೆಡ್ಡಿನೊಳಗಿಂದ ಹೊರದೆಗೆಯುವಳು; ಮತ್ತು ತಿರುಗಾಡಲಿಕ್ಕೆ ಹೋಗುವಳು. ಇಂದಾದರೂ ಅದರಂತೆಯೇ ಹೋಗಿರಬಹುದು; ಆದರೆ ರಾತ್ರಿಯ ಊಟದ ಹೊತ್ತಿಗೆ ನಿನಗವಳ ಭೆಟ್ಟಿಯಾದೀತು."

ಮುಂದೊಂದು ಕ್ಷಣದಲ್ಲೇ ತನ್ನ ಸಾದಾ ಡ್ರೆಸ್ಸಹಾಕಿಕೊಂಡು ಬನ್ಸೀಧರನು ಮಠದಲ್ಲಿ ಹೊಕ್ಕನು. ಅಷ್ಟರೊಳಗೆ ಗುರುಮಹಾರಾಜರು ಭಜನೆಯ ಸ್ಥಳಕ್ಕೆ ಬಂದು ಕುಳಿತಿದ್ದರು. ಚಂದುವು ಅವರ ಪಾದಗಳ ಹತ್ತರ ಕುಳಿತಿದ್ದನು. ಇಷ್ಟರಲ್ಲಿ ಏನೋ ಆವಶ್ಯಕತೆಯುಂಟಾದುದರಿಂದ ಗುರುಗಳು ಜಂಬುವನ್ನು ಕೂಗಿದರು; ಆದರೆ ಆತನು ಓ ಕೊಡಲಿಲ್ಲ. ಕೂಡಲೆ ನೌಕರ-ಚಾಕರರು ಅತ್ತಿತ್ತ ಆತನ ವಿಚಾರಣೆ ನಡೆಸಿದರು. ಗುರುಗಳ ಕೆಲಸವು ಹೆಚ್ಚಾಗಿ ತಡೆದು ನಿಂತಿತ್ತೆಂತಲ್ಲ; ಆದರೆ ಒಮ್ಮೆ ವಿಚಾರಣೆಗೆ ಪ್ರಾರಂಭವಾದ ಮೇಲೆ ಅದು ಸಹಜವಾಗಿಯೇ ಕೊನೆಮುಟ್ಟುತ್ತದೆ. ಬಳಿಕ ಈ ನೌಕರನು ಆ ನೌಕರನ ಬಳಿ; ಒಬ್ಬ ಚಾಕರನು ಇನ್ನೊಬ್ಬ ಚಾಕರನ ಮುಂದೆ ಈ ಸಂಬಂಧವಾಗಿ ಚರ್ಚೆಮಾಡಿ ಕೊನೆಗೆ ಗುರುಮಹಾರಾಜರ ಬಳಿಗೆ ನಿರೂಪ ಬಂದಿತೇನಂದರೆ, ಒಂದೆರಡು ತಾಸುಗಳ ಮುಂಚೆ ಜಂಬುವು ಸಾಗರಸರೋವರದ

ದಂಡೆಯು ತೋಟದೊಳಗಿಂದ ಹೂವು ತರಲಿಕ್ಕೆಂದು ಮೋಟರಿನಲ್ಲಿ ಹೋಗಿರುತ್ತಾನೆ. ಈ ಸಂಗತಿಯನ್ನು ನಂದಭುವನದ ಮುಖ್ಯ ಮೋಟರ ಡ್ರೈವರನೇ ಹೇಳಿದನು. ಆಗ ಮತ್ತೆ ಚರ್ಚೆ ನಡೆಯಿತೇನಂದರೆ, ಮೋಟರ ಡ್ರೈವರನಂತೂ ಮನೆಯಲ್ಲೇ ಇರುವನು. ಅಂದಬಳಿಕ ಶೆಡ್ಡಿನೊಳಗಿಂದ ಮೋಟರ ತೆಗೆದವರಾರು, ಒಯ್ದವರಾರು? ಆ ಮೋಟರ ಡ್ರೈವರನಿಗೆ ಜಂಬುವಿನಿಂದ ತನಗಾಗುವ ತೊಂದರೆಯನ್ನು ಯಾವಾಗಾದರೊಮ್ಮೆ ತಮ್ಮ ಯಜಮಾನನಿಗೆ ತಿಳಿಸಬೇಕಿತ್ತು. ಆದರಿಂದ ಆತನು ಕೊಂಚ ದುಂಡು ಸುತ್ತಿ:—"ಈ ಸಣ್ಣ ಬೈರಾಗಿಮಹಾರಾಜರು ನಡುನಡುವೆ ಹೀಗೆಯೇ ನಮಗಾರಿಗೂ ತಿಳಿಸದಂತೆ ಮೋಟರು ಒಯ್ಯುತ್ತಿರುತ್ತಾರೆ."

ಆಗ ಚಂದುವು ಸಹಜವಾಗಿಯೇ:—"ಭಲೆಪ್ಪಾ! ಜಂಬುವಿಗೆ ಮೋಟರ ನಡೆಸಬರುತ್ತದಲ್ಲವೆ! ಆತನು ಅದನ್ನು ಎಲ್ಲಿ ಹಾಗು ಯಾವಾಗ ಕಲಿತನಪ್ಪಾ?"

ಅದಕ್ಕೆ ಮೋಟರ ಡ್ರಾಯವ್ಹರ:—"ಅವರು ಬಹು ಚೆನ್ನಾಗಿ ನಡೆಸುತ್ತಾರೆ; ಅಲ್ಲದೆ ಬಿಂಬಾಬಾಯಿಯವರೂ ಅವರ ಜೊತೆಯಲ್ಲಿರುತ್ತಾರೆ; ಅವರಂತೂ ಮೋಟರ ಡ್ರಾಯವಿಂಗ ಲೈಸನ್ಸೇ ಪಡೆದಿರುತ್ತಾರೆ. ಅವರಿಬ್ಬರೂ ಹೂಗಳನ್ನೆತ್ತಿ ತರುವವರಂತೆ ತೋಟದ ಕಡೆಗೆ ಹೋಗಿರುತ್ತಾರೆ!"

ಈ ಸಂವಾದ ನಡೆದಿರಲು, ಬನ್ಸೀಧರನು ತನ್ನ ಮುಖದಲ್ಲಿ ಕೊಂಚವೂ ಚಲನವಲನವಾದಂತೆ ತೋರಗೊಡದೆ, ಕ್ರಮಕ್ರಮವಾಗಿ ಗುರುಮಹಾರಾಜ ಮತ್ತು ಚಂದೂಲಾಲ ಇವರ ಮುಖಮುದ್ರೆಗಳನ್ನು ನಿರಿಕಿಸಿ ನೋಡುತ್ತಿದ್ದನು. ಚಂದುವು ತುಸ ವಿಷಾದಗೊಂಡಂತೆ ತೋರಿದನು; ಮತ್ತು ಗುರುಮಹಾರಾಜರ ಮುಖದಲ್ಲಂತೂ ಗಡ್ಡ-ಮೀಸೆಗಳೊಳಗಿಂದಲೂ ಹೊರಬೀಳುವಷ್ಟು ಅಂಜಿಕೆಯ ಛಾಯೆಯು ಕಂಡಿತು. ಚಂದುವಿಗೆ ಕೆಡಕೆನಿಸುವ ಕಾರಣವು ಸ್ಪಷ್ಟವಿದ್ದಿತು. ಜಂಬೂನ ವಿಷಯದಲ್ಲಿ ಆತನ ತಿರಸ್ಕಾರ ಬುದ್ಧಿಯು ಮೊದಲಿನಿಂದಲೂ ಇತ್ತು; ಆದರೆ ಆತನಿಗೆ ಸಿಟ್ಟು ಬಂದುದೇಕೆಂದರೆ, ತಮ್ಮ ಮನೆಯ ಮೋಟರನ್ನು ಆತನು ತಮಗಾರಿಗೂ ಕೇಳದೆ ಆಗಾಗ್ಗೆ ಏಕೆ ಒಯ್ಯಬೇಕು? ಗುರುವಿನ ಶಿಷ್ಯನಾದ ಮಾತ್ರಕ್ಕೆ ಆತನಿಗೆ ಈ ಅಧಿಕಾರವು ಹೇಗೆ ಪ್ರಾಪ್ತವಾಗುವದು? ಮತ್ತು ಆದರಲ್ಲೂ ಹೆಚ್ಚು ಸಿಟ್ಟು ಬರಲಿಕ್ಕೆ ಕಾರಣವೇನಂದರೆ, ಬಿಂಬೆಯು ತಾನೊಬ್ಬಳೇ ಆತನೊಡನೆ ಮೋಟರಿನಲ್ಲಿ ಹೋಗುವದು.

---

**ಜಂಬೂ ಮತ್ತು ಬಿಂಬಿ.**

ಜಂಬೂ ಮತ್ತೆ ಬಿಂಬೆ ಇವರು ಮೋಟರಿನಲ್ಲಿ ಕುಳಿತು ಸಾಗರ ಸರೋವರಕ್ಕೆ ಹೋದ ಸಂಗತಿಯೇ ನಿಜವಿತ್ತು. ಇತ್ತೀಚೆಗೆ ಬಿಂಬೆಯು ಮಠಕ್ಕೆ ಹೆಚ್ಚಾಗಿ ಎಡತಾಕಹತ್ತಿದ್ದಳು. ಆಕೆಯಾದರೂ ಗುರುಮಹಾರಾಜರಿಂದ ದೀಕ್ಷೆ ಪಡೆದಿರಬಹುದೆಂದು ನೋಡಿದವರಿಗೆ ಅನಿಸುವಂತಿತ್ತು; ಆದರೆ ಹಾಗೆ ಏನೂ ಇರದೆ, ಅಣ್ಣಾ ಮತ್ತು ತಂಗಿ ಇವರಿಬ್ಬರೂ ಗುರು ಮತ್ತು ಶಿಷ್ಯ ಇವರನ್ನು ಹಂಚಿಕೊಂಡಂತಾಗಿತ್ತು. ಚಂದೂನ ಹೆಜ್ಜೆಯು ಮಠದಿಂದ ಹೊರ ಬೀಳುತ್ತಲೆ ಬಿಂಬೆಯು ಚಟಕ್ಕನೆ ಮಠದಲ್ಲಿ ಪ್ರಕಟಳಾಗುವಳು; ಮತ್ತು ಅವಳು ಅಲ್ಲಿಗೆ ಬಂದವಳು ಬೇಗನೆ ಹೊರಬೀಳುತ್ತಿರಲಿಲ್ಲ. ಜಂಬೂ ಮತ್ತು ಬಿಂಬೆ ಇವರು ಏಕತ್ರಿತವಾಗಿ ಕುಳಿತು ಮಾತಾಡುವದು, ನಗುವದು, ಕೆಲೆಯುವದು ಇವು ಗುರುಮಹಾರಾಜರಿಗೆ ಕಾಣಿಸುತ್ತಿದ್ದವು; ಆದರೆ ಅವರು ಅದನ್ನು ಎಂದೂ ನಿಷೇಧಿಸಲಿಲ್ಲ. ಕಟ್ಟು ಮಾಡಲಿಲ್ಲ. ಇಷ್ಟೇ ಅಲ್ಲ, ತದ್ವಿರುದ್ಧವಾಗಿ ಅವರು ತಮ್ಮಿಂದ ಆ ನಗೆ-ಕೆಲೆದಾಟಗಳಿಗೆ ಉತ್ತೇಜನವನ್ನೇ ಕೊಡುತ್ತಿದ್ದರು!

ಗುರುಮಹಾರಾಜರು ಯಾವದೊಂದು ಕೆಲಸವನ್ನು ಹುಡುಕಿ ಅದನ್ನು ಬೇಕಂತಲೇ ಆ ಇಬ್ಬರಿಗೂ ಕೂಡಿ ಮಾಡಲಿಕ್ಕೆ ಹೇಳುತ್ತಿದ್ದರು. ಇಂಥ ಕೆಲಸಗಳಲ್ಲಿ ಹೂಮಾಲೆ ಸಿದ್ಧಪಡಿಸುವುದು, ಪಂಜರದೊಳಗಿನ ಕಪೋತಕ್ಕೆ ಕಾಳು ನೀರು ಕೊಟ್ಟು ಮಾತನಾಡಿಸುವುದು ಮುಂತಾದವುಗಳಿರುತ್ತಿದ್ದವು. ಮನೆಯ ಎರಡು ಮೂರು ತೋಟಗಳೊಳಗಿನ ಹೂವುಗಳು ಬುಟ್ಟಿಗಟ್ಟಲೆ ತುಂಬಿ ತುಂಬಿ ಮನೆಗೆ ಬಂದು ಬೀಳುತ್ತಿದ್ದವು; ಮತ್ತು ಗುರುಮಹಾರಾಜರ ಅಪೇಕ್ಷಿತವಾದ ಆಜ್ಞೆಯು ನೆವಮಾಡಿ ಬಿಂಬೆ-ಜಂಬೂ ಇವರು ಒಮ್ಮೊಮ್ಮೆ ಮಹಾರಾಜರ ಎದುರಿನಲ್ಲಿ ಕುಳಿತು, ಒಮ್ಮೊಮ್ಮೆ ಅವರ ಕಣ್ಣಿಗೆ ಕಾಣದಂತೆ ಕುಳಿತು ಮಾಲೆ ಪೋಣಿಸಹತ್ತುವರು. ಹೂ ಮಾಲೆ ಪೋಣಿಸುವಾಗ ಅವರಿಬ್ಬರು ಎದುರುಬದುರು ತೀರ ಹತ್ತಿರ ಕೂಡ್ರುತ್ತಿದ್ದುದರಿಂದ, ಅವರ ತಲೆ ತಗ್ಗಿಸಿದ ಮುಖಗಳು ಒಂದಕ್ಕೊಂದು ಹೊಂದುವವು; ಮತ್ತು ಬಾಯಿಂದ ನಡೆದಿದ್ದ ಗುಜುಗುಜು ಮಾತುಗಳು ಇನ್ನಾರಿಗೂ ಕೇಳಬರುತ್ತಿರಲಿಲ್ಲ.

ಅದಿರಲಿ. ಇಂದು ಅವರೀರ್ವರೂ ಸಾಗರ ಸರೋವರ ದಂಡೆಯ ಮೇಲಿನ ಸರ ಗಂಗಾರಾಮರ ಖಾಸ ತೋಟಕ್ಕೆ ಹೋದ ಬಳಿಕ ಅವರು ಆ ಮೋಟರನ್ನು ಒಂದು ಗಿಡದ ಕೆಳಗೆ ನಿಲ್ಲಿಸಿದರು; ಮತ್ತು ತೋಟದೊಳಗಿನ ಮಾಲಿಯನ್ನು ಕರೆದು ಆ ಮೋಟರ ಕಾಯುತ್ತ ಸಮೀಪದಲ್ಲೇ ಕುಳಿತಿರಲಿಕ್ಕೆ ಅವನಿಗೆ ಆಜ್ಞೆ ಮಾಡಿದರು; ಇಲ್ಲದಿದ್ದರೆ ಆ ಮಾಲಿಯು ಒಡೆಯನ ಪುತ್ರಿ

ಯು ತೋಟಕ್ಕೆ ಬಂದಳೆಂದು ಹೂವು, ಎಲೆ, ಹಣ್ಣು, ಕಾಯಿ ಮುಂತಾದವುಗಳಲ್ಲಿ ಯಾವವು ಆಕೆಗೆ ರುಚಿಸುವವೋ ಅವುಗಳನ್ನು ತೆಗೆದು ಕೊಡುತ್ತ, ಅವಳ ಹಿಂದಿಂದೆ ಸ್ವಾಭಾವಿಕವಾಗಿಯೆ ತಿರುಗಾಡುವವನು; ಆದರೆ ಮಾಲಿಯ ಆ ಶುಕ್ಲಕಾಷ್ಠವು ತಮ್ಮ ಹಿಂದೆ ಬೇಡವೆಂದು ಅವರು ಮೋಟರಿನ ಕಾವಲಗಾರಿಕೆಯ ಕೆಲಸ ಹೇಳಿ ಆ ಪೀಡೆಯನ್ನು ನೀಗಿದರು.

ಸಾಗರ ಸರೋವರದ ಮೇಲಿನ ಆ ತೋಟವು ವಿಶೇಷ ವಿಸ್ತಾರದ್ದಿದ್ದು ಅದರಲ್ಲಿ ಕೃತ್ರಿಮ ಶೋಭೆಗಿಂತ ನಿಸರ್ಗ ಶೋಭೆಯೇ ಹೆಚ್ಚಾಗಿದ್ದಿತು. ಆಕಾಶಕ್ಕೆ ಮುಟ್ಟುವ ನೂರಾರು ವರ್ಷಗಳ ದೊಡ್ಡ ದೊಡ್ಡ ವೃಕ್ಷಗಳಿದ್ದು ಅವುಗಳ ವಿಸ್ತಾರದ ಕಕ್ಷೆಯಲ್ಲಿ ಹಲವು ಪಕ್ಷಿಕುಲಗಳು ತಲೆಗಟ್ಟಲೆ ವಸಾಹತುಗಳನ್ನು ನಿರ್ಮಿಸಿಕೊಂಡು ವಾಸವಾಗಿದ್ದವು. ಆದಾಯದ ಹೆಚ್ಚಳಕ್ಕೆಂದು ಫಲ-ಪುಷ್ಪಗಳ ಗಿಡ-ಬಳ್ಳಿಗಳು ಕಳೆದ ಇಪ್ಪತ್ತು-ಇಪ್ಪತ್ತೈದು ವರ್ಷಗಳಲ್ಲೇ ಹಚ್ಚಲ್ಪಟ್ಟಿದ್ದವು. ಅವುಗಳಿಗಾಗಿ ಕಪ್ಪಲೀ ನೀರಿನ ಕಾಲುವೆಗಳು ಮಾಡಲಾಗಿದ್ದವು; ಆದರೆ ಎಲ್ಲಕ್ಕೂ ರಮ್ಯ ಮತ್ತು ಸೌಂದರ್ಯೋಪಭೋಗ ಪಡೆಯುವ ಸ್ಥಳಗಳೆಂದರೆ, ಸರೋವರದ ದಂಡೆಗುಂಟ ನೀರಲ್ಲಿ ಹೊಕ್ಕ ವೃಕ್ಷಾಚ್ಛಾದಿತ ಕಿರಿ ಅಗಲದ ಭೂಭಾಗಗಳು. ಅವುಗಳೊಳಗಿನ ಕಲ್ಲು ಮಣ್ಣುಗಳಿಂದ ನಿರ್ಮಿಸಲ್ಪಟ್ಟ ಕಟ್ಟೆಗಳು ತೀರ ಚಿಕ್ಕವಿದ್ದ ಮೂಲಕ ಅವುಗಳ ಮೇಲೆ ಕುಳ್ಳಿರುವವರು ತಮ್ಮ ಕಾಲುಚಾಚಿ, ಬೇಕಾದರೆ ಅವುಗಳನ್ನು ಸರೋವರದ ನೀರಲ್ಲಿ ಕೂಡ ಅಲ್ಲಾಡಿಸ ಬರುವಂತಿತ್ತು.

ಬಿಂಬೆ ಮತ್ತು ಜಂಬೂ ಇವರು ಕೆಲ ಹೊತ್ತು ಅಡ್ಡತಿಡ್ಡವಾಗಿ ತಿರುಗುತ್ತ ತಿರುಗುತ್ತ ಕೊನೆಗೆ ಅಂಥವೇ ಒಂದು ಭೂಭಾಗದ ಮೇಲಿನ ಕಟ್ಟೆಯ ಮೇಲೆ ಬಂದು ಕುಳಿತರು. ಅಪರಾಹ್ಣಕಾಲವಾದ್ದರಿಂದ ತಿರುಗಾಡಲು ಹೊರಟ ಬೇರೆ ಯಾವ ಜನರೂ ಅತ್ತ ಹೊರಳುವ ಸಂಭವವಿರಲಿಲ್ಲ. ನೀರ ಮೇಲೆ ಬಾಗಿದ ಬಿಸಲು ಬಿದ್ದಿತ್ತಾದ್ದರಿಂದ ಆ ಕಟ್ಟೆಯ ಮೇಲೆ ಕುಳಿತವರ ಪ್ರತಿಬಿಂಬಗಳು ನೀರಲ್ಲಿ ಸ್ವಚ್ಛವೂ ಸಹಜವೂ ಕಾಣಿಸುತ್ತಿದ್ದವು.

ಅವರಿಬ್ಬರೂ ಕಟ್ಟೆಯ ಮೇಲೆ ಕುಳಿತ ಬಳಿಕ ಬಿಂಬೆಯು:-"ಜಂಬೂ, ನಾವು ಮನೆಯಿಂದ ಬಹು ತೀವ್ರ ಬರಲಿಲ್ಲವೇ? ನಿಮಗೆ ಮೋಟರು ಇಷ್ಟು ಚೆನ್ನಾಗಿ ನಡೆಸಲು ಬರುತ್ತಿದೆಂಬದು ನನಗೆ ಗೊತ್ತಿರಲಿಲ್ಲ."

ಜಂಬೂ:-"ಬಿಂಬಾಬಾಯಿ, ನೀವು ಹೆಂಗಸರಿದ್ದೂ ಇಷ್ಟು ಚೆನ್ನಾಗಿ ಮೋಟರ ನಡೆಸುತ್ತಿರಲು, ಗಂಡಸಾದ ನನಗದು ನಿಮಗಿಂತಲೂ ಹೆಚ್ಚು ಚೆನ್ನಾಗಿ ನಡೆಸಲು ಬರಲೇಬೇಕು. ಹಾಗೆ ಬರದಿದ್ದರೆ ನನಗೆ ನಾಚಿಕೆ

ಯೆನಿಸಲಿಕ್ಕಿಲ್ಲವೇ?''

''ಅದೇಕಂತೆ! ನಾನು ಹೆಂಗಸಾಗಿದ್ದರೂ ಬೇಕಂತ ಕಲಿತಿರುತ್ತೇನೆಂದು ನನಗೆ ಮೋಟರ ನಡೆಸಲು ಬರುವುದು. ಇದಕ್ಕೆ ವಿಪರೀತವಾಗಿ ಪ್ರತಿಯೊಬ್ಬ ಹುಟ್ಟುಗಂಡಸಾದರೂ ಅವನಿಗೆ ಮೋಟರ ನಡೆಸಲಿಕ್ಕೆ ಬರಲೇಬೇಕೆಂಬದು ಹೇಗೆ ಸಾಧ್ಯವು? ಅದರೊಳಗೆ ನೀವು ಬೈರಾಗಿಗಳು. ನಿಮಗೂ ಮೋಟಂಗೂ ಸಂಬಂಧವೆಲ್ಲಿಯದೆಂದು ಆಶ್ಚರ್ಯವೆನಿಸುತ್ತದೆ!''

ಇದನ್ನು ಕೇಳಿ ಜಂಬುವು ಸ್ತಬ್ಧನಾದನು. ಈ ಯುಕ್ತಿವಾದಕ್ಕೆ ಏನು ಉತ್ತರಕೊಡಬೇಕೆಂಬದು ಅವನಿಗೆ ಒಮ್ಮೆಲೆ ಹೊಳೆಯಲಿಲ್ಲ. ಆತನು ನೀರ ಕಡೆಗೆ ನೆಟ್ಟದೃಷ್ಟಿಯಿರಿಸಿ ಕುಳಿತನು. ಬಿಂಬೆಯಾದರೂ ನೀರ ಕಡೆಗೇ ನೋಡುತ್ತಿದ್ದಳು; ಆದರೆ ಸ್ತ್ರೀಸ್ವಭಾವವು ಅವಳನ್ನು ನಿಶ್ಚಲವಾಗಿ ಕೂರಗೊಡಲೊಲ್ಲದೆಂದು ಅವಳು ತನ್ನ ಬಲಗೈಯಿಂದ ಸಮೀಪದಲ್ಲಿಯ ಒಂದೊಂದು ಸಣ್ಣ ಹರಳುಗಳನ್ನು ಎತ್ತಿಎತ್ತಿ ನೀರಲ್ಲಿ ಚೆಲ್ಲುವಳು; ಅದರಿಂದ ಟಪ್ಪೆಂದು ಸಪ್ಪಳವಾಗಿ ನೀರ ಮೇಲೆ ಚಿಕ್ಕ ತೆರೆಗಳೆದ್ದವೆಂದರೆ, ತನ್ನ ಲೀಲಾ ಕರ್ತೃತ್ವದ ಅಭಿಮಾನವೆನಿಸಿದಂತಾಗಿ ಅವಳು ಬಾಲಸ್ವಭಾವಕ್ಕನುಸರಿಸಿ ಸವಿ ನಗೆ ನಗುವಳು.

ಜಂಬುವು ಬಿಂಬೆಯ ಪ್ರಶ್ನೆಯ ಉತ್ತರ ಕೊಡುವದನ್ನು ನಿರಾಕರಿಸಲಿಕ್ಕೆ ಇದೇ ನೆವತಕ್ಕೊಂಡು: 'ಬಿಂಬಾಬಾಈ, ಇದೇನು? ನೀವು ಚಿಕ್ಕಂದಿನಲ್ಲಿ ಖೋಡಿ ಹುಡುಗಿಯಿದ್ದಂತೆ ಕಾಣುತ್ತದೆ; ಯಾಕಂದರೆ, ಈ ನೀರಗನ್ನಡಿಗಳನ್ನು ಒಂದರಹಿಂದೊಂದರಂತೆ ಒಡೆಯುವ ಕೆಲಸವನ್ನು ಸಣ್ಣಹುಡುಗರಂತೆ ನೀವಿದೇನು ನಡೆಸಿರುತ್ತೀರಿ? ಚಿಕ್ಕಂದಿನಂತೆ ನಿಮ್ಮ ಗಲ್ಲಹಿಂಡಿ ಶಿಕ್ಷಿಸಲಿಕ್ಕೆ ಹತ್ತಿರ ಯಾರೂ ಇಲ್ಲವೆಂದು ಹೀಗೆ ನಡೆಸಿರುವಿರೇನು?''

''ಕನ್ನಡಿಗಳೇ! ಮತ್ತು ಇಲ್ಲೆಲ್ಲಿ ಬರಬೇಕು ಆ ಕನ್ನಡಿಗಳು?''

''ನೀವು ಕೆರೆಯಲ್ಲಿ ಹರಳು ಚಲ್ಲುವ ಆಟನಿಲ್ಲಿಸಿದರೆ, ನಿಮಗೆ ಕ್ಷಣಾರ್ಧದಲ್ಲಿ-ಇಲ್ಲಿ ಕುಳಿತಿರುವಾಗಲೆ ಆ ಕನ್ನಡಿ ತೋರಿಸುತ್ತೇನೆ.''

ಆದರೂ ಬಿಂಬೆಯ ಲಕ್ಷ್ಯದಲ್ಲದು ಬರಲಿಲ್ಲ; ಆದರೆ ನೂರು ಎಣಿಸುವವರೆಗೆ ಆಕೆ ಮತ್ತೆ ನೀರಲ್ಲಿ ಹರಳು ಮಾತ್ರ ಚಲ್ಲಲಿಲ್ಲ. ತೆರೆಗಳೆಲ್ಲ ಅಡಗಿ, ಕೆರೆಯ ನೀರು ನಿಶ್ಚಲವಾಯಿತೆಂಬದನ್ನು ಕಂಡು ಜಂಬುವು ತನ್ನ ಮೈಯು ಬಿಂಬೆಯ ಮೈಗೆ ತುಸಮುಟ್ಟಿಗೆ ಸ್ಪರ್ಶವಾಗುವಷ್ಟು ಹತ್ತರ ಸರಿದು ಕುಳಿತು, ನೀರಕಡೆಗೆ ತೋರ ಬೆರಳು ಮಾಡಿ:—ಅದು ನೋಡಿ, ದೇವರು ನಿರ್ಮಿಸಿದ ಕನ್ನಡಿ. ಈಗ ಅದರಲ್ಲೇನು ಕಾಣುತ್ತದೆ ಹೇಳಿ ನೋಡೋಣ?''

ಆ ನೀರಗನ್ನಡಿಯಲ್ಲಿ ಏನು ಕಾಣುತ್ತಿತ್ತೆಂಬದನ್ನು ಹೇಳಲಿಕ್ಕೆ ಬೇರೆ ಯುವರೇತಕ್ಕೆಬೇಕು? ಸುಂದರ ಕೇಶಕಲಾಪಗಳಿಂದ ಭೂಷಿತಗಳಾದಂಥ ಎರಡು ಚೆಲುವು ಮೊಗದಾವರೆಗಳು ಒಂದರ ಪಕ್ಕದಲ್ಲೊಂದು ಇರಿಸಿದಂತೆ-ಮುಂಡಿಸಿರುವಂತೆ ಆ ತಿಳಿನೀರಲ್ಲಿ ಪ್ರತಿಬಿಂಬಿತಗಳಾಗಿದ್ದವು. ಆ ನೋಟವನ್ನು ನೋಡಿ ಬಿಂಬೆಯು ಮೆಲ್ಲನೆ ನಕ್ಕಳು; ಆದರೆ ಆವಳು ತನ್ನ ತಲೆಯನ್ನುಮಾತ್ರ ಮೇಲಕ್ಕೆತ್ತಿಕೊಳ್ಳಲಿಲ್ಲ. ಆ ಪ್ರತಿಬಿಂಬರೂಪ ಚಿತ್ರ ನೋಡುತ್ತ ಕೂರುವುದು ಆಕೆಗೂ ರುಚಿಸಿರಬಹುದು. ಅಂತೆಯೇ ಅವಳು "ಇಂಥ ಕನ್ನಡಿಗಳನ್ನೊಡೆದರೆ ಜಂಬೂ, ಇವುಗಳ ಹಾನಿಯನ್ನೇನೂ ತುಂಬಿ ಕೊಡಬೇಕಾಗುವದಿಲ್ಲ. ಒಂದರ ಬದಲು ಇನ್ನೊಂದು ಕನ್ನಡಿಯು ಮೊದಲೇ ಸಿದ್ಧವಿರುತ್ತದೆ. ಅಲ್ಲದೆ ಈ ಕನ್ನಡಿ ಒಡೆದರೆ ಇದರ ಕಾಜಿನ ಚೂರುಗಳು ಕಾಲಲ್ಲಿ ನೆಟ್ಟು ನೆತ್ತರ ಹೊರಡಿಸುವದಿಲ್ಲ."

'ಛೇ, ಅದು ಹೇಗಾದೀತು? ಈ ಕನ್ನಡಿ ಒಡೆದರೆ ಹಾನಿತುಂಬಿ ಕೊಡಬೇಕಿಲ್ಲೆಂಬದು ನಿಜ; ಆದರೆ ಇದರ ಕಾಜಿನ ಚೂರುಗಳು ಕಾಲೊಳಗೆ ನಡದಿದ್ದರೂ ಮನನೊಳಗೆ ಹೊಕ್ಕು ರಕ್ತವನ್ನು ಹೀರೇ ಹೀರುವವಲ್ಲ! ನೀವು ಆಗಲೆ ಹರಳುಚಲ್ಲಿ ಯಾವ ಕನ್ನಡಿಯನ್ನು ಒಡೆದಿರೋ, ಅದರ ಚೂರುಗಳು ನನ್ನ ಹೃದಯದಲ್ಲೇ ಹೊಕ್ಕವು; ಆದರೆ ಅಲ್ಲಿ ಅವುಗಳಿಂದುಂಟಾದ ನೆತ್ತರವನ್ನು ನಿಮಗೆ ತೋರಿಸಲಿಕ್ಕೆ ನನಲ್ಲಿ ಸಾಧನವಿಲ್ಲವಿಷ್ಟೇ."

ಇಷ್ಟು ಮಾತು ಬಳೆಸುವಷ್ಟರಲ್ಲಿ ಕೆರೆಯ ನೀರು ಮತ್ತೆ ಸ್ಥಿರವಾಯಿತು. ಮತ್ತೆ ಅವರಿಬ್ಬರೂ ತಮ್ಮ ಪ್ರತಿಬಿಂಬಗಳನ್ನು ನೀರಲ್ಲಿ ನೋಡಹತ್ತಿದರು; ಆದರೆ ಈ ಸಾರೆ ಜಂಬೂನ ತಲೆಯು ಬಿಂಬೆಯ ತಲೆಯ ಹತ್ತರವೊದಲಿಗಿಂತಲೂ ತುಸ ಹೆಚ್ಚೇ ಒಲೆದಿತ್ತು. ಅದನ್ನು ಕಂಡು ಬಿಂಬೆಯು:"ಜಂಬೂ, ಮೊದಲಿನ ಚಿತ್ರಕ್ಕೂ ಈಗಿನ ಚಿತ್ರಕ್ಕೂ ತುಸ ಭೇದವುಂಟಾಗಿದೆಯಲ್ಲವೆ?"

"ಅಹುದು; ದೇಹದ ಮಾಟಗಳಲ್ಲಿ ಹೆಚ್ಚು-ಕಡಿಮೆ ಕಾಣುವದೇನೋ ನಿಜ. ಮನದೊಳಗೆ ಚಲನವಲನವುಂಟಾಯಿತೆಂದರೆ, ಶರೀರದ ನಟನೆಯುಲ್ಲಿ ಹೀಗೆ ಹೆಚ್ಚು-ಕಡಿಮೆಯಾಗುವದೇ; ಆದರೆ ಶರೀರದ ಚಲನವಲನವು ಕಂಡುಬರುವಂತೆ ಮನಸ್ಸಿನದು ಕಂಡುಬರುವದಿಲ್ಲವಿಷ್ಟೇ"

ಬಿಂಬೆಯು ಮತ್ತೆ ನಗುನಗುತ್ತ ಮತ್ತೊಂದು ಹರಳನ್ನೆತ್ತಿ ನೀರಲ್ಲೊಗೆದು:—"ಇಕೊಳ್ಳಿ, ನಾನು ಮತ್ತೆ ಕನ್ನಡಿ ಒಡೆದೆನು."

ಈ ನೆವದಿಂದ ಜಂಬುವು ಸಿಟ್ಟಿನ ನಾಟಕದೋರಿದನು. ಅತನು ತನ್ನ ಬಲಮುಂಗೈಯಿಂದ ಬಿಂಬೆಯು ಮೈಲಚೆಗಿನ ಆಕೆಯ ಬಲಗೈಯನ್ನು ಮುಂ

ಗೈಹತ್ತರ ಹಿಡಿದು:—"ಬಿಂಬಾಬಾಈ, ನಿಮ್ಮ ಘಾತುಕ ಹುಡುಗಾಟಕ್ಕೆ ತಡೆಯನ್ನುಂಟು ಮಾಡಲು ನಿಮ್ಮ ಗಲ್ಲ ಹಿಂಡುವಂಥ ಯಾವ ಅಧಿಕಾರೀ ಮನುಷ್ಯನೂ ಈ ಸ್ಥಳದಲ್ಲಿಲ್ಲವೆಂದು ಆಗಲೆ ನಾನು ಅಂದೆನು; ಆದರೆ ನಿಮ್ಮ ಕೈಯನ್ನಾದರೂ ಹಿಡಿದು, ನಿಮ್ಮ ಆ ಆಟವನ್ನು ತಡೆಯುವ ಅಧಿಕಾರ ವಿದ್ದಂಥವನಾದ ನಾನು ಇಗೋ ಇಲ್ಲಿರುತ್ತೇನೆ."

"ಇಶ್ಯ! ಜಂಬೂ, ನಿಮಗೀ ಅಧಿಕಾರವು ಹೇಗೆ ಬರುವದು?"

"ಅದೇಕೆ ಬರಲಿಕ್ಕಿಲ್ಲ? ಹರಳು ಚೆಲ್ಲಿ ಯಾವ ಕನ್ನಡಿಯನ್ನು ನೀವು ಒಡೆದಿರೋ, ಆ ಕನ್ನಡಿಯ ಮೇಲೆ ಮೂಡಿದ್ದ ಚಿತ್ರವೇನೂ ನಿಮ್ಮೊಬ್ಬರದೇ ಇದ್ದಿಲ್ಲ. ನಿಮ್ಮ ನನ್ನ ಜೊತೆ ಚಿತ್ರವಿತ್ತದು. ಅದರ ಮೇಲೆ ನನ್ನ ನಿಮ್ಮ ಸರಿಪಾಲಿನ ಸ್ವತ್ತಿದ್ದಿತು. ಆದರಿಂದ ಆ ಚಿತ್ರ ನಾಶಪಡಿಸುವ ಕೈಯನ್ನು ಹಿಡಿಯುವ ಅಧಿಕಾರವು ನನಗೆ ಇದ್ದೇ ಇದೆ. ಆಗಲೆ ನೀವು ಮೋಟರ ನಡೆಸು ತ್ತಿರುವಾಗ ಗಾಡಿಯು ಎತ್ತೋ ಹೊರಳುತ್ತಿತ್ತು. ಆಗ ಅದನ್ನು ಸರಿಪಡಿಸಲೋ ಸುಗ ನಾನು ನಿಮ್ಮ ಕೈಹಿಡಿದು ತಿರುಗಿಸುತ್ತಿದ್ದೆನು. ನೀವು ಆಗೆಲ್ಲಿ ಕೇಳಲಿಲ್ಲ, ನಿಮ್ಮ ಕೈಹಿಡಿಯುವ ಅಧಿಕಾರ ನನಗೆಲ್ಲಿತ್ತೆಂದು? ಅಪಘಾತ ತಡೆಯುವದ ಕ್ಕೆಂದು ಒಬ್ಬನಿಗೆ ಇನ್ನೊಬ್ಬನ ಕೈಹಿಡಿಯುವ ಅಧಿಕಾರವನ್ನು ಕಾಯದೆ ಯೂ ಕೊಡುತ್ತದೆ; ಮತ್ತು ಆ ಅಪಘಾತವು ಪ್ರವಾಸ ಸುಖಕ್ಕೆ ಮೋಟರಿನದು ಹೇಗೋ, ಹಾಗೆಯೇ ಹರಳು ಚೆಲ್ಲೋಣದರಿಂದಾಗುವ ಅಪಘಾತವು ನಿಮ್ಮ ನಮ್ಮ ಚಿತ್ರ ದರ್ಶನ ಸುಖಕ್ಕೆ."

ಬಿಂಬೆಯು ಗಟ್ಟಿಯಾಗಿ ನಕ್ಕು:—ಒಟ್ಟಿನಲ್ಲಿ ಒಬ್ಬ ಬೈರಾಗಿಗೆ ಮೋಟರ ನಡೆಯಿಸಲಿಕ್ಕೆ ಬರುವಂತೆ ಅವನಿಗೆ ಕಾಯಿದೆಯ ಜ್ಞಾನವೂ ಇರುತ್ತದೆನ್ನ ಬೇಕು!"

ಈ ರೀತಿಯಿಂದ ಮೋಟರ ನಡೆಸುವ ವಿಷಯವು ಮತ್ತೆ ಹೊರ ಡಲು ಬಿಂಬೆಯು 'ನೀವು ಮೋಟರ ನಡೆಸುವುದನ್ನೆಲ್ಲಿ ಕಲಿತಿರಿ?' ಎಂಬ ಮುಂ ಚಿನ ಪ್ರಶ್ನೆಯನ್ನೇ ಮತ್ತೆ ಕೇಳಿದನು. ಜಂಬುವಿಗೆ ಅದೊಂದು ಅನಿರೀಕ್ಷಿತ ವಾದ ಮುಖಪರೀಕ್ಷೆಯೇ ಅನಿಸಿತು.

ಜಂಬೂ—ಬಿಂಬಾಬಾಈ, ನಾನು ಕಾಣುತ್ತಿರುವ ಹಾಗೆ ನಿಜವಾದ ಬೈರಾಗಿಯಾಗಿರಲಿಕ್ಕಿಲ್ಲ, ಎಂಬ ಅನುಮಾನವನ್ನು ನೀವು ಬಹು ಬೇಗನೆ ಮಾಡಿದಿರೆನ್ನ ಬೇಕು.

ಬಿಂಬೆ:—"ಮಾಡದೇನು? ಉಪ್ಪರಿಗೆಯ ಮೆಟ್ಟಿಲುಗಳನ್ನು ಒಂದರ ಹಿಂದೊಂದರಂತೆ ಕ್ರಮವಾಗಿ ಹತ್ತದೆ-ಇಳಿಯದೆ, ನಡುವಿನ ಒಂದೆರಡನ್ನು

ಬಿಟ್ಟು ಹತ್ತುವ-ಇಳಿಯುವ ವಿದ್ಯೆಯನ್ನು ನಾನು ಚಿಕ್ಕಂದಿನಿಂದಲೇ ಕಲಿತಿರುತ್ತೇನೆ. ಸಂದೇಹ ತಾಳುವುದಾದರೂ ಅದೊಂದು ಏರಿಳಿಯುವ ಮೆಟ್ಟಿಲುಗಳ ಸಾಲೇ ಅಲ್ಲವೆ?''

"ಅಲ್ಲದೇನು? ಆದರೆ ಬಾಲ್ಯಕಾಲದ ಅಭ್ಯಾಸದಲ್ಲಿ ನೀವು ಬರಿಯ ಒಂದೆರಡು ಮೆಟ್ಟಿಲು ಬಿಟ್ಟು ಏರಲು-ಇಳಿಯಲು ಕಲಿತಿರುವಂತೆ, ಉಪ್ಪರಿಗೆಯ ಕೊನೆಯ ಮೆಟ್ಟಿಲಿನ ಕಟಾಂಜನದಿಂದ ಒಮ್ಮೆಲೆ ಕೆಳಗೆ ಜಾರುವದಕ್ಕೂ ಕಲಿತಿರಬಹುದಲ್ಲವೆ?"

ಬಿಂಬೆಯು ನಕ್ಕು:—"ಹೌದು; ಜಂಬೂ, ಅವಸರ ಗಡಿಬಿಡಿಯಿದ್ದಿತೆಂದರೆ ನಾನು ಈಗಲೂ ಹಾಗೆಯೇ ಇಳಿಯುತ್ತಿರುತ್ತೇನೆ."

"ಯೋಗ್ಯವಿದೆ. ಮನುಷ್ಯನ ಜೀವನದಲ್ಲಿ ಸಹ ಒಂದಾನೊಂದು ಕಾಲವು ಅಷ್ಟು ಅವಸರದ್ದೇ ಪ್ರಾಪ್ತವಾಗುವುದರಿಂದ ಆಗ ಆತನಿಗೆ ಕ್ರಮವಾಗಿ ಮೆಟ್ಟಿಲುಗಳ ಮೇಲಿಂದ ಇಳಿಯುವುದಕ್ಕಿಂತ ಕಟಾಂಜನ ಹಿಡಿದು ಜಾರುವದೇ ಅನುಕೂಲವೂ ಸುಖಕರವೂ ಇರುತ್ತದಲ್ಲವೆ?"

"ಆದರೆ ಜಂಬೂ, ಅದರಲ್ಲೊಂದು ವಿಶೇಷ-ಒಮ್ಮೊಮ್ಮೆ ವೇಗದಿಂದ ಬಂದು ನೆಲಕ್ಕಪ್ಪಳಿಸುವ ಅಂಜಿಕೆಯಿರುತ್ತದಲ್ಲವೆ?''

"ನಿಜವನ್ನೇ ನುಡಿದಿರಿ; ಬಿಂಬಾಬಾಈ, ಆದರೆ ಇಂಥ ಪೆಟ್ಟುಗಳನ್ನು ಜೀವನದ ತಾರುಣ್ಯಾವಸ್ಥೆಯಲ್ಲಿ ತಿನ್ನದಿದ್ದರೇನು ವೃದ್ಧಾಪ್ಯದಲ್ಲಿ ತಿನ್ನಬಹುದೇ?''

"ಅದಿರಲಿ. ನೀವು ಬೈರಾಗಿಗಳಲ್ಲೆಂಬ ಸಂದೇಹ ತಾಳಿದುದು ನಿಜವಾದ್ದರಿಂದ, ನೀವು ಯಾರೆಂಬದನ್ನು ತಿಳಿಸುವುದು ನಿಮಗೆ ಕ್ರಮಪ್ರಾಪ್ತವೇ ಆಗಲಿಲ್ಲವೆ?''

"ಅದಕ್ಕೆ ನನ್ನದೆಲ್ಲಿ ಅಡ್ಡಿಯಿದೆ? ಹೇಳುತ್ತೇನೆ ಕೇಳಿಕೊಳ್ಳಿರಿ. ನಾನು ಕಮಲಗಡ ಎಂಬ ಹೆಸರಿನ ಸಂಸ್ಥಾನದ ಒಬ್ಬ ಜಹಗೀರದಾರನೂ ಇನಾಮುದಾರನೂ ಆಗಿರುತ್ತೇನೆ.''

"ಹಾಗಾದರೆ ಈ ಬೈರಾಗಿತನವು ನಿಮಗೆ ಹೇಗೆ ಗಂಟು ಬಿತ್ತು?''

"ಅದನ್ನು ಹೇಳುವೆನು: ನನ್ನ ತಾಯಿ-ತಂದೆಗಳ ಉದರದಲ್ಲಿ ಜನಿಸಿದ್ದ ನನಗಿಂತ ಮುಂಚಿನ ಸಾಲಾಗಿ ಐದು ಜನ ಬಂಧುಗಳು ಮೃತ್ಯುಮುಖಕ್ಕೀಡಾದರು. ಪ್ರತಿಯೊಂದು ಹುಡುಗ ಮೂರು ವರ್ಷದ್ದಾಗಬೇಕು; ಮತ್ತು ಅದು ಆಕಸ್ಮಿಕವಾಗಿ ಸಾಯಬೇಕು, ಇದೇ ಕ್ರಮ ನಡೆದಿತ್ತು. ಆಗ ಒಬ್ಬ ಗಣಕನು ನಮ್ಮ ಅಪ್ಪನಿಗೆ ಹೇಳಿದನೇನಂದರೆ, 'ಇನ್ನು ಮುಂದೆ ನಿನಗಾಗುವ ಮಗನನ್ನು

ಬೈರಾಗಿಯಾಗ ಮಾಡುವೆನೆಂದು ಹರಕೆ ಹೊರು; ಅಂದರೆ ನಿನ್ನ ಮಗ ಬದುಕುವನು' ಬೈರಾಗಿಯಾದರೂ ಮಗನು ಕಣ್ಣೆದುರು ಜೀವಂತನಿರುವನು. ಬೈರಾಗಿಯಾದ ಮಾತ್ರಕ್ಕೆ ಮಗನಲ್ಲವೆಂದು ಹೇಳಬಹುದೇ? ಇತ್ಯಾದಿ ಯೋಚಿಸಿ, ನಮ್ಮ ತಾಯಿಯು ಅದಕ್ಕೆ ಸಮ್ಮತಿಸಿದಳು.''

''ಮುಂದೇನಾಯಿತು?''

''ಮುಂದೆ ಕೆಲ ದಿನಗಳ ಮೇಲೆ ನಾನು ನನ್ನ ತಾಯಿಯ ಗರ್ಭದಿಂದ ಜನಿಸಿದೆನು! ಆಗ ನನ್ನ ತಾಯಿಗೆ ನಿಜವಾದ ಸಂಕಟವು ಪ್ರಾಪ್ತವಾಯಿತು! ಮಗನನ್ನು ಯಾವ ವಯಸ್ಸಿನಲ್ಲಿ ಹೇಗೆ ಬೈರಾಗಿಗೊಳಿಸಬೇಕೆಂಬುದು ಆಕೆಗೆ ತಿಳಿಯದಾಯಿತು. ಇನ್ನು ಬೈರಾಗಿ ಮಾಡಬೇಕಾದರೆ ಆ ಶಿಷ್ಯನನ್ನು ಸ್ವೀಕರಿಸುವ ಬೈರಾಗಿ ಗುರು ಒಬ್ಬ ಬೇಕು. ಬಳಿಕ ಆ ಗುರುವು ತನ್ನ ಶಿಷ್ಯ ಬೈರಾಗಿಯನ್ನು ಸಂಗಡ ಕರೆಕೊಂಡು ತಿರುಗಾಡುವವನು; ಯಾತ್ರೆ ಮಾಡಿಸುವವನು; ಪ್ರವಾಸಕ್ಕೆ ಕರೆದೊಯ್ಯುವವನು! ಆಗ ದಿಗಿಲುಗೊಂಡು ನಮ್ಮ ತಾಯಿಯು ಪುನಃ ಆ ಮೊದಲಿನ ಗಣಕನನ್ನು ಕಂಡು ಅವನನ್ನೇ ಕೇಳಿದಳು. ಆಗ ಆತನು ಹರಕೆ ಮುಟ್ಟಿಸುವದಕ್ಕಿರುವ ರಿಯಾಯತಿಗಳನ್ನು ತಿಳಿಸಿದನು. ಆಗ ಆ ಗಣಕನು: 'ಈ ಹರಕೆ ಮುಟ್ಟಿಸಲಿಕ್ಕೆ ನಿಯಮಿತ ಅವಧಿಯಿಲ್ಲ; ಅಲ್ಲದೆ ಅಜ್ಞಾನಿ ಹುಡುಗನಿಗೆ ಬೈರಾಗಿ ವೃತ್ತಿ ಕೊಡಿಸುವ ಅಧಿಕಾರವು ತಂದೆತಾಯಿಗಳಿಗೂ ಇರುವುದಿಲ್ಲ. ಆದರಿಂದ ಹುಡುಗನು ಸಜ್ಞಾನಿ-ಇಪ್ಪತ್ತೊಂದು ವರ್ಷದವನಾದ ಬಳಿಕ ಆತನಿಗೆ ಈ ಹರಕೆಯನ್ನು ತಿಳಿಹೇಳಬೇಕು; ಅಂದರೆ ಆತನು ತನ್ನಿಚ್ಛೆಯಿಂದ ನಿಮ್ಮ ಹರಕೆ ಮುಟ್ಟಿಸಲಿಕ್ಕೆಂದು ಹಾಗು ದೇವತಾ ಕ್ಷೋಭವು ಸ್ವಂತದ ಮೇಲಾಗಬಾರದೆಂದು ಕೇವಲ ಆತ್ಮಹಿತಕ್ಕಾಗಿಯೇ ಕೆಲ ದಿನ ಬೈರಾಗಿಯ ದೀಕ್ಷೆಪಡೆದಾನು.' ಆ ಮೇರೆಗೆ ನನ್ನ ತಾಯಿಯು ಮತ್ತೆ ಆ ತನ್ನ ಸಂಕಲ್ಪವನ್ನು ಬಿಟ್ಟಳು; ಮತ್ತು ನಾನು ಇಪ್ಪತ್ತೊಂದು ವರ್ಷದವನಾದ ಬಳಿಕ ನನ್ನ ಇಚ್ಛೆಯ ಮೇರೆಗೆ ನಾನು ಈ ಗುರುಮಹಾರಾಜರಿಂದ ದೀಕ್ಷೆ ಪಡೆದಿರುವೆನು; ಹಾಗು ಮೃತಪಟ್ಟಿರುವ ನನ್ನ ತಾಯಿಯನ್ನು ಆ ಹರಕೆಯಿಂದ ಮುಕ್ತಗೊಳಿಸಿರುವೆನು.''

''ಅವ್ವಯ್ಯಾ! ಹಾಗಾದರೆ ನೀವಿನ್ನು ಇಡೀ ಜನ್ಮದಲ್ಲಿ ಬೈರಾಗಿಗಳಾಗಿಯೇ ಇರುವಿರೇನು?'' ಬಿಂಬೆಯ ಈ ಪ್ರಶ್ನೆಯಲ್ಲಿ ತುಸ ವಿನೋದವೂ ಅದರೊಡನೆ ತುಸ ಜೀವಾಳವೂ ಕಂಡು ಬಂದಿತು.

ಜಂಬು—''ಛೀ, ಛೀ! ನಾನು ಕಳೆದೆರಡು ವರ್ಷಗಳಿಂದ ಬೈರಾಗಿಯ ವ್ರತ ಪಾಲಿಸಿರುವದರಿಂದ ಆ ಹರಕೆಯ ಬಂಧನವು ಇನ್ನುಮೇಲೆ ಉಳಿಯುವು

ದಿಲ್ಲ. ಇನ್ನು ನನಗೇ ಈ ಬೈರಾಗಿ ಜೀವನವು ರುಚಿಸಹತ್ತಿ ನಾನು ಶೇಷಾಯುಷ್ಯವನ್ನೇ ಬ್ರಹ್ಮಚಾರಿಯೂ ಉದಾಸೀನನೂ ಆಗಿ ಕಳೆದರೆ ನನಗೆ ಬೇಡವೆಂದೆನ್ನುವವರಾರು?''

''ಅದೇಕೆ? ನಿಮ್ಮ ತಾಯಿ-ತಂದೆಗಳು?''

''ನನ್ನ ದುರ್ದೈವದಿಂದ ನನ್ನ ತಂದೆಯು ನನ್ನ ಎಂಟನೇ ವರ್ಷವೇ ಗತಿಸಿ ಹೋದನು. ತನ್ನ ತಾಯಿಯು ನನ್ನ ಇಪ್ಪತ್ತೆರಡನೇ ವರ್ಷದಲ್ಲಿ ಅಂದರೆ, ನಾನು ಈ ಬೈರಾಗಿ ದೀಕ್ಷೆ ಪಡೆದ ಮೇಲೊಂದು ವರ್ಷಕ್ಕೆ ಗತಿಸಿದಳು.''

''ಮತ್ತು ನಿಮ್ಮ ಜಹಗೀರು ಇನಾಮುಗಳೇನಿದ್ದವೆಂದಿರಲ್ಲ; ಅವುಗಳ ಗತಿಯೇನಾಯಿತು?''

''ನಮ್ಮ ವಂಶಪರಂಪರಾಗತ ದಿವಾಣರಿರುವರು; ಅವರು ಹೆಚ್ಚು ವಸೂಲ ಹಾಗು ಅಲ್ಪ ಖರ್ಚ ಮಾಡಿ ಒಳ್ಳೇ ಸಿಲ್ಕು ಸಂಗ್ರಹಿಸುತ್ತಿರುತ್ತಾರೆ. ನನ್ನ ಹೆಸರಿನ ಬ್ಯಾಂಕ ಬುಕ್ಕಿನಲ್ಲಿ ಸುಮಾರು ಅರವತ್ತು ಸಾವಿರಕ್ಕಿಂತ ಹೆಚ್ಚು ಸಿಲ್ಕು ಹಣವಿರಬಹುದು. ನಾನು ಬೈರಾಗಿ ದೀಕ್ಷೆಯನ್ನು ವಿಸರ್ಜನಗೊಳಿಸುವ ವರೆಗೆ ನಾನು ಸಂಸಾರದಲ್ಲಿಲ್ಲೆಂದು ಮನಸ್ಸಿನಿಂದ ತಿಳಿಯುವ ನನ್ನ ನಿಶ್ಚಯವಿದೆ. ಇದು ದೀಕ್ಷೆಯ ಅಪ್ರಮಾಣಿಕತನವೆಂದರೇನು! ಇನ್ನು ಬೈರಾಗಿಗಳಲ್ಲೂ ಹಲವು ಪ್ರಕಾರಗಳಿರುತ್ತವೆ.''

''ಅವೆಂಥವು?''

''ಕೆಲವು ಜನರು ಬೈರಾಗಿಗಳಿರುತ್ತಾರೆ; ಆದರೆ ಅವರು ಪ್ರವೃತ್ತಿ ಮಾರ್ಗಿಗಳು. ಅವರು ಎಲ್ಲ ಸಂಸಾರವನ್ನೂ ಮಾಡುವರು ಬರಿಯ ಲಗ್ನವನ್ನೊಂದೇ ಮಾಡುವದಿಲ್ಲ. ಶಿಷ್ಯರನ್ನು ದತ್ತು ಎಂದು ಪಡೆಯುವರು; ಮತ್ತು ಹೀಗೆಯೇ ತಮ್ಮ ಪರಂಪರೆ ನಡೆಸುತ್ತಾರೆ.''

''ಇದೇನಪ್ಪಾ! ಲಗ್ನವಿಲ್ಲದೆ ಸಂಸಾರವೇ?''

''ಅದರಲ್ಲೇನು? ಶಿಷ್ಯನು ಜಹಗೀರಿಗೊಡೆಯನಿರುವನು. ಔರಸ ಮಗನಿಗೆ ಖಾಸ ಇಸ್ಟೇಟು ಸಿಗುವದು. ನಮ್ಮ ಹಿಂದೂಧರ್ಮವು ಒಳ್ಳೇ ಅನುಕೂಲದ್ದಿದೆ. ಈ ಧರ್ಮದಲ್ಲಿ ಸರ್ವವೂ ಎರಕದ ಯಂತ್ರದಂತೆ ಸರಿಯಾಗಿ ಕೂಡುತ್ತದೆ. ಅದಿರಲಿ. ಇಪ್ಪತ್ತೊಂದು ವರ್ಷದವರೆಗೂ ನಾನು ಬೈರಾಗಿ ದೀಕ್ಷೆ ಪಡೆಯುವದು ನಿಶ್ಚಿತವೇ ಇರಲಿಲ್ಲ. ಅದರಿಂದ ನನ್ನ ತಾಯಿಯು ತಾನು ಸಾಯುವವರೆಗೂ ನನಗೆ ಎಲ್ಲ ಬಗೆಯ ಸಂಸಾರ ಸುಖಪಡೆಯಗೊಟ್ಟು, ನನ್ನ ಹಾಗು ತನ್ನ ಹುಮ್ಮಸವನ್ನು ಪೂರೈಸಿಕೊಂಡಳು! ಮತ್ತು ಈಗ ಮಾತಿಗೆ ಮಾತು ಹೊರಟಿರುವದರಿಂದಲೇ ಬಿಂಬಾಬಾಈ ಹೇಳುತ್ತೇನೆ

ಕೇಳಿರಿ: —ನಾನು ಮೋಟರ ನಡೆಸಲಿಕ್ಕೆ ಕಲಿತದ್ದು ಬೇರೆಯವರ ಮೋಟರಿನಲ್ಲಲ್ಲ; ಸ್ವಂತದ ಖಾಸ ಮೋಟರಿನಲ್ಲೇ; ನನ್ನ ಸ್ವಂತದ ಸಂಬಳದ ನಿಪುಣ ಮೋಟರ ಡ್ರೈವರಿನಿಂದಲೇ ಕಲಿತೆನು. ಇತ್ತೀಚೆಗೆ ಮೂರು ವರ್ಷಗಳಲ್ಲಿ ನನ್ನ ಮೋಟರ ಜಂಗು ಹಿಡಿದು ಹೋಗಿದ್ದೀತು. ಆ ಬಗ್ಗೆ ಮಾತ್ರ ನನಗೆ ಕೆಡಕೆನಿಸುತ್ತದೆ.''

''ಆದಿರಲಿ. ನಿಮ್ಮ ತಾಯಿಯು ನಿಮಗೆ ಎಲ್ಲ ಸಂಸಾರ ಸುಖ ದೊರಕಿಸಿಕೊಟ್ಟಿದ್ದರೆಂದ ಬಳಿಕ ಅವರು ನಿಮ್ಮ ಲಗ್ನವನ್ನೇಕೆ ಮಾಡಲಿಲ್ಲ? ಮತ್ತು ಆ ಲಗ್ನದ ವಿಷಯದ ತಮ್ಮ ಹುಮ್ಮಸವನ್ನೇಕೆ ಪೂರೈಸಿಕೊಳ್ಳಲಿಲ್ಲ?''

"ಬಿಂಬಾಬಾಈ, ಇದೆಂಥ ಹುಚ್ಚರ ಹಾಗೆ ಪ್ರಶ್ನೆ ಕೇಳುವಿರಿ ನೀವು? ಲಗ್ನವಾಗಗೊಟ್ಟಿದ್ದರೆ, ನನ್ನ ಹೆಂಡತಿಯು ನನ್ನನ್ನು ಬೈರಾಗಿಯಾಗ ಬಿಡುವಳೇ? ಇನ್ನು ೨೧-೨೨ ವರ್ಷಗಳೆಂದರೇನು ಲಗ್ನಕ್ಕೆ ಹೆಚ್ಚು ವರ್ಷಗಳಾಗುವವೆಂತಿಲ್ಲ. ಮಡದಿಯ ಪ್ರೇಮದ ಮೂಲಕ ನಾನು ಬೈರಾಗಿಯಾಗುವದನ್ನು ನಿರಾಕರಿಸಿದ್ದರೆ ಇಲ್ಲವೆ ಮುಂದೂಡಿದ್ದರೆ ದೇವರ ಶಾಪದ ಭಯದಲ್ಲೇ ನನ್ನ ತಾಯಿಯು ದಿನಗಳೆಯಬೇಕಾಗುತ್ತಿತ್ತು. ಅದರಿಂದಲೇ ಲಗ್ನದ ವಿಚಾರವನ್ನು ನಾನಾಗಿ ಅಲ್ಲಗಳೆದೆನು ''

''ಈಗ ನಿಮ್ಮ ತಾಯಿ ತೀರಿಕೊಂಡು ಹೋಗಿರುವಳು; ಅಂದ ಬಳಿಕ ಬೈರಾಗಿಯ ದೀಕ್ಷೆಯನ್ನು ವಿಸರ್ಜನೆಗೊಳಿಸಿ ಮತ್ತೆ ಸಂಸಾರದಲ್ಲಿ ಸೇರು, ಎಂದು ನಿಮಗೆ ಹೇಳುವವರು ಈ ಲೋಕದಲ್ಲಿ ಮತ್ತಾರಿರುತ್ತಾರೆ?''

"ಎಂದಾದರೂ ಯಾರಾದರೂ ಭೆಟ್ಟಿಯಾದಾಗ ನೋಡೋಣವಂತೆ. ತಾಯಿಯಂತೂ ನಿರ್ಭಯದಿಂದಿದ್ದು ಮತ್ತು ಕೃತಕೃತ್ಯಳಾಗಿ ತೀರಿಕೊಂಡಳಷ್ಟೇ? ಇನ್ನು ನನ್ನಷ್ಟಕ್ಕೆ ನಾನು ಸ್ವತಂತ್ರನಿರುತ್ತೇನೆ. ದೀಕ್ಷೆಯ ಹರಕೆ ತೀರುವ ಅವಧಿಯು ನಿಶ್ಚಿತವಿಲ್ಲ. ನಾನು ನನ್ನ ಮನಸ್ಸಿನಿಂದ ಯಾವುದನ್ನು ನಿರ್ಧರಿಸುವೆನೋ ಅದೇ ನಿಜ. ಅದರಲ್ಲಿ ದೇವರ ಅಪರಾಧ ಘಟಿಸಿದರೆ ಏನಾದೀತೋ ಆ ಬಗ್ಗೆ ನಾನಿದ್ದೇನೆ; ಮತ್ತು ದೇವರಿದ್ದಾನೆ. ನಾನು ಅದನ್ನು ನೋಡಿಕೊಳ್ಳುತ್ತೇನೆ. ಸಂಸಾರದಲ್ಲಿ ಸೇರಬೇಕೆಂಬ ಇಚ್ಛೆಯುಂಟಾಗುವಂಥ ಮನುಷ್ಯರು ದೊರೆತರೇ ಈ ಸಂಸಾರದಲ್ಲಿ ಸೇರುವುದು; ಇಲ್ಲದಿದ್ದರೆ ಈಗಿದ್ದ ಸ್ಥಿತಿಯು ಚೆನ್ನಾಗಿಯೇ ಇದೆ, ಎಂದು ನಾನು ನನ್ನ ಮನಸ್ಸಿನಲ್ಲಿ ನಿಶ್ಚೈಯಿಸಿಕೊಂಡಿರುತ್ತೇನೆ. ನೋಡಿರಿ. ಗುರುಗಳ ಸನ್ನಿಧಿಯಲ್ಲಿ-ನಿಮ್ಮ ಮನೆಯಲ್ಲಿ ಇಂದು ನನಗೇನು ಕೊರತೆಯಾಗಿದೆ? ಬಿಂಬಾಬಾಈ, ನಾನನ್ನುವುದು ಲೆಕ್ಕಾಚಾರದಂತಿದೆಯೋ ಇಲ್ಲವೋ ಎಂಬುದನ್ನು ನೀವೇ ಹೇಳಿರಿ."

"ಆದರೆ ಜಂಬೂ, ನಾನೊಂದು ಮಾತು ಕೇಳುತ್ತೇನೆ. ನೀವು ಅದಕ್ಕೆ ಸತ್ಯವಾದ ಉತ್ತರ ಕೊಡಿರಿ."

"ಕೇಳಿರಿ, ನಿಮ್ಮ ಕೊರಳಾಣೆಯಾಗಿಯೂ ಸತ್ಯವನ್ನೇ ಹೇಳುವೆನು." ಎಂದೆಂದು, ಜಂಬುವು ನಿಜವಾಗಿಯೂ ಬಿಂಬೆಯ ಕೊರಳಿಗೆ ಕೈಹಚ್ಚಿದನು; ಆದರೆ ಆಣೆ ಮಾಡಲಿಕ್ಕೆ ಆವಶ್ಯಕವಿದ್ದದಕ್ಕಿಂತ ಎಷ್ಟೋ ಹೆಚ್ಚು ಕಾಲದವರೆಗೆ ಅವನು ಆ ತನ್ನ ಕೈಯನ್ನು ಬಿಂಬೆಯ ಆ ಕುತ್ತಿಗೆಯ ಮೇಲೆಯೇ ಇಟ್ಟನು. ಬಿಂಬೆಯಾದರೂ ಜಂಬೂನ ಆ ಧಾರ್ಮಿಕ ಆಚಾರಕ್ಕೆ ಅಡ್ಡಿ ಮಾಡಲಿಲ್ಲ!!

"ಕೇಳುವುದಿಷ್ಟೇ, ನಿಮಗೆ ನಿಜವಾಗಿಯೂ ಸಂಸಾರದ ಬಗ್ಗೆ ಬೇಸರವುಂಟಾಗಿದೆಯೋ?"

ಖ್ಖೊ-ಖ್ಖೊಕ್ಕೆಂದು ನಕ್ಕು ಜಂಬುವು:—"ಬಿಂಬಾಬಾಈ, ಯಾವ ಸಂಸಾರವನ್ನು ನಾನಿನ್ನೂ ಪ್ರಾರಂಭಿಸಿರುವುದಿಲ್ಲವೋ, ಆ ಬಗ್ಗೆ ನನಗೆ ಬೇಸರ ಬಂದಿದೆಯೆಂಬುದನ್ನು ನಾನು ಪ್ರಾಮಾಣಿಕವಾಗಿ ಹೇಗೆ ಹೇಳಲಿ? ನಾನು ಬೇಕಾದಾಗ ಈ ವೈರಾಗೀ ದೀಕ್ಷೆ ಕಿತ್ತೊಗೆದು ಸಂಸಾರದಲ್ಲಿ ಸೇರಲಿಕ್ಕೆ ಸಿದ್ಧನಿದ್ದೇನೆ; ಆದರೆ ಎಂಜಲವನ್ನೇ ತಿನ್ನುವವಾದರೆ, ತುಪ್ಪಕ್ಕೆಂದು ತಿಂದರೆ ಅಡ್ಡಿಯಿಲ್ಲವೆಂದು ನಾಣ್ಣುಡಿಯೇ ಇದೆ! ಅದರಂತೆ ಮನಮೆಚ್ಚುವ ಸ್ತ್ರೀರತ್ನ ದೊರಕಿದರೆ ಮಾತ್ರ ಲಗ್ನವಾಗಬೇಕು; ಇಲ್ಲದಿದ್ದರೆ ವೈರಾಗ್ಯದ ಐಶ್ವರ್ಯವು ಕೈಯಿಂದ ಹೋಗಿ ಸಂಸಾರದ ಐಶ್ವರ್ಯ ಮಾತ್ರ ಮನಸ್ಸಿನಂತೆ ಲಭಿಸದಂತಾದೀತು! ಇಬ್ಬಗೆಯಿಂದಲೂ ಫಜೀತಿಯನ್ನೇಕೆ ಮಾಡಿಕೊಳ್ಳಬೇಕು? ಹಾಗೆ ಮಾಡ ಹೋದರೆ, ನಿಮ್ಮ ಅಣ್ಣನಂತೆ ಫಜೀತಿಪಟ್ಟುಕೊಳ್ಳಬೇಕಾದೀತಲ್ಲವೆ?"

ಜಂಬುವು ಇಷ್ಟು ಮಾತಾಡುವಷ್ಟರಲ್ಲಿಯೇ ಇವರು ಕುಳಿತಿದ್ದ ಸ್ಥಳದ ಬದಿಯ ಗಿಡದಲ್ಲೊಂದು ಗಿಳಿಯ ಜೊತೆಯು ಬಂದು ಕುಳಿತಿತು. ಅವುಗಳು ಪರಸ್ಪರರ ಮೈಗಳನ್ನು ತಮ್ಮ ಕೊಕ್ಕಿನಿಂದ ತಿಕ್ಕಿ ತಿಕ್ಕಿ ಸ್ವಚ್ಛಮಾಡತೊಡಗಿದವು. ನಡುನಡುವೆ ಅವು ತಮ್ಮ ಚುಂಚುಗಳನ್ನು ಒಂದಕ್ಕೊಂದು ಪ್ರೇಮಿ ದಂಪತಿಗಳು ಪರಸ್ಪರರ ಚುಂಬನ ಮಾಡುತ್ತಿರುವಂತೆ ತಿಕ್ಕುತ್ತಿದ್ದವು!

ಅದನ್ನು ಕಂಡು ಬಿಂಬೆಯು ಜಂಬುವನ್ನು ಕುರಿತು:—"ಶಿಷ್ಯ ಮಹಾರಾಜರೇ, ಹುಷಾರ್! ಇಲ್ಲದಿದ್ದರೆ ನಿಮ್ಮದೂ ನಮ್ಮ ಅಣ್ಣನಂತೆಯೇ ಆದೀತು! ನೀವು ಆ ಶುಕದಂಪತಿಗಳ ಆಟವನ್ನು ನೋಡಿ ಸಹಿಸಲಾರದೆ, ಅವುಗಳಿಗೆ ಯಾವುದೊಂದು ಕಲ್ಲುಬೀಸಿ ಚಂದಣ್ಣನಂತೆ ಹಿಂಸೆಗೆ ಗುರಿಯಾದೀರಿ ಎಚ್ಚರ!"

"ನಿಮ್ಮ ಹಾಗೆ ನನಗೆ ಕಲ್ಲು ಚೆಲ್ಲುವ ಚಟವಿಲ್ಲ! ಒಂದು ವೇಳೆ ಚೆಲ್ಲಿದರೆ ಏನಾದೀತು ಹೇಳಿರಿ ನೋಡೋಣ?"

"ಆಗ ಇವುಗಳೊಳಗಿನ ಯಾವುದೊಂದು ಹಕ್ಕಿಯು ಸತ್ತುಬಿದ್ದೀತು!"

"ಆಹುದು; ಸತ್ತುಬಿದ್ದರೆ ಮುಂದೇನಾಗುವದು?"

"ಆ ಮೇಲೆ ನೀವು ಹಿಂಸೆಮಾಡಿದಿರೆಂದು ಸಿಟ್ಟಾಗಿ ನಾನು ನಿಮ್ಮನ್ನು ಶಪಿಸೇನು?"

"ಆದರೆ ಶಪಿಸುವವರು ಋಷಿ-ಬೈರಾಗಿಗಳೇ ಇರಬೇಕಾಗುತ್ತದಲ್ಲ! ಅದಿರಲಿ. ನೀವೇ ಶಪಿಸುವದಾದರೆ ನನಗೆ ಏನೆಂದು ಶಾಪಕೊಟ್ಟೀರಿ?"

"ದೇವರು ನಿಮ್ಮನ್ನು ನೋಡಿಕೊಂಡಾನೆಂದು ಶಾಪಕೊಟ್ಟೇನು."

"ಹಾಗೆ ಶಪಿಸಿದ ಬಳಿಕ ಮುಂದೇನಾದೀತು?"

"ಆ ಮೇಲೆ ನಿಮಗೆ ನಿಜವಾದ ವೈರಾಗ್ಯವುಂಟಾದೀತು. ನೀವು ನಿಮ್ಮ ಜಹಗೀರು ಇನಾಮುಗಳ ಮೇಲೆ ತಿಲಾಂಜಲಿಯಿತ್ತೀರಿ. ನಿಮ್ಮ ಬೇರೆ ಎಲ್ಲ ಉದ್ಯೋಗಬಿಟ್ಟುಗೊಟ್ಟು, ಆಜನ್ಮ ಬ್ರಹ್ಮಚಾರಿಗಳಾಗಿರುವ ಪಣತೊಟ್ಟೀರಿ!"

'ಛೀ! ಅಂಥ ಅಭದ್ರಶಬ್ದಗಳನ್ನು ಕೂಡ ಹೇಳಬೇಡಿರಿ. ನಾನು ನಿಮ್ಮ ಅಣ್ಣನಂತೆ ಹಸಿಬಿಸಿ ಹೃದಯದವನಲ್ಲ; ಮತ್ತು ಆತನದಾದರೂ ವೈರಾಗ್ಯ ಇನ್ನದೆಷ್ಟು ದಿನ ಉಳಿದೀತೆಂಬುದನ್ನು ನೀವೇ ನೋಡಿರಿ! ನಾನು ವೈರಾಗ್ಯದ ನನ್ನ ಸರತಿಯನ್ನು ತೀರಿಸಿಕೊಂಡು ಈಗ ಸಂಸಾರಕ್ಕೆ ಪಾತ್ರನಾಗಿರುತ್ತೇನೆ; ಮತ್ತು ಉಪೋಷಣ ಮಾಡಿದ ಬಳಿಕ ಪಾರಣಿಗೆ ಹೇಗೆ ಚೆನ್ನಾಗಿ ಹೊಟ್ಟೆ ಹಸಿಯುತ್ತದೋ, ಸಂಸಾರದ ಅಂಥ ಕ್ಷುಧೆಯು ನನಗೀಗ ಉಂಟಾಗಿದೆ. ಆ ಬಗ್ಗೆ ಇದೇ ಅನುಭವ ನೋಡಿರಿ!!

ಎಂದೆಂದವನೇ ಜಂಬುವು ಬಿಂಬೆಯ ನಡುವಿನ ಸುತ್ತಲೂ ಕೈಸೇದಿ, ಅವಳನ್ನು ತನ್ನ ಹತ್ತರಕ್ಕೆ ಎಳೆದುಕೊಂಡನು; ಮತ್ತು ಕೆರೆಯ ನೀರು ನಿಶ್ಚಲ ಹಾಗು ಶಾಂತವಾಗಿರುವದರ ಕಡೆಗೆ ನೋಡಿ:—"ಬಿಂಬಾಬಾಈ, ಈ ಬಿಂಬ-ಪ್ರತಿಬಿಂಬಗಳ ಚಿತ್ರವು ಇನ್ನು ಮುಂದೆ ಈ ಕನ್ನಡಿಯ ಮೇಲೆ ನಿಶ್ಚಲವಾಗುಳಿದೀತು! ಆ ಕನ್ನಡಿಯನ್ನೊಡೆಯುವ ಈ ನಿನ್ನ ಖೋಡಿ ಕೈಯನ್ನು ಬಿಂಬೆ, ನಾನು ಹೀಗೆ ಗಟ್ಟಿಯಾಗಿ ಹಿಡಿದುಬಿಟ್ಟೇನು. ಇದನ್ನು ಬಿಡಿಸಿಯಾದರೂಬಿಡಿಸು; ಬಿಡುವುದೇನು ನೋಡೋಣ "ಹೀಗೆಂದು ಆತನು ಬಿಂಬೆಯ ಟೊಂಕಕ್ಕೆ ಸುತ್ತುವರಿದಿದ್ದ ತನ್ನ ಬಲಗೈಯಿಂದ ಅವಳ ಬಲಗೈಯನ್ನು ಗಟ್ಟಿಯಾಗಿ ಹಿಡಿದನು. ಬಿಂಬೆಯು ನೀರಿನ ಕಡೆಗೆ ನೋಡುತ್ತ ನಿಶ್ಚಲಳಾದಳು. ಅವಳ ಕಣ್ಣೊಳಗಿಂದ ಎರಡೇ ಆನಂದಾಶ್ರುಗಳುದುರಿದವು! ಅವು ಕೆರೆಯ ನೀರಿನಲ್ಲಿ ಬಿದ್ದವು: ಆದರೆ ಅಂಥ ಅಶ್ರುಗಳಿಂದ ಆ ಕನ್ನಡಿಯು ಮಲಿನವೆಂತಾದೀತು?

ಜಂಬುವು ಬಿಂಬೆಯ ಕಿವಿಯ ಹತ್ತಿರ ತನ್ನ ಮುಖವನ್ನೊಯ್ದು ಅವಳಿಗೇನು ಹೇಳಿದನೋ ಯಾರು ಬಲ್ಲರು! ಆದರೆ ಅವಳು ಆ ಬಗ್ಗೆ ಆತಂಕದ ಗೋಣು ಮಾತ್ರ ಅಲ್ಲಾಡಿಸಲಿಲ್ಲ.

ಬಿಂಬೆಯು ಅಂಜಿಸಂತಾಗಿ:-"ಇಶ್ಶಿ! ನಾನಿಂದು ಇವೆಷ್ಟು ಹೊತ್ತು ಮನೆಯಿಂದ ಹೊರಗಿರುವೆನಲ್ಲ! ಅಪ್ಪ, ಅವ್ವ ಏನೆಂದಾರು?"

"ಹೌದು ಅವರೆಲ್ಲರಿಗಿಂತಲೂ ಸದ್ಯಕ್ಕೆ ನಿನ್ನಣ್ಣನಿಗಂತೂ ನಾನು ಅಂಜಲೇಬೇಕಾಗಿದೆ; ಆದರೆ ಬಿಂಬಾ! ಈ ಬೆದರಿಕೆಯ ಪರಿಘವನ್ನು ನಾವು ಬೇಗನೆ ಹರಿಯಲೇಬೇಕು. ದಾರಿಯಲ್ಲಿ ಹೋಗುವಾಗ ನಾನು ಈ ಬಗ್ಗೆ ನಿನಗೆ ಕೆಲ ಸಂಗತಿ ಹೇಳಲೇ ಬೇಕೇನು; ಆದರೆ ಹೇಗೆಯೋ ಇನ್ನೊಮ್ಮೆ ಸಂಧಿಸಾಧಿಸಿ ನಾವು ಮುಂದಿನ ನಮ್ಮ ಬೇಕುಗಳನ್ನೆಲ್ಲ ನಿರ್ಧರಿಸಿಕೊಳ್ಳಬೇಕಾಗುವದು."

ಬಳಿಕ ಅವರಿಬ್ಬರೂ ಅಲ್ಲಿಂದೆದ್ದರು. ತಮ್ಮ ಮೋಟರಿನ ಬಳಿಗೆ ಬರುವಷ್ಟರಲ್ಲಿ ಆ ಬಡ ಮಾಲಿಯು ಮೋಟರಿನ ಮೆಟ್ಟಲಿಗೆ ತಲೆಯಾನಿಸಿ ನಿದ್ದೆಗೈಯುತ್ತಿದ್ದನು. ಬಿಂಬೆಯ ಕೂಗು ಕೇಳಿ ಆತನು ಒಮ್ಮೆಲೆ ಎಚ್ಚತ್ತನು. ಇವರಿಬ್ಬರೂ ಮೋಟರನ್ನೇರಿದರು. ಮೋಟರು ಹೊರಟಿತೆಂಬದನ್ನರಿತು ಮಾಲಿಯು ಬಿಂಬೆಗೆ ಸಲಾಮು ಮಾಡಿ:-"ಆದರೆ ಬಿಂಬವ್ವನವರೇ, ಇಂದು ಹೂವ್ವು ಮತ್ತು ಹಣ್ಣು...."ಎನ್ನಲು,

ಬಿಂಬೆಯು ನಾಚಿಕೆಯಿಂದ ತಲೆ ತಗ್ಗಿಸಿದಳು. ಜಂಬುವು ಮಾತ್ರ ಆನಂದದಿಂದ ಗಟ್ಟಿಯಾಗಿ ಹೇಳಿದನು:-"ಎಲಾ ಹುಚ್ಚಾ! ಇನ್ನು ಹೂವು-ಹಣ್ಣುಗಳಿಗೇನು ಕಡಿಮೆ?"

---

ಚಂದೂ ಮೇರೀಯರ ಪ್ರಥಮ ಭೆಟ್ಟಿ.

ವಿಲಾಯತಿಯಲ್ಲಿರುವಾಗ ಕೊನೆಯ ವರ್ಷದಲ್ಲಿ ಮೇರಿವ್ಹೊಡಹಾಲೂಸಳೊಡನೆ ಉಂಟಾದ ಸ್ನೇಹವನ್ನು ಚಂದುವು ಇತ್ತಲಾರಿಗೂ ತಿಳಿಯಗೊಟ್ಟಿರಲಿಲ್ಲ. ಶರಯೂಳೊಡನೆ ಎರಲವಾಗುತ್ತ ನಡೆದಿದ್ದ ಪತ್ರವ್ಯವಹಾರದಿಂದ ಚಂದುವು ಯಾವಳೊಬ್ಬ ಆಂಗ್ಲ ಪ್ರಮದೆಯ ಪ್ರೇಮಪಾಶದಲ್ಲಿ ಸಿಲುಕಿರಬೇಕೆಂಬ ಸಂದೇಹವು ಶರಯೂಳಿಗೂ ಆಕೆಯ ನಂಬಿಗೆಯ ಮೂರು-ನಾಲ್ಕುಜನ ಸಖಿಯರಿಗೂ ಉಂಟಾಗಿತ್ತು; ಆದರೆ ಅವರಿಗೆ ಕೂಡ ನಿಜಸ್ಥಿತಿಯು ಸ್ವಲ್ಪವೂ ತಿಳಿದಿರಲಿಲ್ಲ. ಚಂದುವು ಹಿಂದುಸ್ತಾನಕ್ಕೆ ಬಂದು ಬಹು ಸ್ವಲ್ಪ ದಿವಸಗಳಾಗಿದ್ದವು. ಅದರಿಂದ ಆತನ ಪತ್ರವ್ಯವಹಾರವು ವಿಲಾಯತಿಯೊಳಗಿನ ಯಾರೊಡನೆ ಹೆಚ್ಚಾಗಿ ನಡೆಯುವದೆಂಬದು ತಿಳಿಯಲಿಕ್ಕೆ ಅಥವಾ ಬಹಿರಂಗವಾಗಲಿಕ್ಕೆ

ವಿಶೇಷ ಅವಧಿ ದೊರೆತಿರಲಿಲ್ಲ. ವಿಲಾಯತಿಯಿಂದ ಬಂದ ಹೊಸ ದಿನಗಳಲ್ಲಿ ಯಾವ ನೂರಾರು ಪೌಂಡು ಹಣವನ್ನು ಚಂದುವು ಅತ್ತ ಕಡೆಗೆ ಕಳಿಸಿದ್ದನೋ ಆ ಸಂಗತಿಯು ಸರ ಗಂಗಾರಾಮರಿಗೆ ತಿಳಿಯುವ ಅವಶ್ಯಕತೆಯಿರಲಿಲ್ಲ. ಯಾಕಂದರೆ ಸ್ವಂತ ಚಂದೂನ ಲೆಕ್ಕದಲ್ಲಿಯೇ ಬ್ಯಾಂಕುಗಳಲ್ಲಿ ಸಾವಿರಾರು ರೂಪಾಯಿಗಳಿದ್ದವು. ಆತನ ಪರೀಕ್ಷೆ ಪಾಸಾಗಿ, ಅವನ ಮದುವೆಯ ಗಡಿಬಿಡಿ ನಡೆದಾಗ ಆತನ ಆಂಗ್ಲ ಪ್ರಣಯದ ವಾರ್ತೆಯು ಬಹಿರಂಗಪಡಬೇಕು; ಮತ್ತು ಹಾಗಾಯಿತೆಂದರೆ, ಆಗ ಎಂಥ ಸ್ಫೋಟವಾಗತಕ್ಕದ್ದಿದ್ದಿತೋ ಹಾಗೆ ಆಗುತ್ತಿತ್ತು; ಆದರೆ ಅದಕ್ಕೆ ಮುಂಚೆಯೇ ಮೇರೀಪೊಡಹಾಊಸಳು ಸತ್ತ ತಂತಿ ಬಂದು, ಎಲ್ಲ ಆಟವೂ ತಿರುವು ಮುರುವಾಗಿ ಬಿಟ್ಟಿತು. ಆದರಿಂದ ಡಾ. ಜಾಲಂದರ, ಡಿ. ಇ. ಬನ್ಸೀಧರ ಮತ್ತು ಮಾಸಾಹೇಬ ಇವರುಗಳ ಹೊರತು ಆ ಸಂಗತಿಯು ಬೇರೆ ಯಾರಿಗೂ ಗೊತ್ತಿರಲಿಲ್ಲ. ಸರ ಗಂಗಾರಾಮರಿಗೆ ಆ ವಾರ್ತೆಯು ಮುಂದೆ ಯಾವಾಗಾದರೂ ತಿಳಿಯತಕ್ಕದ್ದಿತ್ತು. ಮತ್ತು ಸರ್ವಾಂತಜ್ಞಾನಿಗಳಾದ ಗುರುಮಹಾರಾಜರಿಗಂತೂ ಆ ಘಟನೆಯ ಬಗ್ಗೆ ಕೊಂಚವೂ ಮಾಹಿತಿ ಇಲ್ಲವೆ ಕಲ್ಪನೆ ಕೂಡ ಇರಲಿಲ್ಲ. ಚಂದುವು ಅವರೊಡನೆ ಮಾತನಾಡುವಾಗ ತಾನಾಗಿ ಆ ಮಾತನ್ನೇಕೆ ತೆಗೆದಾನು?

ಆದರೂ ಮೇರೀ ಮತ್ತು ಚಂದು ಇವರ ಪ್ರೇಮ ಸಂಬಂಧದ ಮಾಹಿತಿಯನ್ನು ನಮ್ಮ ವಾಚಕರಿಗೆ ತಿಳಿಸುವ ಸಮಯವೊದಗಿರುವದರಿಂದ ನಾವು ಅವರಿಗೆ ಅದನ್ನು ತಿಳಿಸುತ್ತೇವೆ. ವಿಲಾಯತಿಯೊಳಗಿನ ಸಾಮಾನ್ಯ ರೀತಿಯು ಪ್ರಸಿದ್ಧವೇ ಇದೆ. ಕುಟುಂಬ ವತ್ಸಲರಲ್ಲದ ಎಂಥ ಸ್ತ್ರೀ-ಪುರುಷರಾದರೂ ಬಹಳವಾದರೆ ಒಂದು ಬಾಡಿಗೆಯ ಕೋಣೆಯಲ್ಲಿರುವರು; ಆದರೆ ಆ ಕೋಣೆಯಲ್ಲಿ ರಾತ್ರಿ ಮಲಗುವದಕ್ಕಿಂತ ಇತರ ವೇಳೆಯಲ್ಲಿ ಆತನ ವಸತಿಯು ಅಲ್ಲಿ ಇರುವದೇ ಇಲ್ಲ. ಆ ಕೋಣೆಯ ಬಾಡಿಗೆಯಲ್ಲಿ ರಾತ್ರಿಯಲ್ಲಿ ಮಲಗುವ ಹಾಗು ಬೆಳಗಿನ ಚಹ ಬಹುಶಃ ಇಷ್ಟೇ ಸಮಾವೇಶವಾಗುತ್ತವೆ. ಸ್ವತಂತ್ರವಾಗಿ ಸ್ನಾನ ಮಾಡುವ ಸ್ಥಳವಿರುವುದೇ ಇಲ್ಲ. ಆದರಿಂದ ಬೆಳಿಗ್ಗೆ ಎದ್ದ ಕೂಡಲೆ ಪ್ರಾತರ್ವಿಧಿ, ದಂತಧಾವನಾದಿ ವಿಧಿಗಳನ್ನು ತಿರಿಸಿ ಚಹ ಮತ್ತು ರೊಟ್ಟಿ ತಕ್ಕೊಂಡು, ಒಮ್ಮೆ ಮೈ ಮೇಲೆ ಬಟ್ಟೆಗಳನ್ನು ಏರಿಸಿದರೆಂದರೆ, ಇಡೀ ದಿವಸ ಅವೇ ಮೈಮೇಲಿರತಕ್ಕ ಬಟ್ಟೆಗಳು. ಹಗಲಿನ ಎರಡು ಸಾರೆಯ ಉಪಾಹಾರ ಹಾಗು ರಾತ್ರಿಯ ಊಟ ಇವೆಲ್ಲ ಬಹುತರವಾಗಿ ಪೇಟೆಯೊಳಗಿನ ಉಪಾಹಾರಗೃಹ-ಭೋಜನಗೃಹಗಳಲ್ಲೇ ಆಗುವವು. ಕೆಲಸದ ಕಾಲಕ್ಕೆ ಕಚೇರಿಗಳಲ್ಲಿ ಇಲ್ಲವೆ ರೀಡಿಂಗ ರೂಮುಗಳಲ್ಲಿ ಹಾಗು ಸಂಜೆಯ ಬಿಡುವಿನ ಸಮಯವನ್ನು ಉದ್ಯಾನ,

ಉಪವನ, ಸಿನೇಮಾ, ನಾಟಕಗೃಹ ಇತ್ಯಾದಿಗಳಲ್ಲಿ ವಿನಿಯೋಗಿಸುವರು. ತಮ್ಮ ಕೆಲ ಜನ ಮಿತ್ರರನ್ನು ಚಹ, ಉಪಾಹಾರ, ಊಟಗಳ ಆತಿಥ್ಯಕ್ಕಾಗಿ ಕರೆಯುವದಿದ್ದರೆ ಅದೆಲ್ಲ ವ್ಯವಸ್ಥೆಯು ಹೊರಗಿನಿಂದ ಹೊರಗೇ ಉಪಾಹಾರ ಗೃಹಗಳಲ್ಲಿ ಮಾಡಬರುತ್ತದೆ. ಅದರಿಂದ ಗೆಳೆಯ ಗೆಳೆಯರಾದರೂ ಮತ್ತು ಪತ್ರಕಳಿಸುವ ಮಟ್ಟಿಗೆ ವಿಳಾಸ ಗೊತ್ತಿದ್ದರೂ ಪರಸ್ಪರರು ಪರಸ್ಪರರ ಮಲಗುವ-ಕೂಡ್ರುವ ಸ್ಥಳಗಳನ್ನು ವರ್ಷಾನುವರ್ಷ ಸಮಕ್ಷ ನೋಡದಂತೆಯೇ ಸಾಗುತ್ತದೆ. ಟಪಾಲ-ಟೆಲಿಫೋನುಗಳು ವಿಚಾರ-ವಿನಿಮಯದ ಸ್ಥಳಗಳು, ಉಪಾಹಾರ ಗೃಹ-ಸಾರ್ವಜನಿಕ ಉದ್ಯಾನ ಇವು ಪರಸ್ಪರರಿಗೆ ಭೆಟ್ಟಿಯಾಗುವ ಸ್ಥಳಗಳು. ಇವುಗಳಿಂದಲೇ ಬಹುತರ ಎಲ್ಲ ವ್ಯವಹಾರ ಸಾಗಿಹೋಗುತ್ತದೆ. ಇಬ್ಬರೂ ಸ್ನೇಹಿತರು ಕುಟುಂಬವತ್ಸಲರೇ ಆಗಿದ್ದರೆ ಮಾತ್ರ ಆ ಮಾತು ಬೇರೆ; ಆದರೆ ಕುಟುಂಬ ರಹಿತ ಜನರು ಧನಿಕರಾಗಿದ್ದರೂ ಕೂಡ ಅವರ ಸಹವಾಸವು ಮೇಲೆ ವಿವರಿಸಿದ ಬಗೆಯಿಂದಲೇ ಬಹು ಮಟ್ಟಿಗೆ ಬಗೆಹರಿಯುತ್ತದೆ.

ಚಂದೂನ ನಾಲ್ಕು ವರ್ಷಗಳ ವಿಲಾಯತಿಯ ನಿವಾಸದಲ್ಲಿ ಕೊನೆಯ ವರ್ಷ ಚಂದೂಲಾಲನಿಗೂ ಮೇರೀ ಪೂಶಹಾಊಸನಿಗೂ ಆಕಸ್ಮಿಕವಾಗಿ ಗಂಟುಬಿತ್ತು. ಅದು ಹೇಗಂದರೆ:—ಲಂಡನ್ನಿನ ಹ್ಯಾಂಪಸ್ಟೆಡ್ ಎಂಬದೊಂದು ಉಪನಗರವಿರುತ್ತದೆ. ಅದರ ಕೆಲ ಭಾಗಗಳಲ್ಲಿ ವಾಸಮಾಡುವ ಮನೆಗಳಿದ್ದರೂ ಆ ವಸತಿಗೆ ಹೊಂದಿಯೇ ವಿಸ್ತೀರ್ಣವಾದ ಬೈಲುಪ್ರದೇಶವಿರುತ್ತದೆ. ಅದು ಮೈಲುಗಟ್ಟಲೆ ವಿಸ್ತೀರ್ಣವಾಗಿರುವದು. ಅದಕ್ಕೆ 'ಹೀಥ' ಎಂದೆನ್ನುವರು. ಹೀಥ ಶಬ್ದದ ಅರ್ಥವು ಹುಲ್ಲು ಬೆಳೆಯುವ ಹಾಗು ಸಣ್ಣ ಪುಟ್ಟ ಗಿಡಗಂಟೆಗಳ ಕಾಡು ಅಥವಾ ಬೈಲು.

ಆ ವಿಸ್ತೀರ್ಣವಾದ ಬೈಲಲ್ಲಿ ವರ್ಷದಲ್ಲಿ ಒಂದೆರಡು ಸಾರೆ ಜಾತ್ರೆ ಕೂಡುತ್ತದೆ. ಆ ಜಾತ್ರೆಯು ಯಾವ ದೇವರಿಗೂ ಸಂಬಂಧಿಸಿರುವದಿಲ್ಲ; ಆದರೆ ಅದು ಬೇರೆ ಬಗೆಯಲ್ಲ ನಮ್ಮ ದೇಶದ ಜಾತ್ರೆಗಳಂತೆಯೇ ಇರುತ್ತದ. ಅಂದರೆ ಅಲ್ಲಿ ದೊಡ್ಡ ಸಂತೆ ನೆರೆಯುತ್ತದೆ. ಡೇರೆ-ತಂಬೂ-ಗುಡಾರ ಹೊಡೆದು ಅಥವಾ ಬರೀ ಬೈಲಲ್ಲಿ ಕೂಡ ನೂರಾರು ಚಿಕ್ಕ-ದೊಡ್ಡ ಅಂಗಡಿಗಳು ಅಲ್ಲಿ ಅಷ್ಟರ ಮಟ್ಟಿಗ ತೆರೆಯಲ್ಪಟ್ಟಿರುತ್ತವೆ. ಅವುಗಳಲ್ಲಿ ಮಾರುವ ಜೀನಸುಗಳ ಎಷ್ಟು ಅಂಗಡಿಗಳಿರುವವೋ, ಅಷ್ಟೇ ಅಂಗಡಿಗಳು ಖಾದ್ಯ-ಪೇಯಪದಾರ್ಥಗಳವೂ ಇರುತ್ತವೆ. ಅಂಗಡಿಗಳಂತೆಯೇ ಎಲ್ಲ ಪ್ರಕಾರದ ಆಟ-ನೋಟ-ಕ್ರೀಡೆಗಳ ಮಂಟಪಗಳು ನಿಲ್ಲಿಸಲ್ಪಡುವವು. ಅಲ್ಲಿ ಚಿತ್ರಪ್ರದರ್ಶನಗಳಿರುತ್ತವೆ.

ತಾತ್ಪರ್ಯವಿಷ್ಟೇ, ನಾಲ್ಕಾರು ತಾಸುಗಳನ್ನು ಮೋಜಿನಲ್ಲಿ ಕಳೆಯುವ ನಿಶ್ಚಿತ ಪ್ರಸಂಗವೆಂದು ಆ ಜಾತ್ರೆಗಳಿಗೆ ಸಾವಿರಾರು ಜನರು ಬರುತ್ತಾರೆ. ಕುಟುಂಬ ವತ್ಸಲ ಜನರು ತಮ್ಮ ಮನೆಯ ಹೆಂಡಿರು-ಮಕ್ಕಳೊಡನೆ ಆ ಜಾತ್ರೆಗಳಿಗೆ ಹೋಗುತ್ತಾರೆ; ಅದರಂತೆ ಒಬ್ಬೊಂಟಿಗರಾದ ನೂರಾರು ಜನ ಸ್ತ್ರೀ-ಪುರುಷ-ರೂ ಆ ಜಾತ್ರೆಗೆ ಬರುವದುಂಟು. ಅವರು ತಮ್ಮ ಸ್ವಂತದ ಮೋಜಿಗಿಂತಲೂ ಬೇರೆ ಜನರು ತಮ್ಮ ಮೋಜು ಹೇಗೆ ಮಾಡಿಕೊಳ್ಳುವರೆಂಬದನ್ನು ನೋಡುವ ದಿರುತ್ತದೆ. ಯಾಕಂದರೆ, ಸ್ವಂತದ ಮೋಜಿನಷ್ಟೇ ಆನಂದವು ಬೇರೆಯವರ ಮೋಜಿನ ಪ್ರಕಾರಗಳನ್ನು ಮಾರ್ಮಿಕ ರೀತಿಯಿಂದ ನೋಡುವದರಿಂದಾಗುವದು. ಚಂದೂನ ಆ ವರ್ಷದ ಆ ವಿಭಾಗವೊಳಗಿನ ಟಮ್ಮ್ ಮುಗಿದಿದ್ದು, ಆತನೊಬ್ಬನೇ ಬೇರೆ ಏನೂ ಕೆಲಸವಿರಲಿಲ್ಲೆಂದು ಆ 'ಹ್ಯಾಂಪಸ್ಟೆಡ್ ಹೀಥ'ದೊಳಗಿನ ಆ ಜಾತ್ರೆ ನೋಡಲಿಕ್ಕೆ ಹೋಗಿದ್ದನು.

ಆತನು ಏನನ್ನೂ ಕೊಂಡುಕೊಳ್ಳಲಿಲ್ಲ; ಆದರೆ ಒಂದು ಸ್ವಚ್ಛ ಉಪಾಹಾರಗೃಹದಲ್ಲಿ ಒಂದಿಷ್ಟು ಉಪಾಹಾರ ತಕ್ಕೊಂಡು ಒಂದು ನೋಜಿನ ಮಂಟಪದಲ್ಲಿ ಬಳೆ ತೂರುವದರಲ್ಲಿ ಅಪಯಶ ಹೊಂದಿ ನಾಲ್ಕು ಶಿಲಿಂಗುಗಳನ್ನು ಕಳೆದುಕೊಂಡನು. ಒಂದು ವಿಕೃತ ಕನ್ನಡಿಯ ಅಂಗಡಿಯೊಳಗೆ ಹೋಗಿ ಒಂದೇ ಮುಖವು ಹತ್ತು ಬಗೆಯ ಕುರೂಪವೆಂತೆಂತು ಕಾಣುವುದೆಂಬದನ್ನು ನೋಡಿದನು. ಎರಡು ಶಿಲಿಂಗಿನ ಚಾಕಲೇಟಿನ ಇನಾಮು ಇಟ್ಟು ಹತ್ತೆಂಟು ಮಂದಿ ಉಡಾಳ ಹುಡುಗರ ಶರ್ಯತ್ತು ಹಚ್ಚಿದನು. ರಾಕ್ಷಸರ ಸೋಗು ಹಾಕಿಕೊಂಡಂಥ ಉದ್ದನ್ನ ಕೋಲುಗಳ ಮೇಲೆ ನಿಂತು ನಡೆಯುತ್ತಿರುವ ಆಟಗಾರರ ಕಾಲು ಪೆಟ್ಟುಗಳನ್ನು ತಿನ್ನದ ಹಾಗೆ ಹೋಗುವ ವಿಕ್ರಮ ಮಾಡಿದನು. ಪ್ರತಿಧ್ವನಿಯನ್ನುಂಟುಮಾಡುವ ತಗ್ಗು ಹಂಚುಗಳ ಅಂಗಡಿಯೊಳಗೆ ಹೋಗಿ ಒಂದು ಶಿಲಿಂಗ ಕೊಟ್ಟು ತನ್ನವೇ ಹತ್ತೆಂಟು ಬೈಗಳುಗಳ ಪ್ರತಿಧ್ವನಿಯನ್ನು ಕೇಳಿಕೊಂಡನು. ಇಷ್ಟಾದ ಬಳಿಕ ಹಸ್ತ ಸಾಮುದ್ರಿಕವನ್ನು ಹೇಳುತ್ತ ಕುಳಿತಿದ್ದ ಒಬ್ಬ ವೃದ್ಧ ಜಿಪ್ಸೀ ಸ್ತ್ರೀಯು ಬಳಿಗೆ ಆತನು ಹೋದನು; ಮತ್ತು ಅಲ್ಲಿ ಸರತಿ ಹಚ್ಚಿ ನಿಂತಿರುವ ಜನರಲ್ಲಿ ತನ್ನ ಸರತಿ ಬಂದ ಕೂಡಲೆ ಆಕೆಯ ಕೈಯಲ್ಲಿ ಅರ್ಧ ಕ್ರೌನಿನ ನಾಣ್ಯವನ್ನು ಹಾಕಿ ತನ್ನ ಭವಿಷ್ಯವನ್ನು ತಿಳಕೊಳ್ಳುವದಕ್ಕೆಂದು ಚಂದುವು ಆವಳೆದುರಿಗೆ ತನ್ನ ಕೈಚಾಚಿದನು.

ಭವಿಷ್ಯವನ್ನು ನಂಬಬೇಡಿರೆಂದು ಕೂಗಾಡುವ ಯುರೋಪಿನ ಜನರಲ್ಲಿ ಈಗಲೂ ಇಂಥ ಭವಿಷ್ಯ ಹೇಳುವ ಉದ್ಯೋಗವು ಭರದಿಂದ ನಡೆದಿರುತ್ತದೆ: ಮತ್ತು ದೊಡ್ಡ ಪಟ್ಟಣಗಳನ್ನು ಬಿಟ್ಟು ಗ್ರಾಮಾಂತರಗಳಿಗೆ ತೆರಳಿದರೆ,

ಭವಿಷ್ಯಹೇಳುವ ಗುತ್ತಿಗೆ ಪಡೆದ ವೃದ್ಧ ಸ್ತ್ರೀಯರು ಅಲ್ಲಲ್ಲಿ ಕಂಡು ಬರುವರು. ಅವರು ನಮ್ಮ ಕಡೆಯ ಮಾಟ- ನ್ಮೋಟ ಹೇಳುವವರಂತೆಯೇ ಇರುತ್ತಾರೆ. ಅವರ ವೇಷ-ಭೂಷಣಗಳು ಬಲು ವಿಚಿತ್ರವಾಗಿರುತ್ತವೆ. ಅದರಂತೆಯೇ ನೋಡುವವರಿಗೆ ಅದ್ಭುತ ತೋರಬೇಕೆಂದು ಅವರು ತಮ್ಮ ಹಲ್ಲುಗಳಿಗೆ ಕರೀ ಹಲ್ಲಿಟ್ಟನ್ನು ಹಚ್ಚಿಕೊಂಡಿರುತ್ತಾರೆ; ಮತ್ತು ಅವರ ಕೂದಲು ಕೆರಳಿರುತ್ತವೆ. ಚಂದೂನ ಬಳಿಯ ಅರ್ಧ ಕ್ರಾನು ತನ್ನ ಅಂಗೈಗೆ ಬಿದ್ದ ಕೂಡಲೆ ಆ ಜಿಪ್ಸಿಗು ತನ್ನ ಮಾಟವನ್ನು ತೋರಿಸಲಿಕ್ಕೆ ಪ್ರಾರಂಭಿಸಿದಳು. ಅವಳು ಆ ನಾಣ್ಯದ ಕಡೆಗೆ ತೀಕ್ಷ್ಣ ಏಕಾಗ್ರ ದೃಷ್ಟಿಯಿಂದ ನಿರೀಕ್ಷಿಸಿದಳು. ಚಂದೂನ ಕೈಯೊಳಗಿಂದ ತನ್ನ ಕೈಗೆ ಬಂದಿದ್ದ ಆ ನಾಣ್ಯದಲ್ಲೇ ಚಂದೂನ ಭವಿಷ್ಯದ ಕೆಲ ಗಮಕಗಳು ಅವಳಿಗೆ ತೋರಿ ಬಂದವೋ ಏನೋ ಎಂಬಂತೆ ಅವಳು ಹಾವಭಾವ ಗೈದಳು. ಅವಳು ಆ ನಾಣ್ಯವನ್ನು ತನ್ನ ಜೇಬಿಗೆ ಸೇರಿಸಿಕೊಂಡಳು. ಬಳಿಕ ಅವಳೊಂದು ಚಿಮಟಿಗೆ ನಸ್ಯವನ್ನೇರಿಸಿಕೊಂಡು ಭವಿಷ್ಯ ಹೇಳುವದಕ್ಕೆಂದು ಚಂದೂನ ಕೈಯನ್ನು ತನ್ನ ಕೈಯಿಂದ ಹಿಡಿದಳು. ಆ ಜಿಪ್ಸೀ ಸ್ತ್ರೀಯರು ಜನರಿಗೆ ಯಾವ ಭವಿಷ್ಯ ಹೇಳುವರು. ಯಾವ ಶಬ್ದಗಳಿಂದ ಹೇಳುವರು ಮುಂತಾದ್ದೆಲ್ಲ ಅರಿಯುವರಿಗೆ ಬಹುಮಟ್ಟಿಗೆ ಪಾಠವೇ ಆಗಿಬಿಟ್ಟಿರುತ್ತದೆ.

ಆದರೆ ಚಂದುವು ಹಿಂದುವಾಗಿದ್ದನು. ಅವನಿಗೆ ಅಕ್ಸಫರ್ಡಿನ ಅತ್ಯುತ್ತಮ ಇಂಗ್ಲಿಷ- ಬರೆಯಲು-ಮಾತಾಡಲು ಬರುತ್ತಿದ್ದರೂ ಆತನಿಗೆ ಜಿಪ್ಸೀ ಜನರ ಇಂಗ್ಲಿಷು ಬರುತ್ತಿರಲಿಲ್ಲ. ಇಲ್ಲದಿದ್ದರೆ ಪುಸ್ತಕದೊಳಗಿನ ಪರಿಚಯದಿಂದ ಚಂದುವೇ ಅವಳ ಯಾವುದೊಂದು ವಿಷಯದ ಭವಿಷ್ಯವನ್ನು ಅವಳಿಗೆ ಹೇಳಿಬಿಡುತ್ತಿದ್ದನು; ಆದರೂ ಜಾತ್ರೆಗೆ ಹೋಗುವ ಮನುಷ್ಯನು ತನ್ನ ಬುದ್ಧಿಯನ್ನು ಜೇಬಿಗೆ ಹಾಕಿಕೊಂಡು, ಬೇರೆಯವರಿಂದ ಮೋಸಗೊಳಿಸಿಕೊಳ್ಳುವ ತಿಳಿಮೋಜು ಮಾಡಿಕೊಳ್ಳುವದಕ್ಕಾಗಿಯೇ ಹೋಗುವನು; ಮತ್ತು ಆ ಮೋಜಿಗಾಗಿ ಅವನು ಸಹಜವಾಗಿ ಕೆಲ ದುಡ್ಡು ತಾನಾಗಿ ಹಾಳುಮಾಡುವನು. ಈ ತರುಣನು ಇಂಗ್ಲಿಷ ಮನುಷ್ಯನಲ್ಲೆಂಬದನ್ನು ಆ ಜಿಪ್ಸಿಯು ಕೂಡಲೆ ತಿಳಕೊಂಡಳು. ಚಂದುವಾದರೂ ಆ ಜಾತ್ರೆಗೆ ಹೋಗುವದಕ್ಕೆಂದು ಬೇಕೆಂತ ಹಿಂದೂ ಉಡುಪು ಧರಿಸಿದ್ದನು. ಚಣ್ಣವನ್ನೇ ತೊಟ್ಟಿದ್ದರೂ ಅದು ರಜಪೂತ ಪದ್ಧತಿಯ ಕಾಲಿಗೆ ಬಿಗಿದಾಗುವಂತಹದನ್ನು ಹಾಕಿದ್ದನು. ಮೈಯೊಳಗೆ ಉದ್ದನ್ನ ಶರ್ಟ, ತಲೆಗೆ ಪಟಕಾ ಮತ್ತು ಕೊರಳಿಗೆ ನೆಕ್ಟಾಯ ಹಾಕದೆ, ಬಣ್ಣದ ಕರವಸ್ತ್ರವನ್ನು ಸುತ್ತಿದ್ದನು.

ಆ ಜಿಪ್ಸಿಯು ಇವನ ಕೈ ನೋಡಿ ಮೊದಲಿಗೆ ಗಟ್ಟಿಯಾಗಿ ನಕ್ಕಳು; ಆದರೆ ಕೂಡಲೆ ದುಃಖದ ನಾಟಕದೋರಿ, ಅವಳು ಅಳುವ ಧ್ವನಿ ತೆಗೆಯ ಹತ್ತಿದಳು. ಆ ಸುಖವೂ ಆ ದುಃಖವೂ ಚಂದೂನಿಗೆ ಸಮವಾಗಿಯೇ ಇತ್ತು. ಆವೆರಡೂ ಬಗೆಗಳನ್ನು ಕಂಡು ಅವನು ನಗಹತ್ತಿದ್ದನು. ಬಳಿಕ ಆ ಜಿಪ್ಸಿಯು ಬಾಯಿಬಿಚ್ಚಿ ಮಾತಿನ ಮಳೆಗರೆಯಹತ್ತಿದಳು. ಅವಳ ಮಾತಿನ ಸಾರಾಂಶವು ಹೀಗಿದ್ದಿತು:—“ನೀನು ಲಗ್ನ ಮಾಡಿಕೊಂಡು ಪೂರ್ವ-ಪಶ್ಚಿಮ ಖಂಡಗಳನ್ನು ಏಕಜೀವವನ್ನಾಗಿ ಮಾಡುತ್ತೀ; ಆದರೆ ಅದೊಬ್ಬ ಸೂರ್ಯನೇ ಆಕಾಶದಲ್ಲಿ ಸಂಚರಿಸುತ್ತಿದ್ದರೂ ಪೂರ್ವಕ್ಕೆ ಪೂರ್ವವೇ ಎನ್ನುವರು; ಮತ್ತು ಪಶ್ಚಿಮಕ್ಕೆ ಪಶ್ಚಿಮವೇ ಎನ್ನುತ್ತಾರೆ. ನೀನು ಕಮಲದ ಹೂವೆಂದು ಕೈಯಿಂದ ಹಿಡಿಯ ಹೋದೀಯೇ; ಆದರೆ ಅದು ಸರ್ಪವಾದೀತು! ನಿನ್ನ ಪ್ರಿಯಕರಿಣಿಯು ನಿನ್ನ ದಾರಿಯನ್ನೇ ಕಾಯುತ್ತಿರುವಳು; ಮತ್ತು ನೀನು ಈ ಜಾತ್ರೆಯಿಂದ ಹಿಂದಿರುಗುವಷ್ಟರಲ್ಲಿಯೇ ನಿನ್ನ-ಅವಳ ಗಂಟುಬಿದ್ದೀತು!”

ಇಂಥ ಈ ಭವಿಷ್ಯಗಳೆಂದರೆ, ಪ್ರಸಿದ್ಧ ಜ್ಯೋತಿಷಿಗಳ ಎಂಥೆಂಥ ಭವಿಷ್ಯಗಳನ್ನೂ ಕೆಳಮುಖ ಮಾಡಿಸುವಂಥವಿರುತ್ತವೆ. ನಗೆಯುತ್ತ-ಕೆಲೆಯುತ್ತ ಇವನ್ನು ಕೇಳಬೇಕಷ್ಟೇ; ಆದರೆ ಅಲ್ಲಿಂದ ಹೊರಟ ಕೂಡಲೆ ಮರೆತೇ ಬಿಡಬೇಕು. ಚಂದುವು ಆ ಮುದುಕಿಗೆ ಚೇಷ್ಟೆ ಮಾಡುವದಕ್ಕೆಂದು ತಾನಾಗಿ ಅವಳಿಗೊಂದು ಪ್ರಶ್ನೆ ಮಾಡಿದನು:—“ನನಗೆ ವಿದ್ಯೆಯ ಸಾಮ್ರಾಜ್ಯ ಬೇಕಾಗಿದೆ. ಅದು ನನಗೆಂದಿಗೆ ಸಿಕ್ಕೀತು?”

ಅವಳು “ನೀನು ಬುದ್ಧಿವಂತಿಕೆಯ ಪೌರುಷ ಕೊಚ್ಚಬೇಡ. ಜನರಿಂದ ಮೂರ್ಖನೆನ್ನಿಸಿಕೊಳ್ಳುವಾಗ ನಿನಗೆ ಸಾಕುಸಾಕಾದೀತು!” ಇದಾದರೂ ಭಾಷಿಸಿದ ಭವಿಷ್ಯದಂತೆಯೇ ಆಗಿತ್ತು. ಇದಾದ ಬಳಿಕ ಎರಡೂವರೆ ಶಿಲ್ಲಿಂಗಿನ ಆ ಮೋಜು ಸಾಕೆನಿಸಲು, ಚಂದುವು ಆ ಮುದುಕೆಗೆ ಸಲಾಮು ಮಾಡಿ ಮುಂದೆ ನಡೆದನು. ಅತ್ತಿತ್ತ ನೋಡುವುದು ಮುಗಿದ ಬಳಿಕ ಅವನು ಒಂದು ಬಟಾಬೈಲೊಳಗಿನ ತೊಟ್ಟಿಲ ಜೀಕದ ಬಳಿಗೆ ಹೋದನು. ಅದಕ್ಕೆ ಎಂಟು ತೊಟ್ಟಿಲುಗಳಿದ್ದವು. ಪ್ರತಿಯೊಂದು ತೊಟ್ಟಿಲಲ್ಲಿ ಇಬ್ಬರಿಗೆ ಕೂಡ್ರಲಿಕ್ಕೆ ಸಾಲುವಷ್ಟೇ ಸ್ಥಳವಿದ್ದಿತು. ಅವೆಲ್ಲ ತೊಟ್ಟಿಲು ತುಂಬಿದವೆಂದರೆ, ಒಂದು ಗಾಲಿಯ ಗೂಟವನ್ನು ಕೈಯಿಂದ ಹಿಡಿದು ನಾಲ್ಕು ಮಂದಿ ಆಳುಗಳು ನೆಣ ಹಚ್ಚಿ ನುಣುಪು ಮಾಡಿದ್ದ ಅಚ್ಚಿನ ಮೇಲೆ ತಿರುಗಿಸುವ ಮೋಜಿನ ಆಟವು ಅದಿದ್ದಿತು. ಚಂದೂನ ಎದುರಿಗೆ ಬಂದಿದ್ದ ತೊಟ್ಟಿಲವು ಎರಡನೇ ನಂಬರಿನದಿದ್ದು, ಅದರಲ್ಲೊಬ್ಬ ತರುಣ ಯುವತಿಯು ತಿಕೀಟು ತಕ್ಕೊಂಡು ಮೊದಲೇ ಕುಳಿತಿದ್ದಳು.

ಮತ್ತು ಜನರು ಕಲಿಕಲಿತ ಕ್ರಮದಿಂದ ಆ ತೊಟ್ಟಿಲುಗಳಲ್ಲಿ ಕೂಡ್ರುವದಿರುತ್ತದೆ. ಅಲ್ಲಿ ಗುರ್ತು-ಪರಿಚಯದ ಮಾತೇ ಇರುವುದಿಲ್ಲ. ಆದರಿಂದ ಆ ತೊಟ್ಟಿಲಜೀಕದ ಒಡೆಯನು ಚಂದುವಿಗೆ ತಿಕೀಟು ಕೊಟ್ಟು ಆ ಯುವತಿಯ ಪಕ್ಕದಲ್ಲೇ ಅವನನ್ನು ಕೂರಿಸಿದನು. ಬಳಿಕ ಆ ತೊಟ್ಟಿಲನ್ನು ಮೇಲಕ್ಕೇರಿಸಲಾಯಿತು; ಆದರೆ ಮಿಕ್ಕ ಆರೂ ತೊಟ್ಟಿಲುಗಳು ಹೀಗೆಯೇ ತುಂಬದ ಹೊರತು ಆ ತೊಟ್ಟಿಲಜೀಕವು ಸುರುವಾಗುವಂತಿರಲಿಲ್ಲ. ಆದರಿಂದ ಆಗ ತುಸ ವಿಶ್ರಾಂತಿ ದೊರೆತಂತಾಯಿತು. ಚಂದೂನ ರೂಪವು ವಿಶೇಷವಾಗಿ, ಹಿಂದೂ ಪದ್ಧತಿಯ ಆತನ ಉಡುಪು ಇವೆರಡೂ ವಿಶೇಷ ಸುಂದರ ಹಾಗು ಚಿತ್ತಾಕರ್ಷಕವಾಗಿದ್ದವು. ಆ ಯುವತಿಯು ಆಶ್ಚರ್ಯದಿಂದಲೂ ಕೌತುಕದಿಂದಲೂ ಅವುಗಳ ಕಡೆಗೆ ಎಷ್ಟೋ ಕ್ಷಣಗಳ ವರೆಗೆ ದಿಟ್ಟಿಸಿ ನೋಡುತ್ತಿದ್ದಳು. ಗುರ್ತಿಲ್ಲದವರೊಡನೆ ತಾವಾಗಿ ಮಾತಾಡುವುದು ವಿಲಾಯತಿಯೊಳಗಿನ ರೀತಿಯಲ್ಲ; ಮತ್ತು ವಿಲಾಯತಿಯೊಳಗಿನ ಪ್ರತಿಯೊಂದು ವಿಲಾಯತಿಯ ರೀತಿಯನ್ನು ಸ್ವತಃ ವಿಲಾಯತೀ ಜನರಿಗಿಂತ ಹಿಂದೀ ಜನರೇ ಹೆಚ್ಚು ಪಾಲಿಸಬೇಕಾಗುತ್ತದೆ; ಯಾಕಂದರೆ, ತಮ್ಮಿಂದ ತಪ್ಪಾಗಿ ಹಾಸ್ಯಾಸ್ಪದವಾಗುವ ಅಂಜಿಕೆಯು ಇವರಿಗಿರುತ್ತದೆ. ಆದರಲ್ಲೂ ನವಯುವತಿಯೊಡನೆ ಪರಪುರುಷನು ತಾನಾಗಿ ಮಾತನಾಡುವದಂತೂ ಧೈರ್ಯದ ಕೆಲಸವೇ ಸರಿ! ಆ ಯುವತಿಗೆ ತಾನಾಡಿದ್ದು ವಿಹಿತವೆನಿಸಿದರಂತೂ ಸರಿಯೇ ತದ್ವಿರುದ್ಧವಾಗಿ ಅವಳಿಗೆ ಅಪಮಾನವೆನಿಸಿದರೆ, ಇವನೇನು ಮಾಡುವವನು! ಆದರೆ ಆ ನವ ತರುಣಿಯು ಚಂದೂನ ಈ ಆತಂಕವನ್ನು ತಾನಾಗಿಯೇ ದೂರೀಕರಿಸಿದಳು. ಚಂದೂನೊಡನೆ ಅವಳೇ ಮಾತಾಡಲಿಕ್ಕೆ ಪ್ರಾರಂಭಿಸಿದಳು.

"ನಾನೊಂದುಮಾತು ಕೇಳಲೊ? ತಾವು ಇಂಗ್ಲಿಷಜನವೆಂದು ತೋರುವದಿಲ್ಲ."

"ಹೌದು. ನಾನು ಹಿಂದುಸ್ತಾನದಿಂದ ಬಂದಿರುತ್ತೇನೆ."

"ಹಿಂದುಸ್ತಾನದ ಜನರೆಲ್ಲ ನಿಮ್ಮಂತೆಯೇ ತರುಣರೂ ಸುರೂಪಿಗಳೂ ಹೀಗೆಯೇ ಉಡುಪು ಧರಿಸುವವರೂ ಇರುವರೇನು?"

ಈ ಪ್ರಶ್ನೆಯ ಬಗ್ಗೆ ಚಂದುವಿಗೆ ನಗೆಬಾರದಿರುವದೇ? ಆತನು "ಹಿಂದುಸ್ತಾನದಲ್ಲಿ ಯಾರು ತಾರುಣ್ಯಾವಸ್ಥೆಯಲ್ಲಿರುವರೋ ಅವರಷ್ಟೇ ತರುಣರಿರುತ್ತಾರೆ; ಮತ್ತು ಹಿಂದುಸ್ಥಾನದಲ್ಲಿ ನಾನಾವಿಧದ ಉಡಿಗೆ-ತೊಡಿಗೆಗಳಿರುವದರಿಂದ ಅವುಗಳಿಂದ ಯಾವುದೊಂದು ಪದಾರ್ಥಸಂಗ್ರಹವೇ ತುಂಬಿಬಿಟ್ಟೀತು."

"ನೀವು ಯಾವ ಸಂಸ್ಥಾನದ ರಾಜಕುಮಾರರಿರುವಿರಿ?"

“ನನ್ನ ಸಂಸ್ಥಾನವಿಲ್ಲ; ಹಾಗು ನಾನು ರಾಜಪುತ್ರನೂ ಅಲ್ಲ; ಆದರೆ ಉಂಡುಟ್ಟು ಸುಖದಿಂದ ಜೀವಿಸುವಂತಹನೊಬ್ಬ ಪ್ರಾಣಿಯಿರುವೆನು.”

‘ಹಾಗಾದರೆ ಇತ್ತ ಕಡೆಗೇನು ದೇಶಪರ್ಯಟನಕ್ಕೆಂದು ಬಂದಿರುವಿರಾ?’

“ಛೀ-ಛೀ! ಆ ಆನಂದವನ್ನು ನಾನು ಪ್ರೌಢವಯಸ್ಸಿಗಾಗಿ ಕಾದಿಟ್ಟಿರುವೆನು. ಮನುಷ್ಯನು ಬಾಲ್ಯ-ಯೌವನಗಳಲ್ಲಿ ವಿದ್ಯೆಯನ್ನು ಸಂಪಾದಿಸಬೇಕಲ್ಲವೇ?”

“ಹಾಗಾದರೆ ನಿಮ್ಮ ಸ್ವಂತದ ದೇಶದಲ್ಲಿ ವಿದ್ಯೆಗೇನು ಕೊರತೆ? ಮೊನ್ನೆ ಪ್ರೊ. ಮೆಕ್ಸಮುಲ್ಲರರದೊಂದು ಪುಸ್ತಕ ನೋಡಿದೆನು ಅದರೊಳಗಿನ ನಿಮ್ಮ ದೇಶದ ಸ್ತುತಿಯನ್ನೋದಿ ದೇವರು ಎಲ್ಲ ಮನುಷ್ಯಕುಲವನ್ನು ಹಿಂದುಸ್ಥಾನದಲ್ಲೇ ಆದೇಕೆ ಹುಟ್ಟಿಸುವದಿಲ್ಲೆಂದೆನಿಸಿತು.”

“ಅಬ್ಬಬ್ಬ! ಮತ್ತು ದೇವರು ಎಲ್ಲ ಮನುಷ್ಯರನ್ನು ಹಿಂದುಸ್ಥಾನದಲ್ಲೇ ಹುಟ್ಟಿಸಿದರೆ ಅಲ್ಲಿ ಅದೆಷ್ಟು ಗದ್ದಲವಾದೀತು? ಹಾಗು ಈ ನಿಮ್ಮ ಸುಂದರ ದೇಶವು ಹಾಳುಬಿದ್ದೀತಲ್ಲ! ಇದರ ಗತಿಯೇನು?”

“ನಮ್ಮ ದೇಶವು ನಿಮಗೆ ಸುಂದರವೆನಿಸುವದೆ?”

“ಅಹುದು; ಅನಿಸದೇನು?”

“ಯಾವ ದೃಷ್ಟಿಯಿಂದ?”

“ನೋಟಗಳ ದೃಷ್ಟಿಯಿಂದ; ಹಾಗು ಮನುಷ್ಯರ ದೃಷ್ಟಿಯಿಂದಲೂ.”

“ಆದರೆ ನಿಮ್ಮನ್ನು ಕಂಡು ನನಗನಿಸುವದೇನಂದರೆ, ಇಂಗ್ಲಂಡಕ್ಕಿಂತ ಹಿಂದುಸ್ಥಾನದ ಜನರೇ ಹೆಚ್ಚು ಸುಂದರರಾದಾರು!”

“ನಾನು ಹಾಗೆಂತೆನ್ನಲಿ? ಅದು ದೃಷ್ಟಿಯ ಔದಾರ್ಯವನ್ನವಲಂಬಿಸಿದೆ; ಆದರೆ ಶರೀರ ಸೌಂದರ್ಯದ ತುಲನೆ ಮಾಡುವ ಗೊಡವೆಗೆ ಹೋಗದೆ ನಾನು ಇಷ್ಟು ಖಂಡಿತವಾಗಿ ಹೇಳಬಲ್ಲೆನು: ನಿಮ್ಮ ಇಂಗ್ಲಂಡದಲ್ಲಿ ನಮ್ಮ ಹಿಂದುಸ್ಥಾನಕ್ಕಿಂತ ಒಳ್ಳೇ ಚಲೋ ವಿದ್ಯೆಯಿರುತ್ತದೆ; ಮತ್ತು ವಿದ್ಯೆಯೇ ಮನಸ್ಸಿನ ನಿಜವಾದ ಸೌಂದರ್ಯವಲ್ಲವೇನು? ನಿಮ್ಮ ದೇಶಕ್ಕೆ ಇಬ್ಬಗೆಯ ಸೌಂದರ್ಯವೂ ಇರುವದರಿಂದ, ನಿಮಗೆ ಹೆಚ್ಚು ಗುಣಗಳನ್ನು ಯಾರಾದರೂ ಕೊಟ್ಟಾರು.”

“ಪರಕೀಯರು ಪರಕೀಯರ ಸ್ತುತಿ ಮಾಡುವದು ಲೋಕದಲ್ಲಿ ದೊಡ್ಡಸ್ತಿಕೆಯ ರೀತಿಯೇ ಆಗಿದೆ; ಆದರೆ ನಿಮ್ಮ ದೇಶದಲ್ಲಿ ನಿಮಗೆ ದೊರೆಯದಂತಹ ಅದಾವ ವಿದ್ಯೆಯನ್ನು ಸಂಪಾದಿಸಲಿಕ್ಕೆಂದು ನೀವಿಲ್ಲಿಗೆ ಬಂದಿರುತ್ತೀರಿ?”

“ನಾನು ಆಕ್ಸಫರ್ಡಿನಲ್ಲಿ ಎಂ. ಏ. ಆಗುವವನು, ಲಂಡನ್ನದ ಬ್ಯಾರಿ

ಸ್ಥರನಾಗುವವನು; ಹಾಗು ಆಯ್. ಸಿ. ಎಸ್. ಪರೀಕ್ಷೆ ಪಾಸಾಗಿ, ಹಿಂದು ಸ್ಥಾನಕ್ಕೆ ಹೋಗಿ ನೌಕರಿ ಮಾಡುವವನು.''

"ಮತ್ತು ಇಷ್ಟೆಲ್ಲ ವಿದ್ಯೆಯು ನಿಮ್ಮ ಪುಟ್ಟ ತಲೆಯಲ್ಲಿ ಹಿಡಿಸುವುದೇ!"

"ಅದೇಕೆ ಹಿಡಿಸಲಿಕ್ಕಿಲ್ಲ? ನಿಮ್ಮ ಇಂಗ್ಲಂಡವು ಹಿಂದುಸ್ಥಾನಕ್ಕಿಂತ ಎಷ್ಟೋ ಸಣ್ಣದು! ಇದರಲ್ಲಿ ಹಿಂದುಸ್ಥಾನಕ್ಕಿಂತ ನೂರಾರು ಪಟ್ಟು ಹೆಚ್ಚು ವಿದ್ಯೆಯೂ ಸಂಪತ್ತಿಯೂ ಹೇಗೆ ಹಿಡಿದಿರುತ್ತವೆ?''

"ಒಳ್ಳೇದು. ವಿಲಾಯತಿಯೊಳಗಿರುವ ವರೆಗೆ ನೀವು ನಮ್ಮ ಸ್ತುತಿ ಮಾಡೀರಿ; ಸ್ವದೇಶಕ್ಕೆ ಮರಳಿದಿರೆಂದರೆ ಇಂಗ್ಲಂಡವನ್ನು ಮರೆತೇ ಬಿಟ್ಟೀರಿ''

"ರಮ್ಯಗಳಾದ ನೆನಪುಗಳನ್ನು ಮರೆಯುವವನು ಮನುಷ್ಯನೇ? ಮತ್ತು ಕೃತಜ್ಞತೆಯ ಮೂಲಕವೂ ನಾನು ಇಂಗ್ಲಂಡದ ನೆನಪನ್ನು ಮರೆಯಬೇಕೆಂದರೂ ಮರೆಯುವಂತಿಲ್ಲ. 'ನೆನಪಿಗೆ ತೊನಸಿಯಂತೆ ನೂರಾರು ಕಾಲುಗಳಿರುತ್ತವೆ'ಂದು ನಾಣ್ಣುಡಿಯೇ ಇವೆ ಯಾವುದೊಂದು ಕಾಲು ಮುರಿದು ಬಿದ್ದರೆ ತೊನಸಿಗೇನೂ ಕೊರತೆಯಾಗುವದಿಲ್ಲ."

"ಹಾಗಾದರೆ ಇಂಗ್ಲಂಡದ ನೆನಪಿನ ನಿಮ್ಮ ಆ ತೊನಸಿಗೆ ಗಳು ಎಷು ಕಾಲುಗಳನ್ನು ಹೊಂದಿಸಿರುತ್ತೀರಿ? ಇನ್ನೂ ಕಲ ಕಾಲುಗಳನ್ನು ಹೊಂದ್ಸಿಸುವದಿರಬಹುದಲ್ಲವೆ?"

"ಆ ಕಾಲುಗಳನ್ನು ಮನುಷ್ಯನು ಜೋಡಿಸುವೆನೆಂದರೆ ಜೋಡಿಸುವವೆಂತಲ್ಲ; ತದ್ವಿರುದ್ಧವಾಗಿ ಹೊಂದಿಕೆಯಾದ ಕೆಲ ಕಾಲುಗಳನ್ನು ಯಾರಾದರೂ ಮುರಿದು ಚೆಲ್ಲಬೇಕೆಂದರೂ ಮುರಿಯುವುದು ಶಕ್ಯವಿಲ್ಲ. ಈಶ್ವರನ ಮಾಟದಿಂದ ನಿರ್ಮಿತವಾದ ಕಾಲುಗಳವು! ಅವುಗಳಿಂದ ನಡೆಯುಲಿಕ್ಕೆ ಬರುವಂತೆ, ಬಂಧನದ ಸಮಯ ಒದಗಿತೆಂದರೆ ಅವೇ ಕಾಲುಗಳು ಪಾಶಗಳಾಗಿ ಪರಿಣಮಿಸುತ್ತವೆ!''

ಅವರೀರ್ವರಲ್ಲಿ ಹೀಗೆ ಮಾತು-ಕಥೆ ನಡೆದಿರುವಷ್ಟರಲ್ಲಿ ಮಿಕ್ಕ ಆರೂ ತೊಟ್ಟಿಲುಗಳು ಭರತಿಯಾದವು; ಹಾಗು ಗಾಲಿ ತಿರುಗುವ ಸೂಚನೆಯಾಯಿತು. ಆಗ ಆ ಯುವತಿ:—"ಇಂಥ ತೊಟ್ಟಿಲುಗಳಲ್ಲಿ ಕೂಡ್ರಲಿಕ್ಕೆ ನಿಮಗೊಳ್ಳೇ ರೂಢಿಯಾಗಿರಬಹುದಲ್ಲವೆ?''

"ಹೌದು; ಮತ್ತು ನಿಮಗೆ?''

"ನಾನಂತೂ ಇಂಥ ತೊಟ್ಟಿಲದಲ್ಲಿ ಕೂಡ್ರುವದಿದೇ ಮೊದಲು. ದೇವರನ್ನು ಧ್ಯಾನಿಸಿ ಮೋಜಿಗೆಂದು ಬಂದು ಕುಳಿತಿರುತ್ತೇನಿಷ್ಟೇ."

"ಮತ್ತು ನಿಮಗೆ ಬವಳಿಗಿವಳಿ ಬಂದರೆ?''

“ಬವಳಿ ಬಂದವರು ಸಮೀಪದಲ್ಲಿ ದೊರೆತದುದನ್ನೇ ಆಶ್ರಯಹೊಂದುವಂತೆ ನಾನಾದರೂ ಮಾಡೇನು.”

“ಹಾಗಾದರೆ ನೀವು ಹಾಗೆ ನನ್ನ ಆಶ್ರಯ ಪಡೆಯಬೇಕೆಂದು ನಿಮಗೆ ಬವಳಿ ಬರಲೆಂದು ನಾನು ದೇವರನ್ನು ಕುರಿತು ಪ್ರಾರ್ಥಿಸಲೇಬೇಕಾದೀತು.”

ಆ ಯುವತಿಯು ನಕ್ಕು:—“ಮನಸ್ಸೇ ಹಾಗೆ ಮಾಡುತ್ತದೆ; ಆದರೆ ಅದನ್ನು ದೇವರ ಪ್ರಾರ್ಥನೆಯ ಫಲವೆನ್ನುವದು ಮಾತ್ರ ಧೂರ್ತ ಮನುಷ್ಯನ ರೀತಿಯೇ ಆಗಿಬಿಟ್ಟಿದೆ.”

ಆಯಿತು! ತೊಟ್ಟಿಲುಗಳ ಚಕ್ರವು ತಿರುಗಲಿಕ್ಕೆ ಪ್ರಾರಂಭವಾಯಿತು! ಒಳ್ಳೇ ವೇಗವಾಗಿ ತಿರುಗಹತ್ತಿತು. ತೊಟ್ಟಿಲು ಒಮ್ಮೆ ಮೇಲೆ ಆಕಾಶಕ್ಕೆ ಹೋದರೆ ಇನ್ನೊಮ್ಮೆ ನೆಲಕ್ಕೆ ಮುಟ್ಟುವದು. ಹೀಗೆ ಎಷ್ಟೋ ಹೊತ್ತಿನ ವರೆಗೆ ತಿರುಗಿದವು. ಆಗ ದೇಹಪ್ರಕೃತಿಯ ವೈಚಿತ್ರ್ಯದಂತೆ ಕೆಲವರು ಗಟ್ಟಿ ಗಟ್ಟಿಯಾಗಿ ನಗಹತ್ತಿದರು. ಕೆಲವರು ಕೇಕೆ ಹೊಡೆಯುಹತ್ತಿದರು. ಕೆಲವರು ವೇಗದೊಡನೆ ತಾಳಹಾಕಹತ್ತಿದರು; ಆದರೆ ಯಾರಿಗೆ ಆ ವೇಗವೂ ಗತಿಯೂ ಸಹನವಾಗದಾದವೋ ಅವರು ದುಃಖದರ್ಶಕ ಧ್ವನಿಮಾಡತೊಡಗಿದರು. ಮೂರನೇ ಸುತ್ತಿಗೇ ಆ ಯುವತಿಯು ಕಣ್ಣುಮುಚ್ಚಿದಳು; ಹಾಗು ಚಂದೂನ ಕೈಯಲ್ಲಿ ಕೈಯಿಕ್ಕಿ, ತನ್ನ ತಲೆಯನ್ನು ಆತನ ಹೆಗಲಮೇಲಿಟ್ಟಳು!

ಚಂದುವು ಕೊಂಚ ಗಾಬರಿಗೊಂಡ ದನಿಯಿಂದ:—“ನಿಜವಾಗಿಯೂ ನಿಮಗೆ ಬವಳಿ ಬಂದಿತೇನು?”

ಆದರೆ ಆಕೆಯು ಹಾಗೆಯೇ ಕಣ್ಣುಮುಚ್ಚಿಕೊಂಡು ಹಾಗು ಕೈಯಿಟ್ಟು: “ನಿಜವಾಗಿಯೂ ಬಂದಿದೆ; ಆದರೆ ನಿಮ್ಮ ಆಶ್ರಯದಿಂದ ಕ್ಷಿಪ್ರದಲ್ಲೇ ಕಡಿಮೆಯಾದೀತು. ಈ ತೊಟ್ಟಿಲುಗಳಲ್ಲಿ ತಮ್ಮ ಇಚ್ಛೆಯಿಂದ ಕೂಡ್ರುವವರು ಬವಳಿ ಸಾವರಿಸಿಕೊಳ್ಳಲಿಕ್ಕೆ ಸಿದ್ಧರೇ ಆಗಿಂಬೇಕು.”

ಏಳನೇ ಸುತ್ತಿಗೆ ಇವರೀರ್ವರು ಕುಳಿತಿದ್ದ ತೊಟ್ಟಿಲಿನ ಹಗ್ಗವು ಕೊಂಚವೇ ಕಟಗರಿಸಿದಂತಾದ ಸಪ್ಪಳ ಕೇಳಿಸಿತು; ಮತ್ತು ಎಂಟನೇ ಸುತ್ತಿಗಂತೂ ನೆಲದಿಂದ ಸುಮಾರು ೮ ಫೂಟು ಎತ್ತರದಲ್ಲಿ ತೊಟ್ಟಿಲು ಇರುವಾಗಲೇ ಚಂದೂ ಕುಳಿತಿದ್ದ ಕಡೆಯ ಹಗ್ಗವು ಪೂರಾ ಹರಿದು ಹೋಯಿತು ಕೂಡಲೆ ತೊಟ್ಟಿಲವು ಆ ಮಗ್ಗಲು ಒಲಿದು ನೆಲಕ್ಕೆ ಹತ್ತಿತು; ಹಾಗು ಕೆಳಗೆ ಚಂದುವೂ ಅವನ ಮೇಲೆ ಆ ನವ ತರುಣಿಯೂ ಹೀಗೆ ಬಿದ್ದು ಬಿಟ್ಟರು! ಆದರೆ ಸುದೈವದಿಂದ ಕೆಳಗಡೆಗೆ ಹಸೀ ಹುಲ್ಲಿನ ಭೂಮಿಯಿದ್ದ ಮೂಲಕ ಯಾರಿಗೂ ಹೆಚ್ಚಾಗಿ ತಾಕಲಿಲ್ಲ!

ಆ ತೊಟ್ಟಿಲಜೀಕದ ಒಡೆಯನು ಓಡುತ್ತಲೇ ಇವರ ಕಡೆಗೆ ಬಂದನು. ಅವನು ತನ್ನನ್ನು ತಾನೇ ಬೈದುಕೊಂಡು ಆ ಅಪಘಾತದ ದುಃಖಪ್ರದರ್ಶನ ಮಾಡಿದನು; ಮತ್ತು ತನ್ನ ಜೇಬಿನೊಳಗಿಂದ ಎರಡು ತಿಕೀಟುಗಳ ಹಣ ತೆಗೆದು ಅದನ್ನು ಚಂದೂನ ಕೈಗೆ ಕೊಡಹೋದನು. ಚಂದುವು ಏನೆಂದರೂ ಅದನ್ನು ಸ್ವೀಕರಿಸಲಿಲ್ಲ. ಆಗ ಚಂದುವು:—"ಇಂಥ ಚಿಲ್ಲರೆ ಅಪಘಾತ ಗಳಾಗತಕ್ಕವೇ. ಎಂಟು ಸುತ್ತು ಸುತ್ತಿಸಿಕೊಂಡು ನಮಗಾಗಬೇಕಾಗಿದ್ದ ಮೋಜನ್ನು ನಾವು ಪೂರೈಸಿಕೊಂಡಿರುತ್ತೇವೆ; ಅಲ್ಲದೆ ಈ ತೊಟ್ಟಿಲಜೀಕದೊಳ ಗಿನ ಬೇರೆ ಯಾರಿಗೂ ದೊರಕದಂತಹ ಈ ಇನ್ನೊಂದು ಒಂಬತ್ತನೇ ಸುತ್ತು ನಮಗೆ ಹೆಚ್ಚಾಗಿ ದೊರಕಿತೆಂವೇ ನಾನು ತಿಳಿಯುತ್ತೇನೆ."

ಹೀಗೆ ಹೇಳ ಹೇಳುತ್ತಲೇ ಆತನು ಆ ತರುಣಿಯನ್ನು ಸಾವರಿಸಿ ಹಿಡಿದು ಎಬ್ಬಿಸಿ ನಿಲ್ಲಿಸಿದನು. ಅವಳು ಈಗ ಕಣ್ಣು ತೆರೆಯಹತ್ತಿದ್ದರೂ ಚಂದೂನ ಕೈ ಬಿಟ್ಟಿರಲಿಲ್ಲ; ಅತಿ ಚಿಕ್ಕ ಅಪಘಾತದಿಂದ ಯಾವ ಭೀತಿಯು ಅನಿಸುವದೋ ಹಾಗು ಅದರೊಡನೆಯೇ ಯಾವ ಮೋಜುದೋರುವದೋ, ಅವುಗಳ ಸಂ-ಯೋಗದಿಂದ ಅವಳು ಅಂಜಿದ ಕಣ್ಣುಗಳಿಂದ ನೋಡುತ್ತ ನಗಹತ್ತಿದಳು.

ತೊಟ್ಟಿಲಜೀಕದ ಮಾಲಕನು:—"ತಂಗೀ, ನಾನು ನಿನಗೆ ದೊಡ್ಡ ಅಪ ರಾಧಿಯಾಗಿರುತ್ತೇನೆ." ಎಂದು ಹೇಳಿದವನೇ, ಆತನು ತನ್ನ ಜೇಬಿನೊಳಗಿನ ಸ್ಮೆಲ್ಲಿಂಗ ಸಾಲ್ಟಿನ ಸೀಸೆ ತೆಗೆದು ಅವಳ ಮೂಗಿನ ಬಳಿ ಹಿಡಿದನು; ಹಾಗು ಹೇಳಿದನೇನಂದರೆ:-"ಇಂದು ಈ ತೊಟ್ಟಿಲದ ಹಗ್ಗ ಹರಿದದ್ದೊಂದು ವಿಶೇಷವೇ ಆಗಿದೆ; ಆದರೆ ಝುರಿ ತೆಗೆದುಕೊಳ್ಳುವ ಹಲವರಿಗಾಗಿ ಉತ್ತೇಜಕ ವಾಸನೆಯ ಈ ಸೀಸೆಯನ್ನು ನಾನು ಯಾವಾಗಲೂ ಹತ್ತರಿರಿಸಿಕೊಳ್ಳಲೇ ಬೇಕಾಗುತ್ತದೆ."

ಆ ಯುವತಿಯು ಆತನ ಕೈಯೊಳಗಿನ ಆ ಸೀಸೆಯನ್ನು ತಕ್ಕೊಂಡು ತಾನೇ ಮೂರು-ಮೂರು ಸಾರೆ ಮೂಸಿ ನೋಡಿದಳು; ಮತ್ತು ನಗೆಚೇಷ್ಟೆ ಗಾಗಿ ಚಂದೂನ ಮೂಗಿಗೂ ಹಿಡಿದಳು. ಆತನಿಂದ ಆ ವಾಸನೆಯನ್ನು ಸಹಿಸ ಲಾಗದೆ ಎರಡು-ಮೂರು ಶೀನುಗಳು ಬಂದವು. ಆಗ ಆತನು:—"ಭಲೆ! ಸ್ಮೆಲಿಂಗ ಸಾಲ್ಟನ್ನು ಮೂಸಿ ನೋಡಲಿಕ್ಕೆ ನಾನೇನು ಹೆಂಗುಸಿರುವೆನೇ?"

ಅದಕ್ಕೆ ಆ ಹುಡುಗೆಯು:—"ಗಂಡಸರ ಖಂಬೀರತನದ ಡೌಲು ಮೆರಿಸಬೇಡಿರಿ. ಒಮ್ಮೊಮ್ಮೆ ಗಂಡಸರ ಕಣ್ಣುಗಳನ್ನೂ ಹೆಂಗಸರು ತಮ್ಮ ಸೆರಗಿನಿಂದ ಒರೆಸಿ ಒಣಗಿಸುವ ಪ್ರಸಂಗಗಳೂ ಬರುವದುಂಟು."

ಚಂದೂನು ನಕ್ಕು:—"ಅಥವಾ ಒಮ್ಮೊಮ್ಮೆ ಹಸಿ ಮಾಡುವ ಪ್ರಸಂಗ ಗಳೂ ಬರುವದುಂಟು."

ಬಳಿಕ ಅವರಿಬ್ಬರೂ ಅಲ್ಲಿಂದ ಹೊರಟರು. ಅಲ್ಲಿಂದ ಎಲ್ಲಿಗೆ ಹೋಗ ಬೇಕೆಂಬದು ಅವರಿಬ್ಬರ ಮನಸ್ಸಿನಲ್ಲಿಯೂ ಮುಂಚೆ ನಿರ್ಧರವಾದಂತೆ ಕಾಣ ಲಿಲ್ಲ; ಆದರೆ ಇಂತಿಷ್ಟು ಶ್ರಮದ ನಂತರ ಯಾವುದೊಂದು ಚಹದ ಅಂಗಡಿ ಯಲ್ಲಿ ಕುಳಿತು ವಿಶ್ರಾಂತಿಪಡೆಯುವದು ಸಹಜವಾಗಿಯೇ ಪ್ರಾಪ್ತವಾಯಿತು. ಸಮೀಪದಲ್ಲಿಯ ಒಂದು ಒಳ್ಳೇ ಉಪಾಹಾರ ಗೃಹವನ್ನು ನೋಡಿ ಅವರಿಬ್ಬರೂ ಅದರೊಳಗೆ ಪ್ರವೇಶಿಸಿದರು. ಅವರಿಬ್ಬರಿಗೂ ಬೇಕಾಗಿದ್ದ ಪದಾರ್ಥಗಳು ಟೇಬಲ್ಲಿಗೆ ಬರಲು, ಅವರಲ್ಲಿ ಸಂಭಾಷಣಾರಂಭವಾಯಿತು.

ಆಗ ಆ ತರುಣಿ:—"ಇಂದು ನೀವು ಆ ತೊಟ್ಟಿಲಿನಲ್ಲಿ ನನ್ನೊಡನಿದ್ದಿ ರೆಂದೇ ವಿಹಿತವಾಯಿತು."

"ಅದೇಕೆ?"

"ನನಗೆ ಅಲ್ಲಿ ಬವಳಿ ಬರಲು, ನಿಮ್ಮ ಕೈಯ ಆಶ್ರಯ ಹೊಂದಲು ನನಗೆ ಅನುಕೂಲವಾಗಲಿಲ್ಲವೆ?"

"ಆದರೆ ನಾನು ಅಲ್ಲಿರದಿದ್ದರೆ ತೊಟ್ಟಿಲೊಳಗಿನ ಆ ನನ್ನ ಎರಡನೇ ಸ್ಥಳವೇನೂ ಬರಿದಾಗುತ್ತಿರಲಿಲ್ಲವಲ್ಲ!"

"ಅದೇನೋ ನಿಜ; ಆದರೆ ಅಲ್ಲಿ ಬೇರೆ ಯಾರು ಕುಳಿತಿದ್ದರೂ ನಾನು ಅವರ ಆಧಾರವನ್ನು ಪಡೆದೇ ಪಡೆಯುತ್ತಿದ್ದೆನಂತಲ್ಲ."

"ಹಾಗಾಗಿದ್ದರೇನು ಮಾಡುತ್ತಿದ್ದಿರಿ?"

"ಎಡಕ್ಕೆ ಆನದೆ ಬಲಕ್ಕೆ ತೊಟ್ಟಿಲದ ಕಟ್ಟಿಗೆಯ ಮೇಲೆಯೇ ಆತು ಬಿಡು ತ್ತಿದ್ದೆನು. ತಾರತಮ್ಯ ನೋಡುವುದು ಮನುಷ್ಯಧರ್ಮವಲ್ಲವೇ?"

ಇಷ್ಟು ಮಾತಾಡಿದ ಬಳಿಕ ಅವರಿಬ್ಬರಿಗೂ ಒಂದು ಅಡಚಣಿಯು ಪ್ರಾಪ್ತ ವಾಯಿತು. ಪರಸ್ಪರರ ಹೆಸರು ಗೊತ್ತಾಗದ ಹೊರತು ಭಾಷಣ ವ್ಯವಹಾರಕ್ಕೆ ಆತಂಕವುಂಟಾಗುತ್ತದೆ. ಸಂಬೋಧನದ ಆಶ್ರಯದ ಹೊರತು ಭಾಷಣಕ್ಕೆ ಕಳೆ ಏರುವದಿಲ್ಲ. ಮಿಸ್ಟರ, ಮಿಸ್, ಮಿಸೆಸ್ ಹೀಗೆ ಏನಾದರೂ ಸಂಬೋಧಿಸು ವುದರಿಂದ ಭಾಷಣಕ್ಕೆ ಸ್ಫೂರ್ತಿಯುಂಟಾಗುವದಿಲ್ಲ. ಕೂಡಲೆ ಅವರಿಬ್ಬರೂ ನಗೆ ಮೊಗದಿಂದ ತಮ್ಮ ತಮ್ಮ ಹೆಸರುಗಳನ್ನು ಹೇಳಿದರು.

ಚಂದುವು:—"ನನ್ನ ಹೆಸರು ಚಂದೂಲಾಲ ಗಂಗಾರಾಮ ವರ್ಮಾ. ನಾನಿರುವ ಸ್ಥಳವು ಹಿಂದುಸ್ತಾನದಲ್ಲಿ ಸಾಗರ ಪ್ರಾಂತದೊಳಗೆ ಚೋದ್ಯಪುರವು" ಎಂದು ಹೇಳಿ, ತನ್ನ ವ್ಹಿಜಿಟಿಂಗ ಕಾರ್ಡನ್ನು ಅವಳ ಕೈಗೆ ಕೊಟ್ಟನು; ಆದರೆ ಆತನು ಕೂಡಲೆ ಅದನ್ನು ಹಿಂದಕ್ಕೆ ತಕ್ಕೊಂಡು, ಫೌಂಟನ್ನ ಪೇನಾದಿಂದ ತನ್ನ ಆಕ್ಸಫರ್ಡಿನ ಹಾಗು ಲಂಡನ್ನಿನ ವಿಳಾಸಗಳನ್ನೂ ಅದರಲ್ಲಿ ಬರೆದು—"ನಾನು

ಕಾರಣಾಂತರದಿಂದ ಎರಡೂ ಕಡೆಗೆ ಇರುತ್ತೇನೆ. ಟೆಲಿಫೋನಿನ ಡಿರೆಕ್ಟರಿಯಲ್ಲಿ ನಿಮಗೆ ನನ್ನ ನಂಬರುಗಳು ದೊರೆತಾವು."

ಆ ತರುಣಿಯು ತನ್ನ ಹೆಸರು "ಮೇರಿ ವ್ರೊಡಹಾಊಸ ಎಂದು ಹೇಳಿದಳು; ಆದರೆ ಆಕೆಯು ಹತ್ತಿರ ಛಾಪಿಸಿದ ವ್ಹಿಜಿಟಿಂಗ ಕಾರ್ಡು ಇರಲೇ ಇಲ್ಲ ಇಷ್ಟೇ ಅಲ್ಲ. ತನ್ನ ವಾಸಸ್ಥಳವನ್ನು ತಿಳಿಸುವಾಗ ಅವಳು ಹೆಚ್ಚಾಗಿ ತಡವರಿಸಿದಳು. ಯಾವ ವಿಳಾಸವನ್ನು ನಿರ್ಧಾರಪೂರ್ವಕವಾಗಿ ಹೇಳಬೇಕೆಂಬುದೇ ಆಕೆಗೆ ತಿಳಿಯಲೊಲ್ಲದು. ಕೊನೆಗೆ ಆ ಗೊಂದಲದೊಳಗಿಂದ ಪಾರಾಗುವದಕ್ಕೆಂದು ಅವಳು "ನನ್ನ ಹೆಸರಿನ ಪತ್ರದ ಪೆಟ್ಟಿಗೆಯನ್ನು ಲಂಡನ್ನದೊಳಗಿನ ಮಾರ್ಬಲ್ಲ ಆರ್ಚ ಬಳಿಯ ಯಂಗ ವುಯಿಮೆನ್ಸ ಖ್ರಿಶ್ಚನ್ ಅಸೋಸಿಯೇಶನ್ನಿನ ಆಫೀಸಿನಲ್ಲಿಟ್ಟಿರುತ್ತೇನೆ. ನನ್ನದೇ ಎಂದಾಗಿರುವ ಟೆಲಿಫೋನಿನ ವಿಳಾಸವಿಲ್ಲ; ಆದರೆ ಮೇಲೆ ವಿವರಿಸಿದ ಸ್ಥಳಕ್ಕೆ ಟೆಲಿಫೋನ ಮಾಡಿದ್ದರೆ, ಸ್ವಲ್ಪ ತಡವಾಗಿಯೇ ಏಕಾಗಲೊಲ್ಲದು, ನನಗದನ್ನು ಯಾರಾದರೂ ತಿಳಿಸಬಹುದು."

"ಆದರೆ ನೀವು ಯಾವಾಗಲೂ ಲಂಡನ್ನಿನಲ್ಲಿರುವಿರೋ ಇಲ್ಲವೋ?"

"ಇಲ್ಲ. ನಾನು ಲಂಡನ್ನಿನಲ್ಲಿದ್ದಾಗ ಆ ಖ್ರಿಶ್ಚನ್ ಅಸೋಸಿಯೇಶನ್ನಿನ ಒಬ್ಬ ಸೆಕ್ರೆಟರಿಯು ಸ್ಥಳದಲ್ಲಿರುವ ನನ್ನ ದೂರಿನ ಆಪ್ತಳಾದ ಎಲ್. ಎಸ್. ಪೇರಿ ಎಂಬವಳಲ್ಲಿರುತ್ತೇನೆ; ಆದರೆ ಲಂಡನ್ನಿನ ಹೊರಗೆ ಕೆಂಟ ಪರಗಣೆಯೊಳಗಿನ ಒಂದು ಹಳ್ಳಿಯಲ್ಲಿ ನನ್ನ ಮನೆಯಿದೆ; ಅಲ್ಲಿಯೇ ನಾನಿರುವುದು."

"ಆ ಹಳ್ಳಿಯ ಹೆಸರೇನು"

"ಆ ಊರ ಹೆಸರು 'ನೆವ್ಹೆಲ್ ಪ್ರೋರ್ಟ' ಎಂದು; ಮತ್ತು ಅಲ್ಲಿಯ ನನ್ನ ಮನೆಗೆ 'ಮಿರ್‍ಯಾಕಲ' ಎಂದೆನ್ನುವರು."

ಚಂದೂನಿಗೆ ಆ ಎರಡೂ ಶಬ್ದಗಳ ಅರ್ಥವು ತಿಳಿಯುತ್ತಿತ್ತು: ಆದರೆ ತನ್ನ ಜೊತೆಗಾತಿಗೆ 'ಚೋದ್ಯಪುರ= ನವಲಪುರ' ಎಂಬ ಶಬ್ದದ ಅರ್ಥವು ತಿಳಿದು ಆನಂದ ಪಡೆಯಲಾಗುವದಿಲ್ಲೆಂದು ನೆನೆದು, ಆತನು "ತಾಸ ತಡೆಯಿರಿ! ಈ ಹೆಸರುಗಳ ಮೇಲಿಂದ ಸಾದೃಶ್ಯದ ಎಂಥ ಮೋಜು ಅಕಲ್ಪಿತವಾಗುಂಟಾಗಿದೆ ಯೆಂಬದನ್ನು ತಿಳಿಸುವೆನು. ಅದನ್ನು ಕೇಳಿ ನಿಮಗೂ ಮೋಜೆನಿಸೀತು. ನಿಮ್ಮ ಹೆಸರು ಮೇರೀ; ಮತ್ತು ಆ ಶಬ್ದದ ಸ್ಪೆಲ್ಲಿಂಗು Mary ಇದಕ್ಕೆ ಬದಲು Merry ಎಂದೇಕಾಗಬಾರದು? ಮತ್ತು ನನ್ನ ಹೆಸರಾದ ಚಂದೂಲಾಲ ಈ ಶಬ್ದದ ಅರ್ಥವಾದರೂ Merry Maker ಎಂದಾಗುತ್ತದೆ. ಅದರಂತೆಯೇ ನೆವ್ಹಲಪೋರ್ಟ ಮತ್ತು ನವಲಪುರ ಈ ಶಬ್ದೋಚ್ಚಾರಗಳಲ್ಲಿ ಸಾಮ್ಯ ತೋರುವದಿಲ್ಲವೇ? ನಿಮ್ಮ ಮನೆಯ ಹೆಸರಿನ ಅರ್ಥವಾದರೂ ಅದರಂತೆಯೇ ಇದೆ.

ಯಾಕಂದರೆ ಮಿರ್‍ಯಾಕಲ ಅಂದರೆ ಆಶ್ಚರ್ಯ ಇಲ್ಲವೆ ಚಮತ್ಕಾರ; ಮತ್ತು ಚೋದ್ಯಪುರ ಈ ಶಬ್ದದ ಅರ್ಥವಾದರೂ The wonderful city ಎಂದಿರುತ್ತದೆ!"

'ಎಂಥ ವಿಚಿತ್ರ ಯೋಗಾಯೋಗವಿದು!' ಮೇರಿಯೆಂದಳು.

ಬಳಿಕ ಲಂಡನ್ನಿಗೆ ಹೋಗುವದಕ್ಕೆಂದು ಅವರಿಬ್ಬರೂ ಭೂಗರ್ಭದೊಳಗಿನ ರೈಲಿನಲ್ಲಿ ಕುಳಿತರು; ಮತ್ತು ಒಂದು ಜಂಕ್ಶನ್ನಿಗೆ ಇಳಿದ ಬಳಿಕ ಅವರಿಬ್ಬರೂ ತಮ್ಮ ತಮ್ಮ ಬೀಡಾರಗಳ ಕಡೆಗೆ ಹೊರಟರು. ಆಗ ಚಂದುವು:— "ನಿಮ್ಮ ನನ್ನ ಪರಿಚಯಕ್ಕೆ ಎಷ್ಟು ಬಗೆಯ ಯೋಗಾಯೋಗಗಳಿಂದ ಪ್ರಾರಂಭವಾಯಿತೆಂಬದನ್ನು ನೋಡಿದಿರಾ? ಅಂತೆಯೇ ಇನ್ನು ಮುಂದಿನ ಸಂಗತಿಗಳನ್ನಾದರೂ ಯೋಗಾಯೋಗ ಶಬ್ದದಿಂದಲೇ ಮಾತಾಡುವದೊಳಿತು. ಅದರಿಂದಲೇ ಕೇಳುವೆನೇನಂದರೆ, ನಿಮ್ಮ ನನ್ನ ಪುನರ್ಭೆಟ್ಟಿಯ ಯೋಗಾಯೋಗವು ಮತ್ತೆ ಯಾವಾಗ ಒದಗಿ ಬಂದೀತು?"

ಮೇರಿ:—"ಇಂಥ ಎಲ್ಲ ಮಾತಿನ ಹವಾಲಿಯನ್ನು ಯೋಗಾಯೋಗದ ಮೇಲೆ ಹೊರಿಸಿದರೆ ನಡೆಯಲಾರದು. ನಾನು ಇನ್ನು ೧೫ ದಿನಗಳವರೆಗೆ ಲಂಡನ್ನಿನಲ್ಲೇ ಇರುತ್ತೇನೆ. ನೀವಾದರೂ ಇರಬಹುದು; ಮತ್ತು ಯ. ವು. ಖ್ರಿ. ಅ. ವಿಳಾಸದ ಮೇಲೆ ನನಗೆ ಟೇಲಫೋನ ಮಾಡಿದರೆ ನಿಮಗೆ ಖಾತ್ರಿಯಿಂದ ಭೆಟ್ಟಿಯಾದೇನಲ್ಲ!"ಎಂದಂದು ಅವರಿಬ್ಬರೂ ಪರಸ್ಪರರಿಗೆ ಶೇಕ್‌ಹ್ಯಾಂಡ ಮಾಡಿ ತಮ್ಮ ದಾರಿಹಿಡಿದು ಹೋದರು. ಆ ಮುಂದೆ ಏನಾಯಿತೆಂಬದನ್ನು ಹೇಳಲಿಕ್ಕೆ ಸುಮ್ಮನೆ ಈ ಪುಸ್ತಕದೊಳಗಿನ ಸ್ಥಳವನ್ನೇಕೆ ಆಕ್ರಮಿಸಬೇಕು?

———

### ಒಂದು ಹೆಣದ ಪಂಚನಾಮೆ.

ಇಂದು ನಂದಭುವನದ ಅಟ್ಟದ ಮೇಲಿನ ನಡುವಿನದೊಂದು ಪ್ರಶಸ್ತಾದ ಕೋಣೆಯಲ್ಲಿ ಒಂದು ಹೆಣದ ಸಲುವಾಗಿ 'ಜ್ಯೂರಿ'ಯು ಕಲೆತಿತ್ತು! ಆ ಹೆಣವು ಮತ್ತಾರದೂ ಆಗಿರದೆ, ಚಂದೂನ ಬುದ್ಧಿಮತ್ತೆಯದಾಗಿತ್ತು. ಆ ಬುದ್ಧಿಗೆ ಪ್ರಾಪ್ತವಾದ ಮರಣವು ಎಲ್ಲಿ, ಹೇಗೆ ಉಂಟಾಯಿತು? ಅದಕ್ಕೆ ಯಾವುದೊಂದು ಅಪಘಾತದ ಕಾರಣವಾಯಿತೇ, ಅಥವಾ ಆತ್ಮಹತ್ಯೆಯದಾಗಿದ್ದಿತೇ; ಅಥವಾ ಅದನ್ನು ಬೇರೆ ಯಾರಾದರೂ ಕೊಲೆಗೆಯ್ದರೇ ಇದರ ಇತ್ಯರ್ಥವನ್ನು ಇಂದು ಆ ಜ್ಯೂರಿಗಳು ಮಾಡಬೇಕಾಗಿತ್ತು.

ಆ ಜ್ಯೂರಿಯನ್ನು ಕೂಡಿಸಲಿಕ್ಕೆ ಡಾ. ಜಾಲಂದರನೂ ಡಿ. ಇ. ಬನ್ಸೀಧರನೂ ಮುಂದಾಳಾಗಿದ್ದರು. ಇಂದು ಚಂದುವು ತನ್ನ ಗುರುಗಳನ್ನು

ಮೋಟರಿನಲ್ಲಿ ಕೂರಿಸಿಕೊಂಡು ಸಾಗರ ಸರೋವರದ ಬಳಿಯ ತಮ್ಮ ದೊಡ್ಡ ತೋಟ ತೋರಿಸಲು ಹೋಗಿದ್ದನು. ಆತನು ಒಂದು ಪ್ರಹರದ ವರೆಗೂ ಮರಳಿ ಬರುವ ಸಂಭವವಿರಲಿಲ್ಲ. ಬಿಂಬೆಯಾದರೂ ತನ್ನ ಒಬ್ಬ ಗೆಳತಿಯ ಕಡೆಗೆ ಹೋಗಿದ್ದಳು. ಇಂಥ ನಿರ್ವೇಧ ಸಮಯವನ್ನು ಕಂಡೇ ಆ ಜ್ಯೂರಿಯನ್ನು ಕೂಡಿಸಲಾಗಿತ್ತು.

ಈ ಬೇತು ಆಯುತ ಕಾಲಕ್ಕೆ ಗೊತ್ತಾದರೂ ಮಾಸಾಹೇಬರಿಗೆ ಹೇಳಿದ ಕೂಡಲೆ ಅವರಿಗದು ಸಮ್ಮತವಾಯಿತು; ಯಾಕಂದರೆ, ಚಂದೂನ ಮನಃಸ್ಥಿತಿಯ ಬಗ್ಗೆ ಅವರು ಡಾ. ಜಾಲಂದರ ಹಾಗು ಬನ್ಸೀಧರರೊಡನೆ ನಡುನಡುವೆ ಚರ್ಚಿಸುತ್ತಿದ್ದರು. ಚಂದೂನಿಗೆ ದೋಷ ಕೊಡುವ ವಿಷಯದಲ್ಲಿ ಆ ಮೂವರದೂ ಒಮ್ಮತವಾಗುತ್ತಿದ್ದಿತು; ಮತ್ತು ಅವರಿಬ್ಬರೂ ಕೂಡಿ ಚಂದೂನನ್ನು ಮತ್ತೆ ದಾರಿಗೆ ತರುವ ವಿಷಯದಲ್ಲಿ ತಮಗೆ ಸಹಾಯ ಮಾಡುತ್ತಿರುವರೆಂಬ ಭರವಸೆಯು ಮಾಸಾಹೇಬರಿಗನಿಸುತ್ತಿತ್ತು.

ಈ ಬಗ್ಗೆ ಸರ ಗಂಗಾರಾಮರೆದುರು ಹೇಗೆ ಮಾತು ತೆಗೆಯಬೇಕೆಂಬದು ಮಾತ್ರ ಅವರೆಲ್ಲರಿಗೂ ಗಡಚೆನಿಸುತ್ತಿತ್ತು. ಚಂದೂನ ಕೃತ್ಯಗಳೆಲ್ಲ ಸರ ಸಾಹೇಬರಿಗೆ ಸೇರುತ್ತಿದ್ದವೆಂತಲ್ಲ; ಆದರೆ ಅವರು ಅವನನ್ನು ತಮ್ಮ ಭಾಗದ ದೇವರೆಂದೇ ತಿಳಿದದ್ದರಿಂದ, ಅವನು ಮಾಡಿದ್ದು ಮಾಡಲಿ; ನಾವು ಆತನಿಗೆ ಅಡ್ಡಿ ಮಾಡಬಾರದು; ಅವನನ್ನು ನೋಯ್ಯಿಸಬಾರದು; ಕಾಲಾಂತರದಲ್ಲಿ ಅವನ ಮನೋವೃತ್ತಿಯು ಬದಲಾಗುವ ಸಂಭವವಿದೆ, ಎಂಬ ವಿಚಾರ ಹಾಗು ಆಶೆಗಳಿಂದ ಸರ ಸಾಹೇಬರು ತಮ್ಮ ಅವಕೃಪೆಯನ್ನು ಚಂದುವಿಗೆಂದೂ ತೋರಗೊಟ್ಟಿರಲಿಲ್ಲ; ಅಲ್ಲದೆ ಅವರು ತಮ್ಮ ಹೆಂಡತಿಗೆ ಹೇಳುತ್ತಿದ್ದರೇನಂದರೆ:— 'ಎಲೇ, ನೀನವನಿಗೆ ಮನಸ್ಸಿಗೆ ನಡುವಂತೆ ಏನನ್ನೂ ಸಿಟ್ಟಿನಿಂದ ಅನ್ನಬೇಡ. ನಮ್ಮ ಚಂದುವು ಮೃದುಮನಸ್ಸಿನವನಿರುತ್ತಾನೆ. ಆತನ ಜೀವಾಳಕ್ಕೆ ನಮ್ಮೊಳಗಿನ ಯಾರದಾದರೂ ಮಾತಿನ ಮೊನೆ ನೆಟ್ಟಿತೆಂದರೆ, ಆತನ ಸ್ಥಿತಿಯು ಇದಕ್ಕೂ ಹೆಚ್ಚಿಗೆ ಕೆಟ್ಟೀತು. ಆತನು ಎಲ್ಲ ಬಗೆಯಿಂದ ನನ್ನನ್ನು ನಿರಾಶೆಗೊಳಿಸಿದ್ದರೂ, ಸ್ವಂತದ ಸತ್ಯಾನಾಶ ಮಾಡಿಕೊಂಡಿದ್ದರೂ ಆ ಬಗ್ಗೆ ಈಗ ಮಾಡತಕದ್ದೇನಿದೆ! ಆತನು ಮನೆಯಲ್ಲೇ ನಮ್ಮ ಸಹವಾಸದಲ್ಲಿ, ನಮ್ಮ ಕಣ್ಣೆದುರಿಗಾದರೂ ಇರುವನಲ್ಲವೇ? ಇಲ್ಲದಿದ್ದರೆ ವೈರಾಗ್ಯದಿಂದ ಮೈಗೆ ಬೂದಿ ಬಡಕೊಂಡು ತಾನೇ ಎಲ್ಲಿಯಾದರೂ ಹಿಮಾಲಯದ ಕಡೆಗೆ ಹೊರಟು ಹೋಗಿದ್ದರೆ ನಾವೇನು ಮಾಡಬೇಕಿತ್ತು? ಆದಕ್ಕಿಂತಲೂ ಗುರುವನ್ನು ಆಶ್ರಯಿಸಿ, ಮನೆ ಮಠವನ್ನಾಗಿ ಮಾಡುವುದರಲ್ಲೇ ಕೊನೆಗಂಡದ್ದು ನಮ್ಮ ಭಾಗ್ಯವಲ್ಲವೇನು?'

ಸರಸಾಹೇಬರು ಮತ್ತೂ ಹೇಳುತ್ತಿದ್ದರೇನಂದರೆ:—"ನಮ್ಮ ಚಂದುವನ್ನು ಈ ಜಂಜಾಟದಿಂದ ಹೊರಹೊರಡಿಸಲು ಯಾರಾದರೂ ನನಗೊಂದು ಹಂಚಿಕೆ ಹೇಳಿ ಕೊಟ್ಟರೆ, ನಾನು ಅದನ್ನು ಹೇಗಾದರೂ ಪೂರೈಸೇನು. ಅವರು ಹೇಳಿದ್ದನ್ನು ಕೊಟ್ಟೇನು; ಆದರೆ ಅಂಥ ಉಪಾಯವನ್ನು ಯಾರಾದರೂ ತಿಳಿಸುವವರೆಗೆ ಸುಮ್ಮನಿರದ ಹೊರತು ಬೇರೆ ಗತಿಯೇ ಇಲ್ಲದಾಗಿದೆ."

ಆದರೆ ಸರ ಸಾಹೇಬರನ್ನು ಚರ್ಚೆಗಾಗಿ ಸಮಕ್ಷ ಕರೆದು ಆ ಉಪಾಯ ತಿಳಿಸುವ ಸಮಯವೀಗ ಪ್ರಾಪ್ತವಾಗಿದೆ ಎಂಬದನ್ನರಿತು, ಡಾ ಜಾಲಂದರ ಹಾಗು ಬನ್ಸೀಧರರು ಆ ಮಾತನ್ನು ಮಾಸಾಹೇಬರೆದುರು ತೆಗೆದರು. ಅವರು ಅದನ್ನು ಸರಸಾಹೇಬರೆದುರು ತೆಗೆಯಲಿಕ್ಕೆ ಸಮ್ಮತಿಸಿದರು. ಆಗ ಅವರು ತಮ್ಮ ಗಂಡನನ್ನು ಕುರಿತು:—"ತಮ್ಮ ಸೂಚನೆಯನ್ನು ಮನ್ನಿಸಿ ನಾನಿದುವರೆಗೆ ಚಂದೂನ ಮನ ನೋಯುವಂತಹ ಯಾವ ಕೃತ್ಯವನ್ನೂ ಮಾಡಲಿಲ್ಲ; ಆದರೆ ನಾವಿನ್ನು ಹೀಗೆಯೇ ಸುಮ್ಮನಿದ್ದರೆ ಹೇಗೆ ನಡೆದೀತು? ಅವನ್ಹು ಹೇಗಾಯಿತು? ಮತ್ತು ಅದಕ್ಕೆ ಉಪಾಯವೇನು? ಎಂಬ ಬಗ್ಗೆ ಸ್ವಲ್ಪಾದರೂ ವಿಚಾರ ಮಾಡಬೇಡವೇ?"

ಅದಕ್ಕೆ ಸರಸಾಹೇಬರು:—"ಹಾಗೆ ವಿಚಾರ ಮಾಡಲಿಕ್ಕೆ ನಾನೆಂದು ಬೇಡವೆಂದಿದ್ದೇನೆ? ಆದರೆ ಚಂದುವು ತನ್ನ ಮನಸ್ಸಿನ ಗುಟ್ಟು ಕೊಡದಂತಾಗಿದ್ದಾನೆ. ಈ ಬಗ್ಗೆ ನನಗೆ ಸ್ವಂತಕ್ಕೆ ಏನೂ ಹೊಳೆಯುವದಿಲ್ಲ; ಮತ್ತು ಬೇರೆ ಯಾರೂ ಯಾವ ಉಪಾಯವನ್ನೂ ಸೂಚಿಸುವುದಿಲ್ಲ. ಅಂದಬಳಿಕ ಈ ಬಗ್ಗೆ ಮತ್ತೇನು ವಿಚಾರ ಮಾಡಬೇಕು?"

ಮಾಸಾಹೇಬರು—"ಇಂದು ಆ ಬಗ್ಗೆ ನನಗೊಂದು ಯೋಚನೆ ಹೊಳೆದಿದೆ. ಮತ್ತೂ........"

"ಮತ್ತೆ ಯಾರಿಗೆ?"

"ಡಾ. ಜಾಲಂದರ ಹಾಗು ನಮ್ಮ ಬನ್ಸೀ ಇವರಿಗೂ ಈ ವಿಚಾರವುಂಟಾಗಿದೆ. ಅವರು ನಿಮ್ಮೊಡನೆ ಈ ಬಗ್ಗೆ ಬಿಚ್ಚುಮನಸ್ಸಿನಿಂದ ಮಾತಾಡಬೇಕೆಂದಿರುತ್ತಾರೆ. ಅದಕ್ಕಾದರೂ ನಿಮ್ಮ ಸಿದ್ಧತೆಯಿದೆಯೇ?"

ಸರ ಸಾಹೇಬರು ನಕ್ಕು:—"ಇದೇನು ಕೇಳುವಿರಿ ಮಾಸಾಹೇಬ? ನಾನು ಇಂಥ ಮಾತಿಗೆಂದಾದರೂ ಹಿಂದೆಗೆಯುವೆನೇ?"

"ಒಳ್ಳೇದು. ಇನ್ನೊಂದು ಗಳಿಗೆಯಲ್ಲಿ ನಾವೆಲ್ಲರೂ ಒತ್ತಟ್ಟಿಗೆ ಕಲೆಯುವ ವ್ಯವಸ್ಥೆಯನ್ನು ನಾನು ಮಾಡುತ್ತೇನೆ; ಆದರೆ ನೀವು ಅವರಿಬ್ಬರ ಸಮಸ್ತ ಸಂಗತಿಯನ್ನು ಶಾಂತಚಿತ್ತದಿಂದ ಕೇಳಿಕೊಳ್ಳಬೇಕು. ನಿಮಗೆ ಅದು ಒಗ್ಗುವ

ದೋ ಇಲ್ಲವೋ ಎಂಬದನ್ನು ಆ ಮೇಲೆ ಹೇಳುವಿರಂತೆ. ಇದಕ್ಕೆ ನಿಮ್ಮ ಸಮ್ಮತಿ ಇದೆಯೋ?''

''ಒಪ್ಪುತ್ತೇನರೀ.''

ಈ ರೀತಿಯಾಗಿ ಸರಸಾಹೇಬರ ಒಪ್ಪಿಗೆ ದೊರೆತದ್ದರಿಂದ ಆ ಜ್ಯೂರಿಯು ಕೂಡಿದ್ದಿತು. ಅದರ ಮೆಂಬರರು ಸರಗಂಗಾರಾಮ, ಮಾಸಾಹೇಬ, ಡಾ. ಜಾಲಂದರ ಮತ್ತು ಬನ್ಸೀಧರ ಹೀಗೆ ನಾಲ್ವರಿದ್ದರು. ಎಲ್ಲರೂ ಒಳಗೆ ಕುಳಿತ ಬಳಿಕ ಆ ಕೋಣೆಯು ಕದವನ್ನಿಕ್ಕಿ ಒಳಗಿನಿಂದ ಚಿಲಕಹಾಕಿಕೊಳ್ಳಲಾಯಿತು; ಹಾಗು ನಾನು ಹೇಳಿದ ಹೊರತು ಯಾರಿಗೂ ಅಟ್ಟದ ಮೆಟ್ಟಿಲುಗಳ ಬಾಗಿಲ ತೆರೆಯಬೇಡಿರೆಂದು ಕಟ್ಟುನಿಟ್ಟಾಗಿ ತಿಳಿಸಿ, ಮಾಸಾಹೇಬರು ತಮ್ಮ ಒಬ್ಬ ಆಳನ್ನು ಅಲ್ಲಿ ಪಹರೆಗೆಂದೇ ಕೂಡ್ರಿಸಿದರು.

ಮೊಟ್ಟ ಮೊದಲು ಬನ್ಸೀಧರನೇ ಮಾತಾಡಲಿಕ್ಕೆ ಪ್ರಾರಂಭಿಸಿದನು. ಆತನು:—''ಸರಸಾಹೇಬ, ನಾವು ಇಂದು ಇಲ್ಲಿ ಕುಳಿತು ಏನು ವಿಚಾರ ಮಾಡ ಬೇಕಾಗಿದೆ ಎಂಬದನ್ನು ಮಾಸಾಹೇಬರು ತಮಗೆ ತಿಳಿಸಿರಲಿಕ್ಕೆ ಸಾಕು. ನಾನು ಈಗ ತಮಗೆ ತಿಳಿಸುವದಿಷ್ಟೇ, ಈ ಕೆಲಸದಲ್ಲಿ ನಾನು ಅವ್ಯಾಪಾರೇಷು ವ್ಯಾ ಪಾರ ನಡೆಸಿರುತ್ತೇನೆಂದು ತಾವು ತಿಳಿಯಕೂಡದು. ಚಂದೂನಿಗಾಗಿ ಹಾಗು ತಮಗಾಗಿ ನಾನು ಈ ಕೆಲಸದಲ್ಲಿ ಮನಸ್ಸು ಹಾಕಿರುವದೇನೋ ನಿಜವು; ಆದರೂ ನನ್ನ ಸರಕಾರೀ ಕೆಲಸದೊಳಗಿನದೊಂದು ಕೆಲಸವೆಂದೂ ನಾನು ಇದ ರಲ್ಲಿ ಲಕ್ಷ್ಯವಿರಿಸಲೇಬೇಕಾಗಿದೆ; ಮತ್ತು ಅದು ಹೇಗೆಂಬದನ್ನು ನಾನು ನಿಮಗೆ ಬೇಗನೆ ತಿಳಿಸಲಿರುವೆನು; ಆದರೆ ನಾವು ಈಗ ಇಲ್ಲಿ ಕಲೆತಿರುವುದು ಚಂದೂನ ಇತ್ತೀಚೆಗಿನ ಅತರ್ಕಿತ ವರ್ತನದ ವಿಚಾರ ಮಾಡಲಿಕ್ಕೆಂದು ಕಲೆತಿರುತ್ತೇವೆ. ಆ ವರ್ತನವು ಹೆಚ್ಚಾಗಿ ಸದೋಷವಿರುವದರಿಂದ ಅದರಿಂದ ಚಂದೂನ ಮನಸ್ಸಿ ನಲ್ಲಿ ಏನಾದರೂ ರೋಗಿಷ್ಠ ಬದಲಾವಣೆಯಾದ ಹೊರತು ಆಗಿಲ್ಲವೆಂಬದಕ್ಕೆ ತಾವು ಒಪ್ಪುವಿರಷ್ಟೇ?''

''ಚಂದೂನ ಮನಸ್ಸಿನಲ್ಲಿ ಏನಾದರೂ ಕೆಟ್ಟಿರಬೇಕೆಂಬದನ್ನು ನಾನು ಒಪ್ಪುತ್ತೇನೆ; ಆದರೆ ಆ ಬಗ್ಗೆ ಆತನಿಗೆ ಇಲ್ಲವೆ ಬೇರೆ ಯಾರೊಬ್ಬರಿಗೆ ಎಷ್ಟು ದೋಷ ಕೊಡಬೇಕೆಂಬುದನ್ನು ನಿಮ್ಮ ವಿಚಾರವನ್ನು ಸಂಪೂರ್ಣವಾಗಿ ಕೇಳಿ ಕೊಳ್ಳದ ಹೊರತು ನಾನು ಈಗಲೆ ನಿರ್ಧರಿಸುವಂತಿಲ್ಲ.''

''ಒಳ್ಳೇದು; ಆದರೆ ಈ ಬಗ್ಗೆ ಡಾಕ್ಟರರ ಅಭಿಪ್ರಾಯವೇನೆಂಬದನ್ನು ತಾವು ಮೊದಲು ಕೇಳಿಕೊಳ್ಳತಕ್ಕದ್ದು.''

ಆದಕ್ಕೆ ಸರ ಸಾಹೇಬರ ಒಪ್ಪಿಗೆ ದೊರೆತ ಮೇಲೆ ಡಾ. ಜಾಲಂದರನು:

"ನಾವು ಶಾಂತಚಿತ್ತದಿಂದ ಹಾಗು ಏನೇನು ಘಟಿಸಿತೋ ಅದನ್ನೆಲ್ಲ ಚೆನ್ನಾಗಿ ಜ್ಞಾಪಿಸಿಕೊಂಡು ವಿಚಾರ ಮಾಡೋಣ. ಎಲ್ಲಕ್ಕೂ ಮೊದಲು ಚಂದೂನ ಪ್ರಕೃತಿಯಲ್ಲಿ ಯಾವ ಕಾಲಕ್ಕೆ ಹೆಚ್ಚು-ಕಡಿಮೆಯಾಯಿತೆಂಬದನ್ನು ನೋಡೋಣ. ಮಾಸಾಹೇಬ, ಈ ಬಗ್ಗೆ ನಿಮಗೇನು ನೆನಪಿದೆ ಎಂಬುದನ್ನು ಮೊದಲು ಹೇಳಿರಿ ನೋಡೋಣ."

ಮಾಸಾಹೇಬ: —"ಚಂದುವು ಆಯ್. ಸಿ. ಎಸ್. ಪಾಸಾದ ತಂತಿಯು ಆ ಬುಧವಾರ ದಿವಸ ಬೆಳಗಿನ ಹತ್ತು ಗಂಟೆಗೆ ಬಂತು. ಆ ಮುಂದಿನ ರವಿವಾರ ದಿನದ ಸಂಜೆಯ ಮಾತೇ ಅಲ್ಲವೆ? ಅಂದು ಸಂಜೆಗೆ ಔತಣವಾಗುವುದು ಗೊತ್ತಾಗಿತ್ತು. ಅದರಲ್ಲಿ ನನಗೇನೂ ಮಾಡತಕ್ಕದ್ದಿರಲಿಲ್ಲ; ಆದರೆ ಸಹಜವಾಗಿ ಐದುಗಂಟೆಯ ಹೊತ್ತಿಗೆ ನಾನು ಬಿಂಬೆಗೆ ಹೇಳಿದ್ದೇನಂದರೆ, ಚಂದೂನ ಮೋಟರು ತಕ್ಕೊಂಡು ರಾಯಬಹಾದ್ದೂರರ ಮನೆಗೆ ಹೋಗು; ಹಾಗು ಶರಯೂಳ ಮುಂಗೈಗೆ ಮುತ್ತಿನ ಬಳೆಗಳು ಯಾವ ಅಳತೆಯವು ಬೇಕೆಂಬ ಬಗ್ಗೆ ಅಳತೆ ತಕ್ಕೊಂಡು ಬಾ; ಆದರೆ ಆಗ ಬಿಂಬೆ ತಿರುಗಿ ಬಂದು ಹೇಳಿದ್ದೇನಂದರೆ, 'ಅಣ್ಣಾನು ಹೋಗಬೇಡೆಂದನು. ಮೋಟರು ತನಗೇ ಬೇಕಾಗಿದೆಯಂತೆ' ಆತನ ಈ ನೆವವು ಸಟಿಯಾದುದು. ಅವನಿಗೆ ಶರಯೂಳ ಕೈ ಅಳತೆ ತರುವುದೇ ಬೇಕಿರಲಿಲ್ಲ. ಅದರಿಂದ ನಾನೇ ಹೋಗಿ ಆತನೊಡನೆ ಮಾತನಾಡಿದೆನು. ಆಗ ಆತನು ಸದ್ಯಕ್ಕೆ ನನ್ನ ಮದುವೆಯ ಯೋಚನೆ ಮಾಡಬೇಡಿರೆಂದು ಸ್ಪಷ್ಟವಾಗಿ ತಿಳಿಸಿದನು! ಆ ಕಾಲಕ್ಕೆ ಆತನು ವ್ಯಗ್ರನೂ ತ್ರಸ್ತನೂ ಆಗಿರುವಂತೆ ಕಂಡನು. ಅದರಿಂದ ನಾನು ಆಗ ಹೆಚ್ಚಿಗೇನೂ ಅನ್ನದೆ ಹಾಗೆಯೇ ಹಿಂದಿರುಗಿ ಬಂದೆನು. ಆ ಮೇಲೆ ಔತಣದ ಜನರು ಕಲೆಯ ಹತ್ತಿದರು. ಆ ಕೂಡಲೆ ನಾನು ನಡುಮನೆಯ ಬಾಗಿಲವನ್ನಿಕ್ಕಿಕೊಂಡು ಮನೆಯೊಳಗಿನ ಬೇರೆ ಕೆಲಸಗಳಿಗೆ ತೊಡಗಿದೆನು. ಮನೆಯಲ್ಲಿ ಅಂಥ ವಿದೇಶೀ ಪದ್ಧತಿಯ ಔತಣವಿದ್ದಿತೆಂದರೆ, ನಾನು ನಡುಮನೆಯ ಈಚೆಗೆ ಇಣುಕಿ ಕೂಡ ನೋಡುವುದಿಲ್ಲೆಂಬದು ನಿಮಗೆಲ್ಲ ಗೊತ್ತೇ ಇದೆ. ನನ್ನಿಂದ ಆ ಕಾಲದ ಆ ವಿಕಟಹಾಸ್ಯ-ಪ್ರಲಾಪಗಳನ್ನೂ ಆ ಮದ್ಯದ ಸೀಸೆಗಳ ಬೆಣೆ ಹಾರುವದನ್ನೂ ಕೇಳಲಿಕ್ಕಾಗುವದಿಲ್ಲ. ಔತಣದ ನಂತರ ರಾತ್ರಿಯಲ್ಲಿ ಚಂದೂನೊಡನೆ ಮಾತನಾಡುವ ಅವಕಾಶವೇ ಇರುವುದಿಲ್ಲ ಅಂದು ಅವನಲ್ಲಿಗೆ ಹೋಗಿ ಮಾತನಾಡುವದಕ್ಕೆ ನನಗೆ ಒಂದಿಷ್ಟು ನೆವವೂ ಇದ್ದಿತು. ಯಾಕಂದರೆ, ಚಂದೂನಿಗೆ ತಂಬಾಕದ ಹೊಗೆಯಿಂದ ಬವಳಿ ಬಂದಿದೆಯೆಂದು ಅದಾರೋ ಅಂದರು; ಆದರೆ ಹಾಗೆ ಹೇಳಿದವರೇ ಮತ್ತೆ ಅಂದರೇನಂದರೆ, "ಚಂದೂಲಾಲರು ಅಟ್ಟದ ಮೇಲೇರಿ ಹೋಗಿ ಮಲ

ಗಿದರು; ಹಾಗು ಅವರನ್ನು ಮಲಗಿಸಿ ಡಾಕ್ಟರ ಜಾಲಂದರರು ತಮ್ಮ ಮನೆಗೆ ಹೊರಟು ಹೋದರು.' ಅಂದ ಬಳಿಕ ಆಗ ನಾನೇಕೆ ಅಲ್ಲಿಗೆ ಆತನ ನಿದ್ದೆ ಕೆಡಿಸ ಲಿಕ್ಕೆ ಹೋಗಲಿ? ಮರುದಿನ ಬೆಳಿಗ್ಗೆ ಆತನು ದಿನದಂತೆ ನಮ್ಮೊಡನೆ ಚಹ ಕುಡಿದನು; ಆದರೆ ಅಂದು ಮಧ್ಯಾಹ್ನ ಮಾಲಿಕನ್ನನು ಆತನದೆಂದು ಒಂದು ಚಮತ್ಕಾರಿಕ ನಿರೂಪ ತಂದನು. ಬಳಿಕ ನಾವೇ ಭದ್ರೇಶ್ವರಕ್ಕೆ ಹೋದೆವು. ಅಲ್ಲಿ ಚಂದೂ ಮತ್ತು ಆ ಬೈರಾಗಿ ಇವರ ಗಂಟುಬಿದ್ದಿತ್ತು!"

ಡಾಕ್ಟರ ಜಾಲಂದರನು ಆಗ ಸರ ಸಾಹೇಬರ ಕಡೆಗೆ ಹೊರಳಿ "ತಾವು ತಮ್ಮ ನೆನಪನ್ನು ಹೇಳಿರಿ ನೋಡೋಣ."

ಸರ ಸಾಹೇಬರು "ಅಂದಿನ ಔತಣಕ್ಕೆ ಜನರು ಕಲೆಯುತ್ತುವವರೆಗೆ ನಮ್ಮ ಚಂದೂ ಒಳ್ಳೇ ಸಂತೋಷದಲ್ಲಿದ್ದ. ವಿಲಾಯತಿಯಿಂದ ಬಂದ ಟಪಾಲನ್ನು ಆತನೇ ತಕ್ಕೊಂಡದ್ದನ್ನು ನಾನು ಸ್ವತಃ ನೋಡಿದೆನು. ಬಳಿಕ ನಾನು ಹೊರಗೆ ಹೋದೆನು; ಯಾಕಂದರೆ ಆ ಸರಿಜೋಡಿಯು ಗಳೆಯರ ಮೋಜಿನ ಔತಣವದು! ನನ್ನಂಥ ವಯಸ್ಸಾದವನು ಅವರೆಲ್ಲರಲ್ಲಿ ನಾನೊಬ್ಬನೇ. ಅದರಿಂದ ಕಮಿಶನರ ಸಾಹೇಬರ ಭೆಟ್ಟಿ ಮತ್ತು ಭೋಜನಗಳ ನೆವ ಮಾಡಿ ನಾನು ಅಲ್ಲಿಂದ ಹೊರಹೊರಟೆನು. ರಾತ್ರಿಯಲ್ಲಿ ಚಂದುವಿಗೆ ಸಿಗರೇಟಿನ ಹೊಗೆಯಿಂದ ತುಸ ಒವಳಿ ಬಂದಿತ್ತೆಂಬದು ಮರುದಿನ ಬೆಳಿಗ್ಗೆ ತಿಳಿಯಿತು; ಆದರೆ ಬೆಳಿಗ್ಗೆ ಎದ್ದು ನಾನು ಆತನ ಪ್ರಕೃತಿಯ ವಿಚಾರಣೆಗೆಂದು ಹೊರಡುವ ಮೊದಲೇ ಆತನು ದಿನದಂತೆ ಬೆಳಗಿನ ಚಹದ ಸ್ಥಳಕ್ಕೆ ತಾನಾಗಿಯೇ ಹಾಜರಾಗಿದ್ದನು. ಬಳಿಕ ಆತನು ಭದ್ರೇಶ್ವರಕ್ಕೆ ಹೋದ. ಅಲ್ಲಿಂದ ನಮಗೆ ಹೇಳಿ ಕಳಿಸಿದ. ಆ ಮೇಲೆ ನಾವೂ ಅಲ್ಲಿಗೆ ಹೋದೆವು; ಮತ್ತು ಅಲ್ಲಿ ನೋಡುತ್ತಿರಲು, ಎಲ್ಲವೂ ವಿಪರೀತವಾಗಿಬಿಟ್ಟಿತ್ತು! ಆದರೆ ಆತನ ಮನಸ್ಸು ಕೆಡಲಿಕ್ಕುಂಟಾದ ಕಾರಣವು ದೇವರಾಣೆಯಾಗಿಯೂ ಇದುವರೆಗೆ ನನಗೆ ಇದಕ್ಕೂ ಹೆಚ್ಚಿಗೆ ಏನೂ ತಿಳಿದಿರುವದಿಲ್ಲ."

"ಸಿಗರೇಟಿನ ಹೊಗೆಯಲ್ಲ; ವಿಲಾಯತೀ ತಂತಿ!" ಜಾಲಂದರನಂದನು.

"ವಿಲಾಯತೀ ತಂತಿಯೆ? ಮತ್ತು ಅದೇತರದು? ಯಾರದು? ಪರೀಕ್ಷೆ ಪಾಸಾದ ತಂತಿಯಂತೂ ಆ ಬುಧವಾರವೇ ಬಂದಿತ್ತು!"

"ಅಹುದು; ಆದರೆ ಅಂದು ಸಂಜೆಯ ಔತಣದ ಕಾಲಕ್ಕೆ ಪ್ರತ್ಯಕ್ಷ ಊಟಕ್ಕೆ ಹೋಗಿ ಕೂಡ್ರುವ ಸಮಯದಲ್ಲೇ ಆ ತಂತಿ ಬಂದಿತು. ಅದು ನಿಮಗೆಲ್ಲಿ ಗೊತ್ತಿದೆ? ಚಂದುವಿಗೆ ಬವಳಿ ಬರುತ್ತಿದೆ ಎಂಬದನ್ನು ಕಂಡು ನಾನೇ ಆತನೆಡೆಗೆ ಧಾವಿಸಿ ಹೋಗಿ ಅವನನ್ನು ಸಾವರಿಸಿ ಹಿಡಿದೆನು. ಇಷ್ಟರಲ್ಲಿ

ಆ ತಂತಿಯ ಕಾಗದವು ನನಗೆ ಕಾಣಿಸಬಾರದೆಂದು ಚಂದುವು ಅದನ್ನು ಮುದುಡಿ ಜೇಬಿನಲ್ಲಿರಿಸಿದನು; ಮತ್ತು ಅದರ ಮುಂದಿನ ಸಂಗತಿಯನ್ನು ಡಿ. ಇ. ಬನ್ಸೀಧರರೇ ತಿಳಿಸುವರು ''

ಬನ್ಸೀಧರ:—''ಸರಸಾಹೇಬ, ಮಾಸಾಹೇಬ, ಯಾವುದೊಂದು ಸಂಗತಿಯು ಕಾಣಿಸುವಂತೆಯೇ ಇರುತ್ತಿರುವದಿಲ್ಲ. ಈ ತಂತಿಯ ಸಂಗತಿಯನ್ನು ಡಾಕ್ಟರರು ನನಗೆ ಹೇಳಿದರು. ಇವರಿಗಾದರೂ ಆ ತಂತಿಯ ನಿಜ ಸಂಗತಿ ಗೊತ್ತಿರಲಿಲ್ಲ; ಆದರೆ ಅವರ ಅನುಮಾನವು ಮಾತ್ರ ನಿಜವಾಯಿತು. ನಾನು ಮರುದಿನ ಬೆಳಿಗ್ಗೆ ತಂತೀ ಕಚೇರಿಗೆ ಹೋಗಿ ಅವರ ನಕಲು ತಕ್ಕೊಂಡು ಬಂದೆನು. ಇದೋ ನೋಡಿರಿ, ಆ ನಕಲು. ಓದಿ ಹೇಳುವೆನು ಅದರೊಳಗಿನ ಸಂಗತಿಯನ್ನು.''

ಸರ ಸಾಹೇಬ-ಮಾಸಾಹೇಬರಿಬ್ಬರೂ ಅದನ್ನು ಕೇಳಲಿಕ್ಕೆ ಉತ್ಸುಕತೆಯಿಂದ ಮುಂದುವರೆದರು. ಆಗ ಬನ್ಸೀಧರನು ಅದನ್ನು ಓದತೊಡಗಿದನು: "ಚಂದೂಲಾಲ, ನಿಮಗೆ ತಿಳಿಸಲಿಕ್ಕೆ ಖೇದವೆನಿಸುವದೇನಂದರೆ, ಮೇರೀ ವೊಡಹಾಊಸಳು ನಿನ್ನೆ ನಸುಕಿನಲ್ಲಿ ಮೂರೂವರೆ ಗಂಟೆಗೆ ತೀರಿಕೊಂಡಳು. ಇಂದು ಬೆಳಿಗ್ಗೆ ಅವಳನ್ನು ಸ್ಮಶಾನದಲ್ಲಿ ಹುಗಿಯಲಾಯಿತು. ಅವಳಿಗೆ ಹೃದಯವಿಕಾರದಿಂದ ಮರಣವೊದಗಿತು. ಕೊನೆಯವರೆಗೂ ಅವಳು ನಿಮ್ಮನ್ನು ಸ್ಮರಿಸುತ್ತಿದ್ದಳು; ನಿಮ್ಮ ಹೆಸರನ್ನು ಜಪಿಸುತ್ತಿದ್ದಳು! ಸರ ಸಾಹೇಬ, ಈ ತಂತಿಯ ಅರ್ಥವೇನೆಂಬದನ್ನು ನೀವು ಹೇಳಬಲ್ಲಿರಾ?''

ಮಾಸಾಹೇಬರು ಪತಿಗೆ ಅನ್ನುತ್ತಾರೆ:—''ನೋಡಿದಿರಾ, ನಿಮ್ಮ ಚಿರಂಜೀವನ ಆಟಗಳನ್ನು! ನೀವು ಕಿಮಾನಪಕ್ಷ ೫೦-೬೦ ಸಾವಿರ ರೂ. ಖರ್ಚು ಮಾಡಿ ಅವನನ್ನು ವಿಲಾಯತಿಯಲ್ಲಿಟ್ಟಿರಿ. ಆತನು ಆಯ್. ಸಿ. ಎಸ್. ಪರೀಕ್ಷೆ ಪಾಸಾದದ್ದೇನೂ ವಿಶೇಷವಲ್ಲ; ಆದರೆ ಅವಳಾರೋ ಮೋಡಿ ಹೆಂಗಸು ಸತ್ತದ್ದರಿಂದ ಅವಳೊಡನೆ ಆಗಬೇಕಾಗಿದ್ದ ನಿಮ್ಮ ಮಗನ ಲಗ್ನದ ಪರೀಕ್ಷೆ ನಾಪಾಸಾಯಿತೆಂಬ ದುಃಖದಿಂದ ಮಾತ್ರ ಆತನು ಸರ್ವಸಂಗಪರಿತ್ಯಾಗ ಮಾಡಿ ಬೈರಾಗಿಯಾಗಲು ಸಿದ್ಧನಾದನು! ಅಂತೆಯೇ ನಾನು ಮೊದಲಿಗೇ ಚಂದುವನ್ನು ವಿಲಾಯತಿಗೆ ಕಳಿಸಬೇಡಿರೆಂದು ನಿಮಗೆ ಕೈಯಲ್ಲಿ ಕಡ್ಡಿ ಕೊಟ್ಟು ಹೇಳಿದೆನು. ನಮಗೆ ಆ ಸುಡುಗಾಡು ಐ. ಸಿ. ಎಸ್ ಏತಕ್ಕೆ ಬೇಕು; ಮನೆಯ ಮಗನನ್ನು ಹೊರಗೆ ಹಾಕಲಿಕ್ಕೆ?''

"ಒಳ್ಳೇದು. ಮಾಸಾಹೇಬರು ಈಗ ಎಷ್ಟೆಂದರೂ ಕಡಿಮೆಯೇ ಎನ್ನಿ, ಆದರೇನೋ ಬನ್ಸೀಧರಾ, ಆ ತಂತಿಗೂ ಮತ್ತು ಗುರುವೆಂದು ಮನೆಗೆ ಕರೆತಂದ

ಆ ಬೈರಾಗಿಗೂ ಸಂಬಂಧವೇನು?"

"ಸಂಭವವಿಷ್ಟೇ, ಆ ಬುಧವಾರ ಬೆಳಿಗ್ಗೆ ಚಂದುವು ಕೊಂದಿದ್ದ ಹಕ್ಕಿಯ ಬಗ್ಗೆ ಆ ಬೈರಾಗಿಯು ಆತನಿಗೆ ಶಪಿಸಿದ್ದನು; ಮತ್ತು ಆ ಶಾಪವು ಈ ತಂತ್ರಯಿಂದ ಆ ಔತಣದ ದಿನ ಸಂಜೆಯ ಕಾಲಕ್ಕೆ ಫಲಿಸಿದ್ದೇ ಯೋಗಾಯೋಗವು!"

"ಆದರೆ ಸತ್ತಿದ್ದ ಆ ವಿಲಾಯತೀ ಮೋಡಿ ಹೆಂಗುಸನ್ನು ಈ ಬೈರಾಗಿಯು ಈಗ ಮತ್ತೆ ಜೀವಂತಗೊಳಿಸಿ ಚಂದುವಿಗೆ ಕೊಡುವನೇನು? ಮತ್ತು ಆ ಚಮತ್ಕಾರವು ಘಟಿಸುವ ವರೆಗೆ ಈ ಬೈರಾಗಿಗಳ ಕಾಟವು ನಮ್ಮೀ ವಾಡೆಯಲ್ಲಿರತಕ್ಕದ್ದೇನು?" ಮಾಸಾಹೇಬರು ಒಳ್ಳೇ ಕಳವಳದಿಂದ ಕೇಳಿದರು.

"ಮಾಸಾಹೇಬ, ನಿಮಗದರ ಚಿಂತೆ ಬೇಡ. ಆ ಬೈರಾಗಿಗಳನ್ನು ನಿಮ್ಮ ವಾಡೆಯಿಂದ ಹೊರಹೊರಡಿಸಲಿಕ್ಕೆ ನನಗೆ ಚಂದುವಿನದೇ ಏಕೆ, ನಿಮ್ಮಗಳದಾರದೂ ಸಹಾಯ ಬೇಕಿಲ್ಲ. ಆ ಕೆಲಸವನ್ನು ನಾನು ನನ್ನ ಸ್ವತಂತ್ರ ಅಧಿಕಾರದಿಂದ ಹೇಗೆ ಮಾಡುವೆನೆಂಬದನ್ನು ಇಲ್ಲಿಂದಿಲ್ಲೇ ನಿಮಗೆ ತೀವ್ರವೇ ತಿಳಿಸೇನು; ಆದರೆ ಆ ಕೆಲಸದಲ್ಲಿ ನನ್ನೊಡನೆ ಸರ ಸಾಹೇಬರು ಮಾತ್ರ ಮನೆಯ ಮಾಲಕತನವನ್ನು ಒಂದಿಷ್ಟು ಮೆರಿಸಲಿಕ್ಕೆ ಸಿದ್ಧರಾಗಬೇಕು."

"ಅಂದರೆ ಈ ಬೈರಾಗಿಗಳ ಹೇಳ-ಕೇಳುವುದರಿಂದಲೇ ಚಂದುವು ತನ್ನ ಆಯ್. ಸಿ. ಎಸ್ಸಿಗೆ ರಾಜೀನಾಮೆ ಕೊಡಲಿಕ್ಕೆ ಸಿದ್ಧನಾದನೇ? ಅವರ ಉಪಟಳದಿಂದಲೇ ಆತನು ಆಜನ್ಮ ಬ್ರಹ್ಮಚರ್ಯದಿಂದಿರುವ ಶಪಥಮಾಡಿದನೆ?"

"ನಿಜವಾಗಿ ಹೇಳುವದಾದರೆ ಅದಾವುದನ್ನೂ ಆ ಬೈರಾಗಿಗಳು ಅರಿಯರು. ಅವೆಲ್ಲ ಚಂದೂನ ಹೇಡಿ ಮನಸ್ಸಿನ ಪ್ರತಾಪವು! ಆದರೆ ಆ ಬೈರಾಗಿಗಳು ಇಲ್ಲಿಂದ ಹೊರ ಹೊರಡದ ಹೊರತು ಚಂದುವನ್ನು ಹಾದಿಗೆ ತರುವ ಪ್ರಯತ್ನಗಳು ಯಶಸ್ವೀಯಾಗಲಾರವು."

"ಆದರೆ ಅವಕ್ಕೆ ಚಂದೂನ ಖುಷಿಯ ಸಮ್ಮತಿ ಹೇಗೆ ದೊರೆತೀತು?" ಎಂದು ಸರ ಸಾಹೇಬರು ಕೇಳಲು,

"ಅದನ್ನು ಈಗಲೇ ಇಲ್ಲಿ ಹೇಳಲಾಗಲಿಕ್ಕಿಲ್ಲ; ಆದರೆ ಕೆಲವು ದಿನಗಳಲ್ಲೇ ಮುದ್ದೇಮಾಲಿನೊಡನೆ ಗೊತ್ತಾದೀತು. ಈ ಬೈರಾಗಿಗಳು ತಮ್ಮ ಕೃತಿಗಳಿಂದಲೇ ಸಾಯತಕ್ಕವರಿದ್ದಾರೆ; ಮತ್ತು ಆ ಬಗೆಯನ್ನು ಚಂದುವು ಕಣ್ಣಾರೆ ಕಂಡನೆಂದರೆ, ಈ ಬೈರಾಗಿಗಳ ಸ್ಥಳಾಂತರಕ್ಕೆ ಆತನು ತಾನಾಗಿಯೇ ಸಮ್ಮತಿಯಿತ್ತಾನಿಷ್ಟೇ ಅಲ್ಲ, ಇವರನ್ನು ಹೊರಗೆ ದಬ್ಬಲಿಕ್ಕೂ ನೆರವಾದಾನು."

"ಹಾಗಾದರೆ ಒಟ್ಟಿನಲ್ಲಿ ಚಂದುವು ಪುನಃ ದಾರಿಗೆ ಬಂದಾನೆಂಬ ಬಗ್ಗೆ

ನಿಮಗಿಬ್ಬರಿಗೂ ಆಶೆದೋರುವದೆಂದೆನ್ನಿ" ಮಾಸಾಹೇಬರು ಕಕ್ಕುಲಾತಿಯಿಂದ ಕೇಳಿದರು.

ಡಾ. ಜಾಲಂಧರನು:—"ಹೀಗಾಗುವ ಸಂಭವವು ಹೆಚ್ಚಾಗಿಯೇ ಇದೆ; ಆದರೆ ಇಲ್ಲಿ ಆ ಸಂಭವವು ಪ್ರತ್ಯಕ್ಷ ಉಡಲಲ್ಲಿ ಬಿದ್ದಿತೋ ಇಲ್ಲವೋ ಎಂಬದು ಇನ್ನು ಮುಂದೆ ಕೆಲ ಸಂಗತಿಗಳು ಕೆಲ ವಿಶಿಷ್ಟ ಬಗೆಯಿಂದ ಫಲಿಸುವದನ್ನವಲಂಬಿಸೀತು."

ಸರ ಗಂಗಾರಾಮರು-"ಭಲೆ! ಡಾಕ್ಟರಸಾಹೇಬ, ನಿಮ್ಮ ಈ ಚಂದೂನ ಮಾನಸಿಕ ರೋಗದ ನಿದಾನವು ಯಾವನೊಬ್ಬ ದರ್ಬಾರೀ ಜ್ಯೋತಿಷ್ಯನ ಭವಿಷ್ಯದಂತಿದೆಯೆನ್ನಬೇಕು."

"ಸರಸಾಹೇಬ, ಅದು ಹೇಗೆ? ಹೇಳಿರಿ ನೋಡೋಣ."

"ಅದು ಹೀಗೆ: ಸಂಭವವು ನಿಜವೆಂದು ಎನಿಸಿ ಅಸಂಭವವು ಮನಗಂಡರೆ ಮಾತ್ರ ನೀವು ಭವಿಷ್ಯವಾದಿಗಳೆಂದು ನಿಶ್ಚಯವಾದೀತು! ಆದರೆ ಸಂಭವವೇ ಸುಳ್ಳಾದರೆ ಅದರ ದೋಷವು ಬೇರೆ ಕೆಲ ಸಂಗತಿ ಘಟಿಸುವದರ ಮೇಲೆ ಹೋಗುವದು! ಅಂದರೆ ಮುಣುಗಿದರೆ ಕಪ್ಪೆ; ಹಾಗು ಹಾರಿದರೆ ಕಾಗೆ! ರೋಗವು ಗುಣವಾದರೆ ತನ್ನ ಔಷಧಿಯಿಂದ; ಗುಣವಾಗದೆ ಸತ್ತರೆ ರೋಗಿಯ ಕುಪಥ್ಯದಿಂದ! ಎಂಬಂತೆ."

ಜಾಲಂದರ:—"ಹಾಗಾದರೆ ನಾನೀಗ ಎಲ್ಲವನ್ನೂ ಬಿಚ್ಚಿಯೇ ತಿಳಿಸುತ್ತೇನೆ; ಆದರೆ ನಿಮಗದನ್ನು ಕೇಳಿಕೊಳ್ಳಲಿಕ್ಕೆ ಸಮಯವು ಮಾತ್ರ ಇರಬೇಕು. ಯಾಕಂದರೆ, ಚಂದೂನ ಮನಸ್ಸಿಗೆ ಆಘಾತವಾದ ಆ ದಿನದಿಂದ ಈ ಅಘಟಿತಘಟನೆಯ ಬಗ್ಗೆ ನಾನು ಹೆಚ್ಚಾಗಿ ವಿಚಾರಮಾಡಹತ್ತಿದೆನು. ಚಂದುವು ನನ್ನ ಬಾಲ್ಯ ಸ್ನೇಹಿತನೆಂದು ನಾನು ಅವನ ಪ್ರೀತಿಗಾಗಿ ಈ ವಿಚಾರ ಮಾಡಿದ್ದಂತೂ ಸರಿಯೇ; ಆದರೆ ಜೀವನಶಾಸ್ತ್ರ-ಮಾನಸಶಾಸ್ತ್ರಗಳಭ್ಯಾಸ ಎಂಬ ಉಭಯದೃಷ್ಟಿಯಿಂದಲೂ ನಾನಾ ವಿಚಾರ ಮಾಡಿರುತ್ತೇನೆ."

ಸರ ಗಂಗಾರಾಮರು ನಕ್ಕು:-"ಆ ಎರಡೂ ಶಾಸ್ತ್ರಗಳ ಡಬಲ್ ಗುಂಡು ಡಾಕ್ಟರಿಯ ಒಂಟಿ ನಲಿಕೆಯಲ್ಲಿ ಹೇಗೆ ಹಿಡಿಯುವದಪ್ಪಾ!"

ಮಾಸಾಹೇಬ:—"ಡಾಕ್ಟರಸಾಹೇಬ, ನಿಮ್ಮ ಶಾಸ್ತ್ರದ ಸಂತೆಯ ಮಾತುಗಳು ನನಗೆ ತಿಳಿಯುವದಿಲ್ಲ; ಆದರೆ ಇದರೊಳಗಿಂದ ಕೊನೆಗೆ ಚಂದೂನ ರೋಗವು ಗುಣವಾಗಲಿಕ್ಕೆ ಯಾವ ಮಾತು ಹೊರಬೀಳುವದೆಂಬದನ್ನು ನೋಡುವ ಸಲುವಾಗೆಂದೇ ನಾನು ನಿಮ್ಮೀ ಸಂಭಾಷಣ ಕೇಳುತ್ತ ಕೂಡ್ರ

ತ್ತಿರುವೆನು. ಈಗ ನನಗಾದರೂ ಬೇರೆ ಯಾವ ಕೆಲಸವೂ ಇಲ್ಲ."

"ಮಾಸಾಹೇಬ, ನೀವೂ ತುಸ ಕೇಳಿಕೊಳ್ಳಿರಿ. ಕೇಳಿಕೊಂಡರೆ ಅದೇಕೆ ತಿಳಿಯಲಿಕ್ಕಿಲ್ಲ? ಶಾಸ್ತ್ರವೆಂದರೆ ಅದೇನೂ ಅಷ್ಟು ಗೂಢವಿರುವದಿಲ್ಲ. ಜೀವನ ಶಾಸ್ತ್ರ ಮತ್ತು ಮಾನಸಶಾಸ್ತ್ರ ಇವುಗಳ ಸಂಬಂಧವು ಹೇಗಿರುತ್ತದೆಂಬದನ್ನು ನಾನು ತೋರಿಸಿಕೊಡುತ್ತೇನೆ ನೋಡಿರಿ. ನಾವು ಆ ಶಾಸ್ತ್ರಗಳ ದಡಚಾದ ಹೆಸರುಗಳನ್ನು ಬಿಟ್ಟುಬಿಡೋಣ; ಆದರೆ ಶರೀರ ಮತ್ತು ಮನಸ್ಸು ಇವೆರಡೂ ಒಂದೇ ಆಗಿರದಿದ್ದರೂ ಒಂದರ ಪರಿಣಾಮವು ಇನ್ನೊಂದರ ಮೇಲಾಗುತ ದೆಂಬದು ನಿಮಗೆ ಒಪ್ಪಿಗೆಯಿದೆಯೋ ಇಲ್ಲವೊ?"

ಮಾಸಾಹೇಬ: "ಅದು ನನಗೆ ತಿಳಿಯುತ್ತದೆ. ಹಟಮಾರಿ ಹುಡುಗ ನನ್ನು ಉಪವಾಸ ಕೆಡವಿದರೆ ಆತನ ಹಟವು ಹೋಗುತ್ತದೆ; ಆತನ ಮನಸ್ಸು ದಾರಿಗೆ ಬರುತ್ತದೆ. ಅದೇ ಹುಡುಗನ ಮನಸ್ಸು ಆಟದಲ್ಲಿ ತೊಡಗಿತೆಂದರೆ ಅವನು ಹಸಿವೆ-ನೀರಡಿಕೆಗಳನ್ನು ಕೂಡ ಮರೆಯುತ್ತಾನೆಂಬದು ನಿಜವಷ್ಟೇ?"

"ಮಾಸಾಹೇಬ, ನೀವು ಒಳ್ಳೇ ಸಮಂಜಸ ಉದಾಹರಣೆ ಕೊಟ್ಟಿರಿ. ಶರೀರದ ಹಾಗು ಮನಸ್ಸಿನ ಸಂಬಂಧವು ಹೇಗೆ ಉಂಟಾಗುವುದೋ ಹಾಗೆ ಯೇ ಮನಸ್ಸಿನ ಯಾವ ಭಿನ್ನ ಭಿನ್ನ ಗುಣಧರ್ಮಗಳಿರುವವೋ ಅವುಗಳ ಸಂಬಂಧವು ಒಂದಕ್ಕೊಂದು ಉಂಟಾಗುವವು."

ಸರ ಗಂಗಾರಾಮರು ಗಂಡಸಾಗಿದ್ದರೂ ಅಡಮುಟ್ಟ ಅಶಿಕ್ಷಿತರೇ! ಅದ ರಿಂದ ಅವರು 'ಡಾಕ್ಟರ, ಮನಸ್ಸಿನ ಗುಣಧರ್ಮವೆನ್ನುವಿರಲ್ಲ! ಅವು ಯಾವವು?'

"ಗುಣಧರ್ಮಗಳೆಂದರೆ ಮನುಷ್ಯನು ಸಾಮಾನ್ಯವಾಗಿ ಬುದ್ಧಿಗೆ ಚಾಲನೆ ಕೊಡುವದು, ತರ್ಕಮಾಡುವುದು; ಅನುಮಾನ ತಾಳುವುದು! ಇತ್ಯಾದಿ."

ಬನ್ಸೀಧರ:—"ನಿಜವು. ನಮ್ಮ ಪೋಲೀಸ ಕೆಲಸದ ಅನುಭವದಲ್ಲಂತೂ ನಾವು ಇದನ್ನೇ ಮಾಡುತ್ತೇವೆ. ಕೇವಲ ಬುದ್ಧಿವಂತ ಮನುಷ್ಯನಂತೆ ವರ್ತಿ ಸುತ್ತೇವೆ ಮನುಷ್ಯನು ವಿಚಾರವುಳ್ಳ ಪ್ರಾಣಿಯಾಗಿದ್ದಾನೆ. ಬುದ್ಧಿಪ್ರಧಾನ ನಾಗಿದ್ದಾನೆ, ಎಂಬ ಮಾನವನ ವ್ಯಾಖ್ಯೆಯು ದಿಟವಾಗಿರುವುದು."

"ಇನ್ಸಪೆಕ್ಟರ ಸಾಹೇಬ, ನಿಜ." ಜಾಲಂದರ ಹೇಳುತ್ತಾನೆ:—"ನಿಮ್ಮ ಪೋಲೀಸ ಜನರಂತೆಯೇ ನಮ್ಮ ಡಾಕ್ಟರ ಜನರಾದರೂ ಬುದ್ಧಿಗೆ ಪ್ರಾಮಾಣ್ಯ ವಿತ್ತು ರೋಗದ ನಿದಾನ ಹಾಗು ಔಷಧ ಯೋಜನೆಗಳನ್ನು ಮಾಡಬೇಕಾಗು ತ್ತದೆ; ಆದರೆ........?"

"ಹಾಗಾದರೆ ನೀವು ಏನನ್ನು ತ್ಯಜಿಸುವಿರಿ?" ಬನ್ಸೀಧರನು ನಡುವೇ ಪ್ರಶ್ನೆ ಮಾಡಿದನು.

"ನಾವು ನಮ್ಮ ಮನಸ್ಸಿನ ಮೇಲೆ ಭಾವನೆಯ ವರ್ಚಸ್ಸವುಂಟಾಗದಂತೆ ನೋಡಿಕೊಳ್ಳುತ್ತೇವೆ. ಬೇರೆ ರೋಗಿಗಳಿಗಿಂತ ಮನೆಯ ಮಗನ ಮೇಲೆ ಡಾಕ್ಟರನ ಪ್ರೇಮವು ಹೆಚ್ಚಾಗಿರುತ್ತದೆ; ಆದರೆ ರೋಗ ನಿದಾನ ಮತ್ತು ಔಷಧೋಪಚಾರ ಮಾಡುವಾಗ ನಾವು ಆ ಪ್ರೇಮವನ್ನು ಅಡ್ಡ ಬರಲು ಬಿಡುವುದಿಲ್ಲ; ಇಲ್ಲವೆ ಆದರಿಂದ ಔಷಧ, ಅನುಪಾನ ಬರೆದು ಕೊಡಲಿಕ್ಕೆ ಹೆಚ್ಚುಕಡಿಮೆ ಮಾಡುವದಿಲ್ಲ; ಆದರೆ ಬನ್ಸೀಧರಸಾಹೇಬ, ನಿಮ್ಮ ಪೋಲೀಸ ತಪಾಸಣೆಯ ಕಾಲಕ್ಕೆ ನೀವು ಸ್ವತಃ ವಿಕಾರವಶವಾಗದಿದ್ದರೂ ನಿಮ್ಮ ತಪಾಸಣೆಯಲ್ಲಿ ಯಾವ ಅಪರಾಧಿಗಳು ಇಲ್ಲವೆ ಬೇರೆ ಜನರು ಬಂದಾರೋ ಅವರೆಲ್ಲ ಕೇವಲ ಬುದ್ಧಿಗೆ ಚಾಲನೆ ಕೊಟ್ಟೇ, ತರ್ಕಮಾಡಿಯೇ, ಅನುಮಾನತಾಳಿಯೇ ನಡೆಯುವರೆಂದು ನಿಮಗೆ ತೋರಿಬರುವದೇನು?"

"ಛೇ ಛೇ! ಆ ಮಾತೇ ಎತ್ತಬೇಡಿರಿ! ಮನುಷ್ಯನು ಭಾವನಾವಶನಾಗದೆ ಕೇವಲ ಬುದ್ಧಿಪ್ರಾಮಾಣ್ಯನೆಂದು ನಡೆದರೆ, ನಮ್ಮ ಪೋಲೀಸರ ಕೆಲಸವೂ, ಲೋಕದೊಳಗಿನ ಗುನ್ಹೆ-ಅಪರಾಧಗಳೂ ಅರ್ಧಕ್ಕರ್ಧ ಕಡಿಮೆಯಾದಾವು"

"ಹಾಗಾದರೆ ಮನುಷ್ಯನು ತನ್ನ ಬುದ್ಧಿಯ ಉಪಯೋಗವನ್ನೇ ಮಾಡುವದಿಲ್ಲೆಂದು ನೀವು ಹೇಳುತ್ತಿರುವಿರಾ?"

"ಛೇ! ಹಾಗೂ ಇಲ್ಲ. ಆತನು ಬುದ್ಧಿಯನ್ನುಪಯೋಗಿಸುವನು; ಆದರೆ ಮೊಟ್ಟ ಮೊದಲು ಭಾವನಾವಶನಾಗಿ ಬಳಿಕ ಏನು ಮಾಡುವುದು, ಏನು ಸಾಧಿಸುವದು, ಏನು ತ್ಯಜಿಸುವುದು ಮುಂತಾದ್ದನ್ನು ನಿಶ್ಚಯಿಸುವನು. ನಂತರ ತನ್ನ ಬುದ್ಧಿಯನ್ನು ಆ ಧ್ಯೇಯಸಾಧನೆಗಾಗಿ ಖರ್ಚು ಮಾಡುವನು."

"ನಮ್ಮ ವೈದ್ಯಕ ಶಾಸ್ತ್ರದಲ್ಲಿ ಮುಖ್ಯವಾಗಿ ಶರೀರದ್ದೇ ಸಂಬಂಧವುಂಟಾಗುವದು. ಆದರಿಂದ ರೋಗದ ಚಿಕಿತ್ಸೆಯನ್ನು ನಾವು ಮಾಡಹತ್ತಿದೆವೆಂದರೆ, ಮೊದಲು ಶರೀರದ ಮಾರ್ಗದಿಂದಲೇ ನಾವು ಚಿಕಿತ್ಸೆ ಮಾಡುತ್ತಿರುವುದು ನಿಜ; ಆದರೆ ಅದರಲ್ಲಿಯೂ ಮಧ್ಯದಲ್ಲೆಲ್ಲಾದರೂ ಮನಸ್ಸಿನ ವಿಕಾರದ ಪತ್ತೆ ಹತ್ತುವುದು. ಬಳಿಕ ನಾವು ಶರೀರವನ್ನು ಬಿಟ್ಟು ಮನಸ್ಸಿನ ಮಾರ್ಗದಿಂದಲೇ ಶೋಧ ಮಾಡಲಿಕ್ಕೆ ಪ್ರಾರಂಭಿಸಬೇಕಾಗುತ್ತದೆ; ಆದರೆ ಯಾವಾಗ ನಮ್ಮ ಕಡೆಗೆ ಮೊದಲೇ ಮನೋರೋಗದ ರೋಗಿ ಬರುವನೋ, ಆಗ ಆ ಚಿಕಿತ್ಸೆ ಮಾಡುವದು ಬಹು ಕಠಿಣವಾಗುತ್ತದೆ; ಹಾಗು ಅಂತೆಯೇ ನಾನು ಪ್ರಾರಂಭದಲ್ಲಿ ಹೇಳಿದಂತೆ ನಿಜವಾದ ಡಾಕ್ಟರನಿಗೆ ಜೀವನ ಶಾಸ್ತ್ರದ ಜೊತೆಗೆ ಮಾನಸಶಾಸ್ತ್ರದ ಅಭ್ಯಾಸವನ್ನೂ ಮಾಡಬೇಕಾಗುತ್ತದೆ."

ಆಗ ಸರ ಸಾಹೇಬರು:—"ಎಲೊ, ನೀವಿಬ್ಬರೂ ಮಹಾ ಮಹಾ ಶಾಸ್ತ್ರಿಗಳೇ ಗಂಟು ಬಿದ್ದಿರಿ; ಆದರೆ ನೀವಿನ್ನು ಈ ಗುಂಭವಾದ ಚರ್ಚೆಯನ್ನು ಬಿಟ್ಟುಬಿಡಿರಿ ನಮ್ಮ ಚಂದೂನ ಬಗ್ಗೆ ನೀವೇನು ಅನ್ನುವಿರೋ, ಅದನ್ನಷ್ಟೇ ನಾವು ಕೇಳಿಕೊಳ್ಳಬೇಕಾಗಿದೆ. ಆ ಬಗ್ಗೆ ಬುದ್ಧಿವಾದಿಯಾದ ಬನ್ಸೀಧರಾ ಹಾಗು ಭಾವನಾವಾದಿಯಾದ ಡಾಕ್ಟರ ಜಾಲಂದರ ನೀವು ಏನು ಹೇಳುವಿರೊ, ಹೇಳಿರಿ ನೋಡೋಣ!"

ಜಾಲಂದರ—"ಚಂದುವು ತನ್ನ ಬುದ್ಧಿಗೆ ಹೇಗೆ ಚಾಲನೆ ಕೊಟ್ಟನೆಂಬ ದನ್ನು ಈಗ ನಾನು ಹೇಳುತ್ತೇನೆ. ಯಾವ ಕಾಲಕ್ಕೆ ಚಂದುವು ಇತ್ತ ತುಬಾಕಿ ಹಾರಿಸಿ ಆ ಪಕ್ಷಿಗಳನ್ನು ಕೊಂದು ನೆಲಕ್ಕೆ ಕೆಡಹಿದನೋ ಅದೇ ಕಾಲಕ್ಕೆ ಅತ್ತ ವಿಲಾಯತಿಯೊಳಗೆ ಆತನು ಮನಸ್ಸಿನಿಂದ ವರಿಸಿದ್ದ ಆ ಮೇರಿಯು ಸತ್ತು ಹೋದಳು! ಈ ಎರಡೂ ಸಂಗತಿಗಳ ಸಂಬಂಧವನ್ನು ಚಂದುವು ಕಾರ್ಯ ಕಾರಣಭಾವದಿಂದ ಸಂಧಿಸಿದನು ಕಾರ್ಯಕಾರಣಭಾವವನ್ನು ಹಚ್ಚಿ ನೋಡುವದು ಬುದ್ಧಿಯ ಮೊದಲನೇ ಕೆಲಸವಿದೆ; ಆದರೆ ಮೇರಿಯು ಪ್ರಥಮದಲ್ಲೇ ಆತನ ಪ್ರೇಮವಿಷಯವಾಗಿ ಕುಳಿತಿದ್ದಳು; ಅಂದರೆ ಆಕೆಯು ಮೂಲಕ ಯಾವುದೊಂದು ಭಾವನೆಯು ಆತನಲ್ಲಿ ಉಂಟಾಗಿದ್ದಿತೆಂದೇ ಈ ಕಾರ್ಯಕಾರಣಭಾವವನ್ನು ಸಂಧಿಸುವದು ಚಂದುವಿಗೆ ಹೊಳೆಯಿತು; ಆದರೆ ಅದೇ ಕಾಲಕ್ಕೆ ಅಮೇರಿಕೆಯಲ್ಲಿ ಯಾವುದೊಂದು ಭೂಕಂಪವಾದ ಸುದ್ದಿ ಬಂದಿದ್ದರೆ, ಚಂದುವು ತನ್ನ ಆ ಬೇಟೆ ಹಾಗು ಆ ಭೂಕಂಪ ಇವುಗಳ ಸಂಬಂಧ ಹಚ್ಚಿ ಹಳಹಳಿಸುತ್ತ ಕೂರುತ್ತಿದ್ದನೇನು? ಆತನ ಪ್ರೀತಿಯು ಆ ಮೇರಿಯು ವಿನಃ ಅತ್ತ ಸಾವಿರಾರು ಜನರು ಸತ್ತಿದ್ದರೂ ಮತ್ತು ಇಂದು ಸರ ಸಾಹೇಬ ಹಾಗು ಮಾಸಾಹೇಬರ ಕುಟುಂಬ ಸೌಖ್ಯದ ನಾಶವಾಗಿರುವದಕ್ಕಿಂ ತಲೂ ಸಾವಿರಾರು ಪಟ್ಟು ಹೆಚ್ಚು ನಾಶವು ಆ ಅಮೇರಿಕನ್ ಕುಟುಂಬಗಳ ದಾಗಿದ್ದರೂ ಚಂದುವು ಬೂದಿಬಡಕೊಂಡು ಹೀಗೆ ಸಂನ್ಯಾಸಿಯಾಗುತ್ತಿದ್ದ ನೇನು? ಆತನು ಆ ವಾರ್ತೆಯನ್ನು ಓದಿದ್ದರೆ ತೀರ ಹೆಚ್ಚೆಂದರೆ ಒಂದಿಷ್ಟು ಹುಬ್ಬು ಮೇಲಕ್ಕೇರಿಸಿ ಸಹಾನುಭೂತಿಗಾಗಿ ಹುಶ್ಶ ಎಂದು ಉಸಿರುಗರೆಯು ತ್ತಿದ್ದನಷ್ಟೇ; ಮತ್ತು ಕೈಯೊಳಗಿನ ಆ ವೃತ್ತಪತ್ರವನ್ನು ಬೀಸಿ, ಸಿಗರೇಟು ಹೊತ್ತಿಸುತ್ತಿದ್ದನು; ಇಲ್ಲವೆ ಕೈಯೊಳಗೆ ಟೇನೀಸಬ್ಯಾಟ ಹಿಡಿದು ಆಡಲಿಕ್ಕೆ ಓಡುತ್ತಿದ್ದನು; ಆದರೆ ಮೇರಿಯು ಪ್ರೇಮದಿಂದ ಚಂದುವಿನ ಮನಸ್ಸು ಆಕರ್ಷಿಸಿಬಿಟ್ಟಿತ್ತು. ಅವಳು ಹಿಂದುಸ್ತಾನಕ್ಕೆ ಹೊರಟು ಬರುವ ಮಾರ್ಗ ನಿರೀಕ್ಷಣೆಯಲ್ಲಿ ಆತನಿದ್ದನು. ಕದಾಚಿತ್ ಆಕೆಯಿಂದ ಆಗಲೆ ಬಂದಿದ್ದ

ಪತ್ರವು ಅವನ ಕಣ್ಣೆದುರಿಗಿದ್ದುದರಿಂದ ಆ ಪ್ರೇಮಭಾವನೆಗೆ ಹೆಚ್ಚು ತೀವ್ರತೆಯುಂಟಾಗಿದ್ದೀತು; ಮತ್ತು ಅಷ್ಟರಲ್ಲೇ ಆಕೆ ಸತ್ತು ಹೋದ ತಂತಿ ಬಂತು! ಅದರಿಂದ ಅವನಿಗೆ ಆ ಬೈರಾಗಿಯ ಶಾಪವು ನೆನಪಾಯಿತು. ಇಲ್ಲದಿದ್ದರೆ ಇಂಥ ನೂರಾರು ಬೈರಾಗಿಗಳ ಶಾಪ-ಭವಿಷ್ಯಗಳನ್ನು ಆತನು ಇಣುಕಿ ಕೂಡ ನೋಡುತ್ತಿರಲಿಲ್ಲ. ಇಷ್ಟೇ ನೋಡಿರಿ, ಆ ಶಾಪದ-ಭವಿಷ್ಯದ ಉಚ್ಚಾರದ ನಂತರ ತೀವ್ರವೇ ಆತನು ಆಯ್. ಸಿ. ಎಸ್. ಪರೀಕ್ಷೆ ಪಾಸಾದ ತಂತಿ ಬಂದಿತ್ತು. ಆತನು ಅದನ್ನೇ ಆ ಶಾಪಕ್ಕೆ ಸರಿಹೋಲಿಸಿ ಆ ಶಾಪವನ್ನೂ ಮತ್ತು ಆ ದೇವರ ನ್ಯಾಯನಿರ್ಣಯವನ್ನೂ ಕುರಿತು ಚೇಷ್ಟೆಮಾಡಿರಲಿಲ್ಲವೆ? ಆದರೆ ಆ ಪರೀಕ್ಷೆ ಪಾಸಾದ ಆನಂದಕ್ಕಿಂತ ಮೇರಿಯ ಪ್ರೇಮದ ಆನಂದವು ಆತನಿಗೆ ವಿಶೇಷವೆನಿಸುತ್ತಿತ್ತು; ಹಾಗು ಅದರ ನಾಶವಾದ ಕೂಡಲೆ ಆತನ ಇಡೀ ಬಂಡಿಯು ಬುಡಮೇಲಾಯಿತು!”

ಮಾಸಾಹೇಬ:—“ಏನಿರೋ, ನಮ್ಮಂಥ ಅಶಿಕ್ಷಿತ ಹೆಂಗಸರು ಮಾತ್ರ ಇಂತಹ ಭಾವನೆ-ಗೀವನೆಗಳ ಬಲೆಗೆ ಸಿಗಬೀಳಬೇಕು; ಬುದ್ಧಿಯೊಡನೆ ವೈರ ಬೆಳಸಿ, ಆತತಾಯಿತನ ಮಾಡುವದು ನಮಗೇ ಒಪ್ಪೀತು; ಆದರೆ ಚಂದುವು ಹುಟ್ಟಾ ಗಂಡಸಾದ್ದರಿಂದ ಹೆಚ್ಚು ಖಂಬೀರ ಮನಸ್ಸಿನವನಿರಬೇಕು. ಅದರಲ್ಲೂ ಆತನು ಸುಶಿಕ್ಷಿತನು; ವಿಲಾಯತಿಯಲ್ಲಿ ನಾಲ್ಕುವರ್ಷಗಳಿದ್ದು ಅತಿ ಶಿಕ್ಷಿತನಾಗಿ ಇಷ್ಟು ಪರೀಕ್ಷೆ ಪಾಸು ಮಾಡಿದವನು. ಅಂದಬಳಿಕ ಇಷ್ಟು ಹದಗೊಳಿಸಿದ ಆತನ ಬುದ್ಧಿಯೆಲ್ಲ ವ್ಯರ್ಥವಾಗಬೇಕೆ? ಆ ಇಂಗ್ಲಿಷ ತರುಣಿಯೊಬ್ಬಳು ತೀರಿಕೊಂಡದ್ದರಿಂದೇನೂ ಲೋಕವೆಲ್ಲ ಹಾಳಾಗಿರಲಿಲ್ಲ. ಅವಳಿಗಿಂತಲೂ ಸುಂದರರಾದ ಉಪವರ ಕನ್ಯೆಗಳು ಇತ್ತಕಡೆಗೇನು ಕಡಿಮೆ ಇರುವರೇ? ರಾಯಬಾಹದ್ದೂರರ ಶರಯೂಳನ್ನೇ ನೋಡಿರಿ. ಅವಳಲ್ಲಿ ರತಿ ಮಾತ್ರವಾದರೂ ವೈಗುಣ್ಯವಿದೆಯೆ? ಇನ್ನು ಆ ಮೇರಿಯಲ್ಲಿ ಪ್ರೇಮವುಂಟಾಗಿದ್ದರೆ, ಚಂದುವು ಕೆಲ ದಿನ ಅವಿವಾಹಿತನಿರಬೇಕಿತ್ತು; ಹಾಗು ಆಕೆಯ ವಿಷಯದ ದುಃಖವು ಕಡಿಮೆಯಾದ ಮೇಲೆ ಮುಂದಿನ ವಿಚಾರ ಮಾಡಬೇಕಿತ್ತು; ಆದರೆ ಆ ಮೇರಿಯು ಹಾಗು ಆ ಐಸಿಎಸ್ಸಿನ ಸ್ಥಳದ ಸಂಬಂಧವೇನು? ಆ ಸ್ಥಳದ ರಾಜಿನಾಮೆಯನ್ನು ಆತನೇಕೆ ಕೊಡಬೇಕು? ಮತ್ತು ಅದರಾಚೆಗಿನ ಮಾತೆಂದರೆ, ಈ ಬೈರಾಗಿ-ಯೋಗಿಗಳನ್ನು ಮನೆಗೆ ಕರೆತಂದು, ಅವರನ್ನು ಗುರು ಮತ್ತು ಗುರುಬಂಧುಗಳನ್ನಾಗಿ ಮಾಡಿಕೊಂಡು, ಸ್ವಾಭಿಮಾನಕ್ಕೆ ಒಪ್ಪದಂತಹ ನಾಚಿಕೆಗೇಡಾಗಿ ನಡೆಯುವುದೇನಿದು? ಅಂದಮೇಲೆ ಚಂದೂನ ಬುದ್ಧಿ-ವಿಚಾರಗಳನ್ನೇನು ಬೆಂಕಿಯಲ್ಲಿ ಹಾಕಿ ಸುಡಬೇಕೋ?”

"ಮಾಸಾಹೇಬ, ನೀವನ್ನುವದು ನಿಜವು; ಆದರೆ ಕಳೆದ ಕೆಲ ದಿನಗಳಲ್ಲಿ ನಾನು ಮಾನಸ ಶಾಸ್ತ್ರದ ಅಭ್ಯಾಸವನ್ನು ಬೇಕಂತ ಮಾಡಲು ಅದರಿಂದ ತಿಳಿಯುವದೇನಂದರೆ:— ಮನುಷ್ಯನಿಗೆ ತರ್ಕಪ್ರಧಾನ, ಶಾಸ್ತ್ರಪ್ರಧಾನ ಇಲ್ಲವೆ ವಿಚಾರ ಮಾಡುವ ಪ್ರಾಣಿಯೆನ್ನುವರಲ್ಲ; ಅದನ್ನಷ್ಟಕ್ಕಷ್ಟೇ ನಿಜವೆಂದು ತಿಳಿಯಬೇಕು. ಎಲ್ಲಿಯ ವರೆಗೆ ಪ್ರಸಂಗವೇ ಉಂಟಾಗಿರುವುದಿಲ್ಲವೋ, ಅಲ್ಲಿಯ ವರೆಗೆ ಅವೆಲ್ಲವೂ ಯೋಗ್ಯವಿರುತ್ತದೆ; ಅಲ್ಲದೆ ಅಪ್ರಿಯ ಸಂಗತಿಯು ಮನುಷ್ಯನಿಗೆ ಮೆಲ್ಲಮೆಲ್ಲನೆ ತಿಳಿಯಹತ್ತಿದರೂ ಅದರ ಪರಿಣಾಮವನ್ನು ಅನುಭವಿಸಲಿಕ್ಕೆ ಅದರೊಡನೆಯೇ ಆತನ ಸಿದ್ಧತೆಯು ಮುಂದ ಮುಂದವಾಗಿ ಆಗುತ್ತಿರುತ್ತದೆ; ಆದರೆ ಯಾವುದೊಂದು ಸುದ್ದಿ ಅಪ್ರಿಯವೂ ಆಕಸ್ಮಿಕವೂ ತಿಳಿದರೆ, ಮಿದುಳಿನ ಮೇಲೆ ಕೊಡತಿಯ ಪೆಟ್ಟು ಹಾಕಿದಂತಾಗುತ್ತದೆ. ಬಾವಿ ಅಗಿಯುವಾಗ ಸೆಲೆಹತ್ತಿದರೆ ಹಾಗು ನೀರು ಒತ್ತರದಿಂದ ಬರಹತ್ತಿತೆಂದು ಅವನ್ನು ತಡೆಯುವದಕ್ಕೆಂದು ಆ ಸೆಲೆಯ ಬಾಯಿಗೆ ಸೀಸದ ಬೆಣೆ ಒಡೆದರೆ; ನಂತರ ಬಾವಿಯ ಕೆಲಸ ಮುಗಿದ ಬಳಿಕ ಆ ಬೆಣೆ ತೆಗೆಯಲಾಗಿ ಆ ಸೆಲೆಯು ಇಂಗಿ ಹೋದಂತೆಯೇ ತೋರುತ್ತದೆ ಆ ಸೆಲೆಯ ನೀರು ಭೂಮಿಯೊಳಗಿಂದಲೇ ಬೇರೆ ಕಡೆಗೆ ದಾರಿ ಮಾಡಿಕೊಂಡು ಹರಿಯಹತ್ತುತ್ತದೆ; ಹಾಗು ಆ ಮೇಲೆ ಆ ಮೊದಲಿನ ಸ್ಥಳಕ್ಕೆ ಅದು ಮತ್ತೆ ಬರುವುದೇ ಇಲ್ಲೆಂಬ ಅನುಭವವನ್ನು ಜಲಶಾಸ್ತ್ರಜ್ಞರು ಹೇಳುತ್ತಾರೆ."

"ಹಾಗಾದರೆ ಡಾಕ್ಟರ, ಇಷ್ಟು ಶಾಸ್ತ್ರಗಳನ್ನು ಇದುವರೆಗೆ ವಿಶದಪಡಿಸಿ, ಕೊನೆಗೆ ಭ್ರಂಶವಾದ ಚಂದೂನ ಬುದ್ಧಿಯು ಮತ್ತೆ ಮೊದಲಿನಂತಾಗುವದಿಲ್ಲೆಂಬ ಫಲಶ್ರುತಿಯನ್ನೇ ನೀವು ಹೇಳಲಿರುವಿರಷ್ಟೇ? ನೀವು ನನಗೆ ಹಲವು ಶಾಸ್ತ್ರಗಳನ್ನು ಹೇಳಿ ಹೇಳಿ ಕೊನೆಗೆ ಚಂದುವನ್ನು ದಾರಿಗೆ ತರುವ ಯಾವುದೊಂದು ಉಪಾಯವನ್ನು ಹೇಳಿಕೊಟ್ಟೀರೆಂದು ನನಗನಿಸಿದ್ದಿತು. ಈ ಆಶೆಯನ್ನು ಧರಿಸಿಯೇ ನಾನು ಇದುವರೆಗೆ ನಿಮ್ಮ ಶಾಸ್ತ್ರ-ಪುರಾಣ ಕೇಳುತ್ತ ಕುಳಿತಿದ್ದೆನು! ಈ ಚರ್ಚೆಯಲ್ಲಿ ಕಡೆಗೆ ನನ್ನ ನಿರಾಶೆಯೇ ಆಯಿತೆನ್ನಿ" ಎಂದಂದು ಮಾಸಾಹೇಬರು ತಮ್ಮ ಕಣ್ಣಲ್ಲಿ ಬಂದಿದ್ದ ಕಂಬನಿಗಳನ್ನೊರೆಸಿಕೊಳ್ಳಲಿಕ್ಕೆಂದು ತನ್ನ ಕರವಸ್ತ್ರವನ್ನು ಕಣ್ಣಿಗೆ ಹಿಡಿದರು.

ಅದನ್ನು ಕಂಡು ಡಾ ಜಾಲಂಧರನು ಅವಸರವಸರದಿಂದ:-"ಇಲ್ಲ-ಇಲ್ಲ. ಮಾಸಾಹೇಬ, ನೀವು ಇಷ್ಟು ನಿರಾಶೆಯಾಗುವ ಕಾರಣವಿಲ್ಲ; ಮತ್ತು ನಾನು ಇತ್ತೀಚೆಗೆ ಯಾವ ಶಾಸ್ತ್ರವನ್ನು ಓದಿರುವೆನೋ, ಅದನ್ನು ಮನುಷ್ಯನಿಗೆ ರೋಗ ಹೇಗೆ ಉಂಟಾಗುತ್ತದೆಂಬದರ ಮಟ್ಟಿಗೇ ಓದಿದರೆ, ಆ ರೋಗವು ಹೇಗೆ

ಘುಣವಾಗುವದೆಂಬದನ್ನು ತಿಳಿಯುವ ಸಲುವಾಗಿಯೂ ಓದಿಕೊಂಡಿರುತ್ತೇನೆ. ವೈದ್ಯಕ ಶಾಸ್ತ್ರದಲ್ಲೇನು, ಮಾನಸ ಶಾಸ್ತ್ರದಲ್ಲೇನು ರೋಗವುಂಟಾಗುವ ಕಾರಣ ಹೇಳಿರುವಂತೆ, ರೋಗ ನಿವಾರಣವಾಗುವ ಉಪಾಯಗಳೂ ಹೇಳಲ್ಪಟ್ಟಿರುತ್ತವೆ.''

ಸರ ಸಾಹೇಬರು:—"ಹಾಗಾದರೆ ನಮ್ಮ ಚಂದುವು ದಾರಿಗೆ ಬರಲು ನೀವೇನು ಉಪಾಯ ಹೇಳುವಿರಿ?"

"ಉಪಾಯವೇನಂದರೆ, ಯಾವುದೊಂದು ಕ್ಷೋಭನದಿಂದ ರೋಗವು ಉಂಟಾಗಿದ್ದರೆ ಅದಕ್ಕೆ ಪ್ರತಿಕ್ಷೋಭನವನ್ನೇ ಕೊಡಬೇಕು; ಅಂದರೇ ಆ ರೋಗವು ವಾಸಿಯಾಗುವ ಸಂಭವವಿರುತ್ತದೆ ನಮ್ಮ ಶಾಸ್ತ್ರದಲ್ಲಿ ಅದಕ್ಕೆ 'ಕಾವುಂಟರ ಇರಿಟೆಂಚ ಥಿಅರಿ' ಪ್ರತಿಕ್ಷೋಭನದ ಉಪಪತ್ತಿ ಎಂದೆನ್ನುವರು.''

"ಇದು ನಿಮ್ಮ ಉಪಪತ್ತಿಯಾಯಿತು; ಆದರೆ ಪ್ರತ್ಯಕ್ಷ ಪ್ರಯೋಗದ ಬಗ್ಗೆ ಏನಾದರೂ ಹೇಳಬಾರದೆ?''

"ಚಂದೂನ ಈ ಜಾಡ್ಯಕ್ಕೆ ಎರಡು-ಮೂರು ಮುಖ್ಯ ಕ್ಷೋಭಕಾರಕ ಕಾರಣಗಳುಂಟಾಗಿವೆ. ಮೊದಲನೇ ಕಾರಣವು ಮೇರಿಯು."

"ಹಾಗಿದ್ದರೆ ಆತನ ಜಾಡ್ಯಪರಿಹಾರವಾಗಲಿಕ್ಕೆ ಆ ಸತ್ತು ಹೋದ ರಮಣಿಯನ್ನು ಮತ್ತೆ ಜೀವಿಸಬೇಕಾಗುವದೇ?''

"ಅದೇನೂ ಶಕ್ಯವಿಲ್ಲ ಮೇರಿಯು ನಿಜವಾಗಿಯೂ ಸತ್ತಿದ್ದರೆ ಆಕೆಯು ಜೀವಂತಳಾಗಲಾರಳು ಆಕೆಯೊಳಗಿನ ಯಾವ ಗುಣದ ಸಲುವಾಗಿ ಚಂದೂನ ಪ್ರೇಮವು ಅವಳಲ್ಲಿ ಕುಳಿತಿರುವದೋ, ಆ ಗುಣದಲ್ಲಿ ನ್ಯೂನತೆ ತೋರುವಂತಹ ಏನಾದರೂ ಸಂಗತಿ ಘಟಿಸಿದರೆ, ವಾರ್ತೆ ತಿಳಿಸಿದರೆ, ಅದು ಪ್ರತಿಕ್ಷೋಭನವಾದೀತು; ಮತ್ತು ಆ ಪ್ರಮದೆಯಲ್ಲಿ ತಾನು ಪ್ರೇಮಧರಿಸಿದ್ದು ಯೋಗ್ಯವಿರಲಿಲ್ಲೆಂದು ಚಂದುವಿಗೆ ಸಕಾರಣವಾಗಿ ತಿಳಿದರೆ, ಆಗ ಮಾತ್ರ ಆತನ ಈ ಮೋಹದ ರೋಗವು ಹೆಚ್ಚಾಗಿ ಕಡಿಮೆಯಾದೀತು.''

ಮಾಸಾಹೇಬರು ಈಗ ತುಸ ಹೆಚ್ಚು ಹುಷಾರಾಗಿದ್ದರು. ಅದರಿಂದ ಅವರು: —"ಡಾಕ್ಟರ, ನೀವನ್ನುವಂತೆ ಘಟಿಸುವದು ನನಗೆ ಅಶಕ್ಯವೇ ಕಾಣಿಸುತ್ತದೆ ಸತ್ತಿದ್ದ ಮೇರಿಯಲ್ಲಿ ಅವಗುಣವಿದ್ದರೆ, ಅದನ್ನು ಹೇಳುವವರಾರು? ಮತ್ತು ಆ ಹೇಳಿಕೆಯು ಚಂದುವಿಗೆ ಸಮ್ಮತವಾಗುವ ಬಗೆ ಹೇಗೆ? ಮತ್ತು ಆಕೆಯ ವಿಷಯದ ಈತನ ಪ್ರೇಮದ ಹಾಗು ದುಃಖದ ಆವೇಗಗಳು ಕಡಿಮೆಯಾಗುವುದೆಂತು? ಅದಿರಲಿ. ಮತ್ತೇನಾದರೂ ಉಪಾಯವಿದೆಯೆ?''

"ಇದೆ. ಈ ಗುರು-ಮಹಾರಾಜ-ಬೈರಾಗಿ-ಬುವಾಗಳು. ಇವರ ಬಗ್ಗೆ

ಚಂದೂನ ಮನಸ್ಸಿನಲ್ಲಿ ಅತ್ಯಂತ ಪೂಜ್ಯಭಾವವುಂಟಾಗಿದೆ. ಅದು ಯಾವ ಬಗೆಯಿಂದಲಾದರೂ ಕಡಿಮೆಯಾದರೆ ಈ ಕಡೆಯಿಂದಲೂ ಕೆಲ ಕೆಲಸವಾದೀತು''

ಬನ್ಸೀಧರ: 'ಮಾಸಾಹೇಬ, ಈ ಕೆಲಸವನ್ನು ನಾನು ವಹಿಸಿಕೊಂಡಿರುತ್ತೇನೆಂದು ನಿಮಗೆ ಮೊದಲೇ ಹೇಳಿರುತ್ತೇನೆ. ಈ ಗುರುಮಹಾರಾಜರ ವಿಷಯದ ಚಂದೂನಲ್ಲಿಯ ಪೂಜ್ಯಬುದ್ಧಿಯನ್ನು ತೀರ ಸೊನ್ನೆ-ಪೂಜೆಗೆ ತಂದು ಬಿಡುವ ಸಾಧನವು ಈ ಕಾಗದಗಳ ಕಟ್ಟಿನಲ್ಲಿದೆ'' ಎಂದಂದು, ಆತನು ತನ್ನ ಕೈಯೊಳಗಿನ ಕಾಗದಗಳ ಫೈಲುಗಳನ್ನು ತುಸ ತಿರುವಿ ಹಾಕಿ ಸರ ಗಂಗಾರಾಮರ ಎದುರಿಗೆ ಹಿಡಿದನು.

ಆಗ ಸರ ಸಾಹೇಬರು ಅನ್ನುತ್ತಾರೆ:—''ಏನೋ, ನಾನು ಈ ಬೈರಾಗಿಗಳಿಗೆ ಹಿಂದೆ ಇಲ್ಲ, ಮುಂದೆ ಇಲ್ಲವೆಂದು ತಿಳಿಯುತ್ತೇನೆ. ಚಂದುವಾದರೂ ಹಾಗೆಯೇ ತಿಳಿಯುತ್ತಾನೆ. ಇಂದಬಳಿಕ ಇವರ ಸಂಬಂಧದಲ್ಲಿ ಇಷ್ಟು ಕಾಗದ-ಪತ್ರಗಳು, ಇಷ್ಟು ಪ್ರಕರಣಗಳೇತರವು?''

ಬನ್ಸೀಧರನು ತಾನು ಕುಳಿತ ಸ್ಥಳದಿಂದೆದ್ದನು. ಸಾವಧಾನದ ತನ್ನ ಪದ್ಧತಿಯಂತೆ ಬಾಗಿಲ ಹೊಳಿಗೆ ಹೋಗಿ ಅದು ಭದ್ರವಾಗಿ ಇಕ್ಕಲ್ಪಟ್ಟಿದೆ; ಅದರ ಬಳಿಯಲ್ಲಿ ಯಾರಾದರೂ ಇರುವರೋ ಹೇಗೆಂಬ ಬಗ್ಗೆ ಸೂಕ್ಷ್ಮವಾಗಿ ಶೋಧ ಮಾಡಿದನು; ಹಾಗು ಅಲ್ಲಿಂದ ತಿರುಗಿ ಬಂದು ಹೇಳಿದನು:—''ಡಾಕ್ಟರ! ಈ ಬೈರಾಗಿಗಳನ್ನು ನಾನು ಸೆರೆ ಹಿಡಿದು ಇವರ ಕೈಕಾಲುಗಳಿಗೆ ಬೇಡಿ ತೊಡಿಸಿದರೆ, ಹಾಗು ಅದನ್ನು ಚಂದುವು ಕಂಡರೆ ಮತ್ತು ಅದರ ಕಾರಣವು ಅವನಿಗೆ ತಿಳಿದರೆ, ಬಳಿಕ ನಿಮಗೆ ಬೇಕಾಗಿರುವಂಥ ಪ್ರತಿಕ್ಷೋಭನವು 'ಕಾಘಂಟರ ಇರಿಟಂಟ!' ಘಟಿಸಿದಂತಾಗುವದಿಲ್ಲವೆ?''

ಅದನ್ನು ಕೇಳಿ ಸರ ಸಾಹೇಬರು: -''ಹಾಗಾದರೆ ಈ ಬೈರಾಗಿ ಸೂಳೀಮಕ್ಕಳು ಇರುವುದಾದರೂ ಯಾರು?''

''ಇವರು ಪಕ್ಕಾ ಬದಮಾಷ್ ಕಳ್ಳರಿರುತ್ತಾರೆ! ಈ ಬೈರಾಗಿ ವೇಷದಿಂದ ಕಳೆದ ಎರಡು ವರ್ಷಗಳಿಂದ ಸಂಸ್ಥಾನದ ಹಾಗು ಬ್ರಿಟಿಶ ಪೋಲೀಸರಿಗೆ ಮಂಕು ಬೂದಿ ಹಚ್ಚುತ್ತ, ಈ ಸಂಸ್ಥಾನದಿಂದ ಆ ಸಂಸ್ಥಾನಕ್ಕೆ ಹೋಗುತ್ತ ಹೀಗೆ ಕಣ್ಣುಮುಚ್ಚಾಣಿಕೆಯಾಟ ನಡೆಸಿರುತ್ತಾರೆ!''

''ಆದರೂ ನನಗೆ ಅನಿಸುತ್ತಿತ್ತು!'' ಮಾಸಾಹೇಬರು:—''ಮನದ ಸಾಕ್ಷಿಯೇ ನಿಜವಾದ ಸಾಕ್ಷಿಯು. ಈ ಬೈರಾಗಿಗಳನ್ನು ಕಂಡಂದಿನಿಂದ ನನ್ನ ಮನಸ್ಸಿನಲ್ಲಿ ಇವರ ಬಗ್ಗೆ ತಿರಸ್ಕಾರದ ಹೊರತು ಬೇರೆ ಭಾವನೆಯೇ ಉಂಟಾಗಿರಲಿಲ್ಲ; ಆದರೆ ಚಂದುವು ನಮ್ಮ ಭಾಗದ ದೇವರಾಗಿರುವನಲ್ಲ; ಮತ್ತು (ಸರ

ಸಾಹೇಬರ ಕಡೆಗೆ ಬೊಟ್ಟು ಮಾಡಿ) ಇವರು ಆತನೊಡನೆ ನಮ್ಮ ಆದ್ಯದೇವರು! ಶಿವನು ವಿಷ್ಣುವನ್ನು ಪೂಜಿಸಬೇಕು; ಮತ್ತು ನಾವು ಭಕ್ತಗಣಗಳು ಅವರಿಬ್ಬರನ್ನೂ ಪೂಜಿಸಬೇಕು! ಚಂದುವು ಮಗರಾಮನೆಂದು ಮತ್ತು ಇವರು ಆತನ ಅಚ್ಛೆ ಪೂರೈಸುವವರೆಂದು ನಾನು ಯಾರ ವಿರುದ್ಧ ಮಾತಾಡುವುದೂ ಕಳವೇ ಆಗಿತ್ತು. ಅದಿಲ್ಲದಿದ್ದರೆ ಈ ಬೇರಾಗಿಗಳನ್ನು ನಾನು ನಮ್ಮ ಮನೆಯಲ್ಲಿ ಒಂದು ಕ್ಷಣ ಕೂಡ ನಿಲ್ಲಗೊಡುತ್ತಿರಲಿಲ್ಲ; ಮತ್ತು ಈಗ ಮಾತಿಗೆ ಮಾತು ಹೊರಟಿರುವದರಿಂದಲೇ ಹೇಳುವೆನೇನಂದರೆ, ಈ ಬೈರಾಗಿಗಳ ಸಲುವಾಗಿ ಚಂದೂನಿಗಿಂತ ಆ ಹುಡುಗಿಯ-ಬಿಂಬೆಯ ಚಿಂತೆಯೇ ನನಗೆ ಹೆಚ್ಚು ಹತ್ತಿರುವುದು. ನಾನು ಅನ್ನಬಾರದು; ಆದರೆ ಈ ಖೋಡಿ ಹುಡುಗನು ತನ್ನ ಬುದ್ಧಿಯನ್ನು ಕಳೆದುಕೊಂಡು ನಮ್ಮಗಳ ಸತ್ಯಾನಾಶದ ಸಮಯವನ್ನೇ ತಂದಿದ್ದಾನೆ!"

ಇಷ್ಟರಲ್ಲಿ ಚಂದುವು ಮನೆಗೆ ಮರಳಿದ ಸದ್ದು ಹತ್ತಲು, ಎಲ್ಲರೂ ಅಲ್ಲಿಂದೆದ್ದು ಹೋದರು.

---

### ಮಠದೊಳಗಿನ ಇಂಗಿತ.

ತದನಂತರ ಸುಮಾರು ಹದಿನೈದು ದಿನಗಳ ಮೇಲೆ ಒಂದು ದಿನ ಸಂಜೆಯ ಮುಂದೆ ಸೂರ್ಯಾಸ್ತದ ಸಮಯಕ್ಕೆ ಒಬ್ಬ ಯಾತ್ರಿಕನು ನಂದಭುವನದೊಳಗೆ ಪ್ರವೇಶಿಸಿದನು; ಮತ್ತು ಮಠದೊಳಗಿನ ಬೈರಾಗಿಗಳೆಲ್ಲಿರುವರೆಂಬದನ್ನು ತಿಳಕೊಂಡು, ಬೇರೆ ಯಾರ ಅಪ್ಪಣೆಯನ್ನೂ ಕೇಳಿಕೊಳ್ಳುವ ಉಸಾಬರಿಗೆ ಹೋಗದೆ ಆತನು ನೆಟ್ಟಗೆ ಆ ಮಠದ ಕಡೆಗೇ ನಡೆದನು. ಅವನಿಗೆ ಅನಿಸುತ್ತಿದ್ದುದೇನಂದರೆ, ಮಠದೊಳಗಿನ ಬೈರಾಗಿಗಳಿಗೂ ನನಗೂ ಭೆಟ್ಟಿಯಾಯಿತೆಂದರೆ ಅವರೇ ನನ್ನ ಗುರುತು ಹಿಡಿದು ನನ್ನನ್ನು ತಮ್ಮಲ್ಲಿರಿಸಿಕೊಂಡಾರು. ಆ ಮೇಲೆ ಬೇರೆಯವರಾರಿಗೂ ಜವಾಬು ಹೇಳುವ ಕಾರಣವೇ ಉಳಿಯಲಿಕ್ಕಿಲ್ಲ. ಆ ಯಾತ್ರಿಕನು ತನ್ನ ಹೆಗಲ ಮೇಲೆ ತೀರ್ಥದ ಕಾವಡಿಯಂತಹದೊಂದು ಕಾವಡಿಯನ್ನು ಹೊತ್ತಿದ್ದನು. ಆ ಕೋಲಿನ ಎರಡೂ ತುದಿಗೆ ಸಣ್ಣ ಬಾಯಿಯಿದ್ದ ಎರಡು ದೊಡ್ಡ ಬುಟ್ಟಿಗಳು ನೇತಾಡುತ್ತಿದ್ದವು. ಅವುಗಳ ಮೇಲೆ ಕಾವೀ ಬಣ್ಣದ ಶಾಟಿಗಳ ಹೊದಿಕೆಯು ಹೊದಿಸಲ್ಪಟ್ಟಿತ್ತು. ಆ ಯಾತ್ರಿಕನ ಹಣೆಗೆ ಬಿಳೀ ಗೋಪೀಚಂದನದ ತ್ರಿಪುಂಡ್ರವು ಹಚ್ಚಲ್ಪಟ್ಟಿದ್ದು, ಆತನ ಬಟ್ಟೆಗಳು ಯಾವನೊಬ್ಬ ಚಿರಪ್ರವಾಸಿಯ ಬಟ್ಟೆಗಳಂತೆ ಹಳೆಯ ಹಾಗು ಮಾಸಿದವಾಗಿದ್ದವು ಆತನು ತಪ್ಪುತಪ್ಪಾದ ಹಿಂದೀ ಮಾತನಾಡುತ್ತಿದ್ದನು; ಆದರೆ ಆತನ ಆ ಭಾಷೆಯ ತಪ್ಪುಗಳನ್ನು ಪರಿಶೀಲಿಸಿದರೆ ಅವುಗಳನ್ನು

ಯಾವನೊಬ್ಬನು ಬೇಕಂತ ಮಾಡುತ್ತಿರುವಂತೆ, ಅಂದರೆ ಹಿಂದೀ ಭಾಷೆಯ ತನ್ನ ಜ್ಞಾನವನ್ನು ಪ್ರಕಟಗೊಳಿಸುವದಕ್ಕಿಂತ ಬಚ್ಚಿಡುವ ಸಲುವಾಗಿಯೇ ಹಾಗೆ ಮಾಡುತ್ತಿರುವನೆಂದು ಯಾರಿಗಾದರೂ ಸಹಜವಾಗಿ ತೋರಿಬರುತ್ತಿತ್ತು.

ಆ ಯಾತ್ರಿಕನನ್ನು ಕಂಡ ಕೂಡಲೆ ಗುರುಮಹಾರಾಜ ಹಾಗು ಶಿಷ್ಯ ಇವರಿಬ್ಬರೂ ಆತನ ನಮಸ್ಕಾರವನ್ನು ಸ್ವೀಕರಿಸಿ ಆತನ ಬಳಿಯ ಕಾವಡಿ ಸಹಿತ ವಾಗಿ ಆತನನ್ನು ಒಳಗೆ ಬರಮಾಡಿಕೊಂಡರು. ಚಂದುವು ಅಲ್ಲಿಯೇ ಸಮೀಪ ದಲ್ಲಿದ್ದನು. ಅವನನ್ನು ಕುರಿತು ಗುರುಮಹಾರಾಜರು:—"ನಮ್ಮ ತೀರ್ಥ ಯಾತ್ರಿಕರ ಭೆಟ್ಟಿಗಳು ಹೀಗೆಯೇ ಅಭಾವಿತವಾಗಿ ಎಲ್ಲೆಲ್ಲೋ ಆಗುತ್ತಿರು ತ್ತವೆ. ನಮ್ಮಗಳ ಪರ್ಯಟನಗಳನ್ನು ನೋಡಿ ಯಾರಿಗಾದರೂ ಇವರು ಬೇಕಂತ ಒಬ್ಬರಿಂದೊಬ್ಬರು ದೂರ ಹೋಗುವ ಇಚ್ಛೆಯಿಂದಲೇ ಹೀಗೆ ಹೋಗುತ್ತಿರುವರೆಂದು ಒಂದು ದೃಷ್ಟಿಯಿಂದ ಅನಿಸಬಹುದು; ಆದರೆ ಬೇರೊಂ ದು ದೃಷ್ಟಿಯಿಂದ ಅದೇ ಪರ್ಯಟನಗಳನ್ನು ನಾವು ಬೇಕಂತ ಒಬ್ಬರೊಬ್ಬರಿಗೆ ಭೆಟ್ಟಿಯಾಗುವ ಸಲುವಾಗಿಯೇ ನಡೆಸಿರುವೆವೆಂದೂ ತೋರದಿರದು."

ಅಲ್ಲಿ ನಡೆದ ಪ್ರಕಾರದ ಬಗ್ಗೆ ಚಂದುವಿಗೆ ವಿಶೇಷವೇನೂ ಅನಿಸಲಿಲ್ಲ. ಯಾಕಂದರೆ ನಂದಭುವನಕ್ಕೆ ಒಬ್ಬ ತಾಪಸಿಯು ಹೆಚ್ಚಿಗೆ ಬಂದರೂ ಕಡಿಮೆ ಯಾದರೂ ಅಲ್ಲಿ ಸ್ಥಳಕ್ಕೂ ಸಿಧಾಸಾಮುಗ್ರಿಗಳಿಗೂ ಕೊರತೆಯಿರಲಿಲ್ಲ; ಅಲ್ಲದೆ ತನ್ನ ಅತಿಥಿಗಳ ಅತಿಥಿಯು ತನಗೂ ಅಥಿತಿಯೇ. ಚಂದುವು ಆ ಹೊಸ ಯಾತ್ರಿಕನಿಗೆ ನೀವು ಎಲ್ಲಿಯವರು, ಯಾರು, ಎತ್ತಿಂದ ಬಂದಿರಿ, ಎತ್ತ ನಡೆದಿರುವಿರಿ? ಮುಂತಾದ ಮಾಮೂಲೀ ಪ್ರಶ್ನೆಗಳನ್ನು ಕೇಳಿದನು. ಅವುಗಳ ಉತ್ತರ ಹೇಳುವಾಗ ಆ ಯಾತ್ರಿಕನಿಂದ ಹಿಂದೀಭಾಷೆಯ ಬಗ್ಗೆ ಆಗುತ್ತಿರುವ ತಪ್ಪುಗಳ ಕೃತ್ರಿಮತನವು ಚಂದೂನ ಲಕ್ಷ್ಯದಲ್ಲಿ ಆಗಲೆ ಬಂದಿತು; ಆದರೆ ಯಾತ್ರಿಕನೆಂದ ಬಳಿಕ ಅವನು ಹತ್ತೆಂಟು ಪ್ರಾಂತಗಳಲ್ಲಿ ಸಂಚರಿಸುವವನು. ಹತ್ತೆಂಟು ಪ್ರಾಂತಗಳ ಭಾಷೆಗಳನ್ನು ತಪ್ಪು ತಪ್ಪುತ್ತಲೆ ಮಾತನಾಡಲಿಕ್ಕೆ ಪ್ರಯತ್ನಿಸುವವನು; ಇದೇ ಅಲ್ಲದೆ ಸಂದೇಹವುಂಟಾಗಲಿಕ್ಕೆ ಬೇರೆ ಕಾರಣ ವೇನೂ ಇರಲಿಲ್ಲ. ಆದರಿಂದ ಆತನು ಕೆಲ ಹೊತ್ತಿನಲ್ಲೇ ಅಲ್ಲಿಂದೆದ್ದು ತನ್ನ ಕೋಣೆಯ ದಾರೀ ಹಿಡಿದನು.

ಇಷ್ಟರೊಳಗೆ ಆ ಯಾತ್ರಿಕನ ಹಿಂದಿನಿಂದ ಮತ್ತೊಬ್ಬ ಪ್ರವಾಸಿಯು ನಂದಭುವನಕ್ಕೆ ಬಂದನು; ಆದರೆ ಆತನು ಅತಿಥಿ-ಅಭ್ಯಾಗತನಾಗಿರದೆ ಡಿ. ಇ. ಬನ್ಸೀಧರನಾಗಿದ್ದನು. ತನ್ನ ಕ್ರಮದಂತೆ ಆತನು ತನ್ನ ಸಾಮಾನುಗಳನ್ನೆಲ್ಲ ತನ್ನ ನಿಶ್ಚಿತ ಕೋಣೆಯಲ್ಲಿರಿಸಿದವನೇ ಮೊದಲು ಮಾಸಾಹೇಬರ ಭೆಟ್ಟಿಯನ್ನು

ತಕ್ಕೊಂಡನು. ಆಗ ಆತನು ಅವರನ್ನುದ್ದೇಶಿಸಿ:-'ಮಾಸಾಹೇಬ! ನಿಮ್ಮ ಮನೆಯ ಈ ಅತಿಥಿ-ಬೈರಾಗಿಗಳ ಬಗ್ಗೆ ನಾನು ಏನು ವಿಚಾರಣೆ ಮಾಡಬೇಕಿದ್ದಿತೋ, ಮಾಹಿತಿ ದೊರಕಿಸುವದಿದ್ದಿತೋ ಅದನ್ನೆಲ್ಲ ನನ್ನಷ್ಟಕ್ಕೆ ನಾನು ದೊರಕಿಸಿ ಸಿದ್ಧ ಸಾದೆನು. ಆದರಿಂದ ಇನ್ನು ನಾನು ನನ್ನ ಸರಕಾರೀ ಕೆಲಸವನ್ನು ಕೊನೆಗಾಣಿಸಲಿಕ್ಕೆ ತಡಮಾಡುವಂತಿಲ್ಲ. ಇದರಲ್ಲಿ ಅಡಚಣಿಯ ಪ್ರಶ್ನೆಯಿರುವದೆಂದರೆ ಒಬ್ಬ ಚಂದೂನ ಸಂಬಂಧದ್ದೇ; ಅಂದರೆ ನಾನು ಈ ಬೈರಾಗಿಗಳದೇನು ಮಾಡಬೇಕಾಗಿದೆಯೋ ಅದನ್ನು ಮಾಡುವಾಗ ಇವನು ಎಷ್ಟು ಅಡ್ಡಿಯೊಡ್ಡ್ಯಾನು; ಇಲ್ಲವೆ ನಾನು ಇವನನ್ನು ಎಷ್ಟು ನೊಯ್ಯಿಸಬೇಕಾದೀತು ಎಂಬದೇ. ಇನ್ನು ಇದು ನನ್ನ ಸರಕಾರೀ ಕೆಲಸವೇ ಇದ್ದುದರಿಂದ, ಇದಕ್ಕೆ ಅಡ್ಡ ಬರುವದು ಸರಿಯಲ್ಲವೆಂಬದು ಆಯ್. ಸಿ. ಎಸ್. ಪಾಸಾಗಿರುವಂಥ ಚಂದುವಿಗೆ ತಿಳಿಯುತ್ತಿರಬೇಕು; ಆದರೆ ಆತನ ಗುರುಭಕ್ತಿಯು ಇನ್ನೂ ಎಷ್ಟು ದೃಢವಾಗಿದ್ದೀತೋ, ಅಷ್ಟು ಆ ಬೈರಾಗಿಗಳನ್ನು ಮರೆಮಾಡಲಿಕ್ಕೆ, ಇಲ್ಲವೆ ಅವರು ನನ್ನಿಂದ ತಲೆ ತಪ್ಪಿಸಿಕೊಳ್ಳಲಿಕ್ಕೆ ಸಹಾಯಮಾಡುವ ಮೋಹವು ಚಂದುವಿಗಾಗುವ ಸಂಭವವಿದೆ! ಅಂತೆಯೇ ಆತನೊಡನೆ ಮೊದಲೇನೂ ಮಾತನಾಡದೆ, ಸರ ಸಾಹೇಬರೊಡನೇ ಮಾತಾಡಬೇಕೆಂದು ನನ್ನ ವಿಚಾರವಿದೆ. ಈ ಬಗ್ಗೆ ತಮ್ಮ ಅಭಿಪ್ರಾಯವೇನು?''

ಬನ್ಸೀಧರನ ಬಾಯಿಂದ ಮಠಮೊಳಗಿನ ಬೈರಾಗಿಗಳ ಬಗ್ಗೆ ಇಂಥ ಭಾಷೆಯು ಹೊರಟದ್ದನ್ನು ಕೇಳಿ ಮಾಸಾಹೇಬರಿಗೆ ಮನಸ್ಸಿನಲ್ಲಿ ಆನಂದವೇ ಆಯಿತು. ಆಗ ಅವರು:–"ಈ ಬೈರಾಗಿಗಳ ಬಗ್ಗೆ ನನ್ನ ಮನಸ್ಸಿನಲ್ಲಿ ಪ್ರಥಮದಿಂದಲೂ ಕೆಟ್ಟಗ್ರಹವಾಗಿಯೇ ಇತ್ತು. ಅದಕ್ಕೆ ಕಾರಣವೇನೆಂಬದನ್ನು ಹೇಳಬರುವಂತಿಲ್ಲ; ಇಲ್ಲವೆ ಆ ಬೈರಾಗಿಗಳು ಚಂದುವಿಗೆ ಸೇರಲು ಯಾವ ಕಾರಣವಾಗಿದ್ದಿತೋ, ಅದಕ್ಕಿಂತಲೂ ನನ್ನ ಕಾರಣವು ಕಚ್ಚಾ ಅಥವಾ ತಪ್ಪಿನದೆನ್ನು ಬೇಕಾದರೆ! ಆದರೆ ಅದು ಹಾಗಿರುವದೇನೋ ನಿಜ. ಮನೆಯ ಗಂಡಸರ ಬಗ್ಗೆ ಮಾತ್ರ ನನಗೆ ಮನಃಪೂರ್ವಕವಾಗಿ ಕೆಡಕೆನಿಸುತ್ತದೆ; ಯಾಕಂದರೆ, ಚಂದುವಿನಂತೆ ಆ ಬೈರಾಗಿಗಳಲ್ಲಿ ಇವರ ನಿಜವಾದ ಶ್ರದ್ಧೆಯಿಲ್ಲ; ಆದರೆ ಚಂದೂನ ಹಿತಕ್ಕಾಗಿ ಅವರನ್ನು ಹೊರಗೆ ಹಾಕುವದೂ ಇವರಿಂದಾಗುವದಿಲ್ಲ. ಹೀಗೆ ಇವರ ಮನಸ್ಸು ಅಡಕತ್ತಿನಲ್ಲಿ ಸಿಕ್ಕ ಅಡಕೆಯಂತಾಗಿದೆ! ಇನ್ನು ನಿಷ್ಕಾರಣವಾಗಿ ಆ ಬೈರಾಗಿಗಳನ್ನು ಹೊರಗೆ ಹಾಕುವುದೆಂದರೆ ಹಾಗು ಚಂದುವು ಅದಕ್ಕೆ ಅಡ್ಡಿಯನ್ನೊಡ್ಡಿದರೆ ಇವರು ಆತನ ಪಕ್ಷವನ್ನೇ ವಹಿಸತಕ್ಕವರು. ಹೀಗೆಯೇ ತೊಂದರೆವುಂಟಾಗುವದು.''

ಬನ್ಸೀಧರ—"ಈ ಬೈರಾಗಿಗಳಿಗೆ ಇಲ್ಲಿಂದ ಉಚ್ಚಾಟನೆ ಕೊಡುವ ಅಪಯಶವು ನಿಮಗಾರಿಗೂ ಸೋಂಕದ ಹಾಗೆಯೇ ನಾನು ಉಪಾಯ ಮಾಡೇನು; ಆದರೆ ಒಂದು ಮಾಡ ಹೋಗಿ ಇನ್ನೊಂದು ಘಟಿಸಿದಂತಾಗಬಾರದು. ನನ್ನ ಹಾಗು ಚಂದೂನ ಪ್ರೇಮದಲ್ಲಿ ಅಂತರವುಂಟಾಗಬಾರದು; ಮತ್ತು ಈ ಮನೆಯು ನನಗೆ ಎರವಾಗಬಾರದು, ಇಷ್ಟೇ ನನ್ನ ಬಯಕೆಯು. ಅದಿರಲಿ. ಇನ್ನು ಮುಂದಿನ ಮೆಟ್ಟಿಲೆಂದು ನಾನು ಸೂಚಿಸುವುದಿಷ್ಟೇ, ನಾನು ಈ ಮೊದಲು ನಿಮಗೂ ಡಾ॥ ಜಾಲಂದರರಿಗೂ ಈ ಬೈರಾಗಿಗಳ ಬಗ್ಗೆ ಯಾವ ಹಾಂಕಿಯ ಸುದ್ದಿ ಹೇಳಿದ್ದೆನೋ, ಅದನ್ನೀಗ ಸರ ಸಾಹೇಬರಿಗೂ ಹೇಳುವೆನು; ಮತ್ತು ನಮ್ಮೆಲ್ಲರ ಬಲವು ಒಟ್ಟುಗೂಡಿತೆಂದರೆ, ಚಂದೂನೊಡನೆ ಕಾಲ ಕೆದರಬೇಕಾದರೂ ಅದನ್ನು ಮಾಡುವುದು ಸುಲಭವಾದೀತು."

ಬನ್ಸೀಧರನಿಂದ ಆ ರಾತ್ರಿಯನ್ನು ಸುಮ್ಮನೆ ಕಳೆಯಲಾಗಲಿಲ್ಲ. ಸಂಜೆಯ ಮುಂದೆ ಕಾವಡಿ ಹೊತ್ತುಕೊಂಡು ಬಂದಿದ್ದ ಆ ಯಾತ್ರಿಕನು ಪತ್ತರಗಡದ ಕಳವಿನೊಳಗಿನ ಈ ಬೈರಾಗಿಗಳ ಒಬ್ಬ ಜೊತೆಗಾರನೆಂಬುದು ಪೋಲೀಸರಿಗೆ ತಪಾಸಹತ್ತಿತ್ತು; ಮತ್ತು ಮೇಲೆ ಹೇಳಿದ ಕೆಲಸದೊಡನೆ ಆ ಜೊತೆಗಾರನ ಮೇಲೆ ಲಕ್ಷ್ಯವಿರಿಸಲಿಕ್ಕೆಂಬುದೂ ಬನ್ಸೀಧರನು ಇಂದು ನಂದಭುವನಕ್ಕೆ ಬಂದ ಇನ್ನೊಂದು ಉದ್ದೇಶವಾಗಿದ್ದಿತು. ಯಾವುದೊಂದು ಗುಹ್ನೆಯೊಳಗಿನ ಸಾಥಿದಾರರು ಒತ್ತಟ್ಟಿಗೆ ಕಲೆತರೆಂದರೆ, ಅವರು ತಮ್ಮ ಮುಂದಿನ ಬೇತುಗಳ ಬಗ್ಗೆ ತಮ್ಮತಮ್ಮೊಳಗೆ ಚರ್ಚೆ ಮಾಡದಿರುವುದಿಲ್ಲವೆಂಬುದು ನಿತ್ಯದ ಅನುಭವದಿಂದ ಅವನಿಗೆ ಗೊತ್ತಿತ್ತು. ಅದರಿಂದ ಇಂದು ರಾತ್ರಿ ಈ ಮಠದೊಳಗೆ ಎಲ್ಲಿಯಾದರೂ ಗುಪ್ತರೂಪದಲ್ಲಿ ಸಮೀಪದಲ್ಲೇ ಇದ್ದು, ಆ ಮೂವರಲ್ಲಿ ಏನು ಸಂಭಾಷಣ ನಡೆಯುವುದೋ ಆದನ್ನು ಕೇಳಲಿಕ್ಕೆ ದೊರೆತರೆ, ಆ ಯೋಗವನ್ನು ಸಾಧಿಸಬೇಕೆಂದು ಬನ್ಸೀಧರನು ನಿರ್ಧರಿಸಿದನು

ರಾತ್ರಿಯ ಊಟವಾದ ಬಳಿಕ ನಾನು ನಾಟಕಕ್ಕೆ ಹೋಗುವವನು; ಕೋಣೆಯ ಕೀಲೀಕೈ ನನ್ನ ಕಡೆಗೇ ಇದೆ. ಕಾರಣ ನನ್ನ ನಿರೀಕ್ಷಣೆಯನ್ನು ಯಾರೂ ಮಾಡಲಾಗದು, ಎಂದು ತಿಳಿಸಿ, ಬನ್ಸೀಧರನು ನಂದಭುವನದಿಂದ ಹೊರಟಿದ್ದನು. ರಾತ್ರಿಯ ಭೋಜನೋತ್ತರದಲ್ಲಿ ಚಂದುವು ಮಠಕ್ಕೆ ಹೋದವನು ದಿನದಂತೆ ಗುರುಮಹಾರಾಜರ ಎದುರಿಗೆ ಹೋಗಿ ಸುಮ್ಮನೆ ಕುಳಿತಿದ್ದನು. ಆತನೆಡೆಗೆ ಹೋಗಿ ಬನ್ಸೀಧರನು ಅವನನ್ನು ಕುರಿತು:-"ಚಂದೂ, ನೀನು ನನ್ನೊಡನೆ ನಾಟಕಕ್ಕೆ ಬಾ ಎಂದೆನ್ನುವ ಸ್ಥಿತಿಯೇ ಉಳಿದಿರುವದಿಲ್ಲ; ಆದರೆ ನೀನು ರಾತ್ರಿಯಲ್ಲೇನಾದರೂ ನನ್ನನ್ನು ಹುಡುಕೀ ಎಂದು ನಾನು ನಿನಗೆ ಹೇಳಿ

ಹೋಗಲಿಕ್ಕೆ ಬಂದಿರುತ್ತೇನೆ. ನಾನು ಹಾಗು ಈ ಊರೊಳಗಿನ ನನ್ನ ಒಬ್ಬ ಗೆಳೆಯ ಕೂಡಿ ಇಂದು ನಾಟಕಕ್ಕೆ ಹೋಗುವವರಿದ್ದೇವೆ; ಮತ್ತು ಇಂದು ರಾತ್ರಿ ಆತನ ಕಡೆಗೇ ನಾನು ಮಲಗಿದರೆ ಮಲಗೇನು'' ಎಂಬುದನ್ನು ಆ ಬೈರಾಗಿ ತ್ರಯಿಗಳಿಗೂ ಕೇಳಿಸುವಂತೆ ಬೇಕಂತ ಗಟ್ಟಿಯಾಗಿ ಹೇಳಿದನು

ಬಳಿಕ ಆತನು ಮಠದೊಳಗೆ ಮಲಗುವ ಕಾವಲುಗಾರನ ಮನೆಗೆ ಹೋಗಿ ಅವನನ್ನು ಕಂಡನು ಮೊದಲು ಆ ಬೈರಾಗಿಗಳ ಬಗ್ಗೆ ಆತನ ಅಭಿಪ್ರಾಯ ತಿಳಕೊಳ್ಳಲಿಕ್ಕೆಂದು ಹರಳು ಒಗೆದಂತೆ ಮಾಡಿ ಹಾಗು ಆ ಕಾವಲುಗಾರನ ಕೈಯಲ್ಲಿ ಐದು ರೂಪಾಯಿನ ನೋಟು ಇಟ್ಟು, ಬನ್ಸೀಧರನು:--

''ಯಾಕೋ ಗಿರಿಧರ, ಮಗನೇ ನಿನ್ನ ದೆಶೆ! ಈಗ ಬಲು ಜೈನಿ ನಡೆದಿವೆ!''

ಗಿರಿಧರನು ಆಶ್ಚರ್ಯದಿಂದ:—''ಬನ್ಸೀಸಾಹೇಬ, ಅದು ಹೇಗೆ?''

''ಎಲೋ, ನೀನು ಮಠದ ಕಾವಲುಗಾರನಲ್ಲವೆ? ಹಗಲೆಲ್ಲ ಪ್ರತಿಯೊಂದು ಕೆಲಸಕ್ಕೆ ಆ ಇಬ್ಬರು ಬೈರಾಗಿ ಮಹಾರಾಜರಿಗೆ ನೀನು ನೆರವಾಗುವವನು. ಅವರ ನಿತ್ಯದ ಸುಗ್ರಾಸ ಭೋಜನದ ಅಂಶವು ನಿನಗೆ ಲಭಿಸುವುದು; ಅಲ್ಲದೆ ಮಠದಲ್ಲಿ ಈಗ ಯಾವ ಪುಣ್ಯ ಸಂಚಯವಾಗುತ್ತಿರುವದೋ, ಅದರ ಅಂಶವೂ ನಿನಗೆ ದೊರೆಯತಕ್ಕದ್ದೇ!''

ಅದನ್ನು ಕೇಳಿ ಗಿರಿಧರನು ಆ ಐದುರೂಪಾಯಿನ ನೋಟನ್ನು ಬನ್ಸೀಧರನ ಮೈ ಮೇಲೆ ಬಿಸುಟಿ:--''ಸಾಯಲೊಲ್ಲರೇಕೆ ಆ ಬೈರಾಗಿ ಮುಂಡೇಮಕ್ಕಳು! ಯಾರಿಗೆ ಬೇಕಾಗಿದೆ ಅವರಾ ಸುಗ್ರಾಸದ ಎಂಜಲು? ಮತ್ತು ಪುಣ್ಯಾಗಿಣ್ಯಾಗಳೆಂದರೆ ಅದರ ಮೋರೆ ನೋಡಿರಿ! ಇನ್ನು ನಮ್ಮ ಯಜಮಾನರೇ ಅವರ ನಾದಿಗೆ ಹತ್ತಿದ ಬಳಿಕ ನಾವೇನು ಅನ್ನುವುದು? ಆದರೆ ನಾನು ಆ ಮಠದ ಮಾಲಕನಾಗಿದ್ದರೆ ನಾನು ಆ ಬೈರಾಗಿಗಳನ್ನು ಯಾವಾಗಲೋ ಒದ್ದು ಹೊರದಬ್ಬುತ್ತಿದ್ದೆನು! ನಮ್ಮ ಯಜಮಾನರು ಎದುರಿಗೆ ಬಂದರೆ ಅಷ್ಟರಮಟ್ಟಿಗೆ ಆ ಬೈರಾಗಿಗಳೆಂದರೇನು ಕೇವಲ ಸಭ್ಯಗೋವುಗಳೇ! ಮತ್ತು ಆಗ ಅವರು ಭಜನೆಯನ್ನೆಂತ ಅನ್ನುವರು! ತಾಯಿ-ತಂದೆಗಳ ಹೊಟ್ಟೆಯಿಂದ ಹುಟ್ಟುತ್ತಲೇ ಅಳುವುದರ ಬದಲು ಕೈಯಲ್ಲಿ ಏಕತಾರಿ ಹಿಡಿದೇ ಹಾಡುವರು! ಆದರೆ ಯಜಮಾನರು ಅಲ್ಲಿಂದ ಹೊರಬಿದ್ದೊಡನೆಯೇ ಆ ಗೋವುಗಳ ಸುಮುಖಗಳು ಹಂದಿಯ ಮುಸುಡೆಗಳಾಗಿ ಹೇಸಿಕೆ ಮೆಯ್ಯಲಿಕ್ಕೆಂದು ಹೊರಗೆ ಪರೇಡು ಮಾಡಲು ಹೊರಡುವವು! ಅವರ ಆ ಮಾತುಗಳೇನು, ನಡಿಗೆಗಳೇನು, ನಗೆಯೇನು, ಕೆಲೆಯೇನು! ಅವರ ಆ ಮಾತುಗಳೆಲ್ಲ ದುಡ್ಡು ಹಾಗು ಹೆಂಗಸರ ಸಂಬಂಧದಿಂದಲೇ ತುಂಬಿರುತ್ತವೆ. ಅವರ ಬಳಿಯಲ್ಲಂತೂ ಕಫನಿ-ಕಮಂಡಲುಗಳ ಹೊರತು

ಇನ್ನೇನೂ ಇರುವುದಿಲ್ಲ; ಆದರೆ ಮಾತು ನಡೆಯುವವಲ್ಲ ನೂರಾರು-ಸಾವಿರಾರು ಹಣದ್ದು! ಅವರ ಆ ಮಾತಿನಿಂದ ಅವರು ಯಾವನೊಬ್ಬ ಧನಿಕನ ಖಜಾನಿದಾರರೇ ಎಂಬಂತೆ ಅನಿಸುವದು! ಈ ಬೈರಾಗಿಗಳಿಗೆ ಇಂಥ ಒಣ ಉಸಾಬರಿಯೇಕೆಂದು ನಾನು ನನ್ನ ಸ್ಥಳದಲ್ಲಿ ಕುಳಿತೇ ಯೋಚಿಸುವೆನು; ಆದರೆ ನನಗದನ್ನು ತಿಳಿಸಿ ಹೇಳುವವರಾರು? ಆದರೆ ಬನ್ಸೀಸಾಹೇಬ, ನಿಜ ಸಂಗತಿ ಹೇಳಲೋ? ನನಗೆ ಇವರ ಬಗ್ಗೆ ಹೇಯವೆನಿಸಿದುದು ಇವರ ಬಾಯಲ್ಲಿ ಹೆಂಗಸರ ಸಂಬಂಧದ ಮಾತುಗಳೇಕೆಂದು. ಯಾವಳೋ, ಎಲ್ಲಿಯವಳೊ ಮಥುರೆ ಎಂಬ ಹೆಂಗಸಿನ ಹೆಸರು ಇವರ ಸಂಭಾಷಣದಲ್ಲಿ ಆಗಾಗ್ಗೆ ಹೊರಡುತ್ತದೆ. ಆಕೆ ನಾಯಕಸಾನಿಯಿರಬೇಕು; ಯಾಕಂದರೆ, ಎಷ್ಟೋ ಜನ ಬುವಾ-ಬೈರಾಗಿಗಳ ಬಳಿಯಲ್ಲಿ ನಾಯಕಸಾನಿಯರು ಶಿಷ್ಯಿಣಿಯರಾಗಿರುತ್ತಾರೆಂದು ನಾನು ಕೇಳಿ ತಿಳಿದಿದ್ದೇನೆ.''

ಬನ್ಸೀಧರನು ನಡುವೇ ಅನ್ನುತ್ತಾನೆ:—"ಎಲೋ, ನಿಜವೇ ಇದೆ. ತಾವು ಲಗ್ನವಾಗದೆ ಇದ್ದು, ಸಾಯುವವರೆಗೂ ಪಾಪ ಮಾಡುತ್ತೇವೆಂದು ಆ ನಾಯಕಸಾನಿಯರಿಗೆ ಅವರ ಮನಸ್ಸು ಚುಚ್ಚುತ್ತಿರುತ್ತದೆ; ಮತ್ತು ಇಂಥ ಯಾವನೊಬ್ಬ ಸಾಧು-ಸಂತರ ಕೃಪೆಯಾಯಿತೆಂದರೆ, ಆ ಪಾಪದ ನಿರಾಕರಣವಾದೀತೆಂದು ಅವರ ಭೋಳೇಭಾವಿಕ ತಿಳುವಳಿಕೆಯಿರುತ್ತದೆ. ಇನ್ನು ಕೆಲ ಜನ ಸಾಧು-ಸತ್ಪುರುಷರು ಅವರ ಮನಸ್ಸಿಗೆ ಸಮಾಧಾನವನ್ನುಂಟು ಮಾಡಿಕೊಡುವಂತಹ ನಿಸ್ಪೃಹ ಮತ್ತು ಸಾತ್ವಿಕಗುಣದವರಿರುತ್ತಾರೆ; ಆದರೆ ಇನ್ನುಳಿದ ಸಾಧು-ಸಂತ-ಸತ್ಪುರುಷ-ಬುವಾ-ಬೈರಾಗಿಗಳನ್ನು ವರ್ಣಿಸುವುದೆಂದರೆ, ನಮ್ಮ ನಾಲಿಗೆಯನ್ನು ನಾವೇ ಹೊಲಸು ಮಾಡಿಕೊಂಡಂತಾಗುವುದು."

ಗಿರಿಧರ:—"ಸಾಯಲಿ ಬಿಡಿರಿ. ಆ ಮಥುರೆಯೋ-ಫತುರೆಯೋ ನನಗೆ ಅವಳೊಡನೇನು ಮಾಡಬೇಕಾಗಿದೆ? ಆದರೇನರೀ ಬನ್ಸೀಸಾಹೇಬ, ನಮ್ಮ ಬಿಂಬವ್ವನವರ ಹೆಸರು ಈ ಬೈರಾಗಿಗಳ ಸಂಭಾಷಣದಲ್ಲೇಕೆ ಬರಬೇಕರೀ? ನಮ್ಮ ಚಿಕ್ಕ ಯಜಮಾನರು ಈ ಬೈರಾಗಿಗಳ ಶಿಷ್ಯರಾದಂತೆ ಬಿಂಬವ್ವನವರೇನೂ ಇವರ ಶಿಷ್ಯವರ್ಗಕ್ಕೆ ಸೇರಿರುವುದಿಲ್ಲ."

ಬನ್ಸೀಧರ:—"ನಾನಾದರೂ ಏನು ಹೇಳಲಿ? ಆದರೆ ಗುರು ಮತ್ತು ಶಿಷ್ಯ ಇವರುಗಳನ್ನು ಭಜಿಸಲಿಕ್ಕೆಂದು ನಿನ್ನ ಚಿಕ್ಕ ಯಜಮಾನರೂ ಬಿಂಬಾಬಾಇಯೂ ಹಂಚಿಕೊಂಡಿರಬಹುದೆನ್ನು ಬೇಕಾದರೆ, ಆದರೆ ಗಿರಿಧರ, ನೀನು ಹೇಳುತ್ತಿರುವ ಮಾತನ್ನು ಹೇಗೆ ನಂಬಬೇಕೋ? ನೀನು ಬೇಕಂತ ಏನಾದರೂ ಹುಟ್ಟಿಸಿಕೊಂಡು ಹೇಳುತ್ತಿರುವೆಯೆಂದು ನಾನನ್ನುವುದಿಲ್ಲ; ಆದರೆ

ನೀನು ಹೇಳುವ ಸಂಗತಿಗಳು ಬಲು ಚಮತ್ಕಾರಿಕವಾಗಿ ತೋರುತ್ತಿರುವುದರಿಂದ, ಸ್ವಂತದ ಕಿವಿಗಳಿಂದ ಕೇಳಿದ ಹೊರತು ಅವುಗಳನ್ನು ಸಂಪೂರ್ಣವಾಗಿ ನಂಬಬೇಕೆಂದು ಮನಸ್ಸು ಒಡಂಬಡುವುದಿಲ್ಲ."

"ಹಾಗಾದರೆ-ನಿಮಗೆ ಬೇಕಾದರೆ ನೀವೇ ನಿಮ್ಮ ಕಿವಿಯಿಂದ ಕೇಳಿಕೊಳ್ಳಬಹುದಲ್ಲ? ಮಾತ್ರ ನಾನು ಕೇಳಿರುವ ಎಲ್ಲ ಸಂಗತಿಯೂ ಹಾಗೆಂದರೆ ಹಾಗೆಯೇ ನಿಮಗೆ ಕೇಳಲಿಕ್ಕೆ ದೊರೆತೀತೋ ಇಲ್ಲವೋ ಹೇಗೆ ಹೇಳಬೇಕು?"

"ಎಲೋ, ಎಷ್ಟು ದೊರಕುವದೋ ಅಷ್ಟೇ ದೊರಕಲಿ. ಹೊಗೆಯಿಂದ ಗಾಳಿಯ ದಿಕ್ಕಾದರೂ ತಿಳಿಯುತ್ತದೆ ಅವರ ಮನಸ್ಸಿನಲ್ಲಿ ಯಾವ ವಿಚಾರಗಳು ಸಂಚರಿಸುತ್ತಿರುವವೆಂಬದು ಅವರ ಮಾತಿನ ಮೇಲಿಂದ ಸ್ವಲ್ಪಾದರೂ ಸುಳಿವು ಹತ್ತೀತು; ಆದರೇನೋ ಗಿರಿಧರ, ನನಗೆ ಅವರ ಸಂಭಾಷಣ ಕೇಳಲಿಕ್ಕೆ ಹೇಗೆ ಸಿಕ್ಕೀತು? ಮತ್ತು ನಿನಗಾದರೂ ಕೇಳಿಕೊಳ್ಳಲಿಕ್ಕೆ ಅದು ಹೇಗೆ ದೊರೆಯುವದೋ ಎಂಬ ಬಗ್ಗೆ ಆಶ್ಚರ್ಯವೇ ಎನಿಸುವದು."

"ಅದು ಹೇಗೆ ದೊರಕುತ್ತದೆಂಬದನ್ನು ಹೇಳುತ್ತೇನೆ ಕೇಳಿರಿ. ನಾನು ಆ ಮಠದ ಕಾವಲುಗಾರನಾಗಿದ್ದರೂ ಬರಿಯ ಹಗಲ ಹೊತ್ತಿನಲ್ಲೇ ನಾನು ಅತ್ತ ಕಾವಲು ಮಾಡುತ್ತಿರುತ್ತೇನೆ; ಆದರೆ ರಾತ್ರಿಯಲ್ಲಿ ಮೋಟರುಗಳ ಮನೆಗೆ ಹೋಗಿ ಮಲಗುತ್ತೇನೆಂದು ನಾನು ಆ ಬೈರಾಗಿಗಳಿಗೆ ಭಾಸಗೊಳಿಸಿರುತ್ತೇನೆ. ಅವರು ಮಲಗುವ ಸ್ಥಳಕ್ಕೆ ಹೊಂದಿ ಎತ್ತರದಮೇಲೊಂದು ಒಳ ಮಾಳಿಗೆಯಿದೆ. ಅದರಲ್ಲಿ ಮನೆಯೊಳಗಿನ ಹಳೇ ಗಾದಿಗಳು, ಥಡಿಗಳು, ಅರಳೆ, ಕಾತಿ ಮುಂತಾದವುಗಳು ಒಟ್ಟಲ್ಪಟ್ಟಿವೆ. ಅದರಿಂದ ಆ ಒಳ ಅಟ್ಟದ ಮೇಲೆ ಹತ್ತಿ ಹೋದರೂ ಕಾಲುಗಳ ಸಪ್ಪಳವಾಗುವದಿಲ್ಲ. ನಾನು ದಿನಾಲು ರಾತ್ರಿ ಹಿಂದುಗಡೆಯದೊಂದು ನಿಚ್ಚಣಿಕೆಯಿಂದ ಹತ್ತಿ ಆ ಅಟ್ಟದ ಮೇಲೆ ಹೋಗಿ ಕೂಡ್ರುತ್ತೇನೆ-ಮಲಗುತ್ತೇನೆ; ಮತ್ತು ಅಲ್ಲಿ ಕೆಳಗಿನ ಹಲಿಗೆಗಳ ಚಿಕ್ಕ ಬಿರಕುಗಳಿಗೆ ಕಿವಿಯಾನಿಸಿದರೆ ಆ ಗುರುಶಿಷ್ಯರ ಸಂಭಾಷಣ ಕೇಳಲಿಕ್ಕಂತೂ ದೊರೆತೇ ದೊರೆಯುವದು; ಅಲ್ಲದೆ ಅಲ್ಲಿ ಬೆಳಕಿದ್ದರೆ ಅವರು ಆಗ ಏನೇನು ಮಾಡುತ್ತಾರೆಂಬದು ಕೂಡ ಸೂಕ್ಷ್ಮದೃಷ್ಟಿಯಿಂದ ನೋಡುವವರಿಗೆ ಕಾಣಿಸುತ್ತದೆ."

"ಭಲೆ! ಒಳ್ಳೇ ಸುದ್ದಿ ಹೇಳಿದೆ; ಹಾಗಾದರೆ ಇಂದು ಹಾಗು ನಾಳೆ ಈ ಎರಡು ದಿನ ನೀನು ಆ ಒಳಮಾಳಿಗೆಯೊಳಗಿನ ನಿನ್ನ ಸ್ಥಳವನ್ನು ನನಗ ಕೊಡುವೆಯಾ?"

"ತಕ್ಕೊಳ್ಳಿರಿ; ಅದು ನನದೆಲ್ಲಿಯದು? ನಾನು ದಿನಾಲು ಮೋಟರ ಮನೆ

ಯಲ್ಲಿ ಮಲಗುವವನು ಕಳವಿನಿಂದಲೇ ಆ ಒಳವಸಾಳಿಗೆಯ ಒಳಗೆ ಹೋಗಿ ಮಲಗುತ್ತಿರುವೆನಿಷ್ಟೇ!''

''ಹಾಗಾದರೆ ಇದೇ ಸತ್ಯವೋ? ನಾನು ಅಲ್ಲಿಗೆ ಹೋಗಬಹುದೊ?''

''ಓಹೋ! ಅದರಲ್ಲಿ ಸತ್ಯವೇತರದು? ನಿಮಗೆ ನಿಮ್ಮ ಕಿವಿಗಳಿಂದ ಅವರ ಇಂಗಿತವೇನಾದರೂ ಕೇಳದೊರೆತರೆ ನಿಮ್ಮ ಸಂದೇಹವಾದರೂ ನಿವಾರಣವಾದೀತು. ಅದರಲ್ಲೂ ನೀವು ಪೋಲೀಸ ಅಧಿಕಾರಿಗಳು. ನಾನು ಕೇಳಿಕೊಳ್ಳುವದಕ್ಕಿಂತ ನೀವು ಕೇಳಿಕೊಳ್ಳುವದರಿಂದ ಏನಾದರೂ ಉಪಯೋಗ ಬಿದ್ದೀತು.''

ಅಂದು ರಾತ್ರಿ ಒಂಬತ್ತು ಗಂಟೆಗೆ ಗಿರಿಧರನು ದಿನದಂತೆ ಆ ಬೈರಾಗಿಗಳಿಗೆ ಅಂದಿನ ಕೊನೆಯ ಸಲಾಮು ಮಾಡಿ ಮೊಟರ ಮನೆಯ ಕಡೆಗೆ ಮಲಗಲಿಕ್ಕೆ ಹೋಗುತ್ತೇನೆಂದು ಹೇಳಿ ಹೋದನು. ಅಲ್ಪಾವಧಿಯಲ್ಲೇ ಬನ್ಸೀಧರನು ಗಿರಿಧರನ ಬಳಿಯ ಕೀಲೀ ಕೈ ಇಸಕೊಂಡು ಅದರಿಂದ ಹಿಂದುಗಡೆಯಿಂದ ಆ ಒಳವಸಾಳಿಗೆಯ ಕದ ತೆರೆದು ಅದರೊಳಗೆ ಪ್ರವೇಶಿಸಿದನು; ಹಾಗು ಅಲ್ಲಿ ಬಿದ್ದಿದ್ದ ಮೆತ್ತನ್ನ ಗಾದಿಗಳ ಮೇಲೆ ಕಪಾಳಕ್ಕೆ ಕೈಕೊಟ್ಟು, ಕೆಳಗಿನ ಹಲಿಗೆಯ ಸಣ್ಣ ಬಿರುಕಿಗೆ ಕಿವಿಯಾನಿಸಿ ಮಲಗಿಕೊಂಡನು. ಮಾತ್ರ ಆತನು ತನ್ನ ಜೊತೆಗೆ ಎರಡು ಜೀನಸುಗಳನ್ನಿಟ್ಟುಕೊಳ್ಳಲಿಕ್ಕೆ ಮನಸಂ ಮಾಡಿರಲಿಲ್ಲ. ಕಿವುಡರು ತಮ್ಮ ಕಿವಿಗೆ ಯಾವ ಯಂತ್ರವನ್ನು ಹಿಡಿದುಕೊಂಡು ಮಂದಿಯ ಭಾಷಣ ಕೇಳಿಕೊಳ್ಳುವರೋ ಆ ಜಾಳಿಗೆಯ ಕರ್ಣವನ್ನೂ ಜೇಬಿನೊಳಗಿನ ಪಿಸ್ತೂಲನ್ನೂ ಸಂಗಡ ತಂದಿದ್ದನು.

ಆ ರಾತ್ರಿಯಲ್ಲಿ ಎಲ್ಲ ಜನರೂ ಮಲಗಿ ಎಲ್ಲ ಕಡೆಗೂ ಸ್ತಬ್ಧತೆಯುಂಟಾದ ಒಳಿಕ ಮಠದ ತಲೆಬಾಗಿಲು ಭದ್ರವಾಗಿಕ್ಕಲ್ಪಟ್ಟಿದೆಯೆಂಬದನ್ನು ಖಾತ್ರಿಮಾಡಿಕೊಂಡು ಜಂಬೂ ಹಾಗು ಸಂಜೆಯ ಮುಂದೆ ಬಂದಿದ್ದ ಆ ಹೊಸ ಯಾತ್ರಿಕ ಇವರಿಬ್ಬರೂ ಆ ಕಾವಡಿಯ ಮೇಲಿನ ಕಾವೀಬಟ್ಟೆಗಳ ಆಚ್ಛಾದನವನ್ನು ತೆಗೆದು ಒಳಗಿನ ಕೆಲವು ಜೀನಸುಗಳನ್ನು ತಕ್ಕೊಂಡು ಒಳಗಿನ ಕೋಣೆಗೆ ಹೋಗಿ ಗುರುಮಹಾರಾಜರ ಸನ್ನಿಧಾನದಲ್ಲಿ ಕುಳಿತರು. ನಂತರ ಆ ತ್ರಿವರ್ಗದಲ್ಲಿ ಭಾಷಣಕ್ಕಾರಂಭವಾಯಿತು:—

ಗುರುಮಹಾರಾಜರು ಆ ಯಾತ್ರಿಕನನ್ನು ಕುರಿತು:-''ಎಲೋ, ನೀನು ಇಂದು ಇಲ್ಲಿ ಹೇಗೆ ಉದಯನಾದೆ?''

''ಬಾರದಿದ್ದರೇನು ಮಾಡಲಿ? ನೀವಿಬ್ಬರೂ ದೊಡ್ಡವರ ಆಶ್ರಯಪಡೆದು ಇಲ್ಲಿಯ ಸುಖದೊಳಗೆ ಬಹಿರ್ಜಗತ್ತನ್ನು ಮರೆತಿರಿ. ಇತ್ತೀಚೆಗೆ ನಿಮ್ಮ ವಾರ್ತೆ

ಯೇನೂ ತಿಳಿಯುದಾಯಿತು. ಅದರಿಂದ ಮಥುರಾರಾಣಿಯುವರು ನನ್ನನ್ನು ನಿಮ್ಮಗಳ ಶೋಧಕ್ಕಾಗಿ ಬೇಕಂತಲೇ ಕಳಿಸಿದರು. ಮನುಷ್ಯನು ಸುಖಾಸೀನನಾದನೆಂದರೆ, ಆತ್ಮಸ್ವರೂಪದ ನೆನಪನ್ನು ಮರೆತೇಬಿಡುವನೆಂದು ನಿಮ್ಮ ಸಾಧು-ಸಂತ-ವೇದಾಂತಿ ಜನರಲ್ಲೊಂದು ನಿಶ್ಚಿತ ವಾಕ್ಯವು ಇರುವದಲ್ಲವೇ? ಮತ್ತು ನಿಮ್ಮ ಬೆನ್ನಿಗೆ ಬಿದ್ದಿರುವ ಈ ಮನೆಯ ಯುವಕ ಬಾಲಕನಿಗೆ ನಿಮ್ಮ ಸಾಧುತ್ವವನ್ನು ತೋರಿಸುವದಕ್ಕೆಂದು ನೀವು ಅದನ್ನು ಆಗಾಗ್ಗೆ ಹೇಳುತ್ತಲೂ ಇರಬಹುದು! ಆದರೆ ಸ್ವಂತ ನೀವೇ ನಿಮ್ಮ ಆತ್ಮಸ್ವರೂಪವನ್ನು ಮರೆತಂತೆ ತೋರುತ್ತದೆ. ಅದರಿಂದ ನೀವು ಅದನ್ನು ಮತ್ತೆ ಗುರ್ತಿಸಿ ಮುಕ್ತಿ ಹೊಂದಬೇಕು; ಅಂದರೆ ನೀವು ಇಲ್ಲಿಂದ ಓಡಿಹೋಗಬೇಕೆಂಬದನ್ನು ತಿಳಿಸುವ ಸಲುವಾಗಿಯೇ ನಾನಿಲ್ಲಿಗೆ ಬಂದಿರುತ್ತೇನೆ."

"ಆದರೆ ನಮ್ಮ ಇಲ್ಲಿಯ ವಾಸ್ತವ್ಯದ ಪಕ್ಕಾ ಸುದ್ದಿಯು ನಿನಗೆ ಹೇಗೆ ಹತ್ತಿತು?"

"ಭಲೆ! ನಿಮಗೆ ಹೊರಗೆ ಎಷ್ಟು ಕೀರ್ತಿ ಲಭಿಸಿರುತ್ತದೆಂಬದು ನಿಮಗೇನು ಗೊತ್ತು? ಸುತ್ತುಮುತ್ತಲಿನ ಇಪ್ಪತ್ತೈದು ಹರದಾರಿಗಳಲ್ಲಿ ದಾರಿ ನಡೆಯುವಾಗ ಎಲ್ಲೆಲ್ಲಿಯೂ ನಿಮ್ಮ ಕೀರ್ತಿಯೇ ಕೇಳುತ್ತಿತ್ತು!"

"ಅದೇನಪ್ಪಾ!"

"ಅದೇನಂದರೆ—ಚೋದ್ಯಪುರದ ಮುಖ್ಯ ಜಮೀನದಾರನಿಗೆ ಇಬ್ಬರು ಬೈರಾಗಿಗಳು ಬಹು ದೊಡ್ಡ ಚಮತ್ಕಾರಗಳನ್ನು ತೋರಿದರು. ಅದರಿಂದಲೇ ಆತನು ತನ್ನ ಮನೆಯನ್ನೇ ಮಠವನ್ನಾಗಿ ಮಾಡಿ, ಅದರಲ್ಲಿ ನಿಮ್ಮಗಳನ್ನು ಸ್ಥಾಪಿಸಿದನು; ಮತ್ತು ತಾನೂ ವಿರಾಗಿಯಾದನು. ಆತನೂ ಮೆಲ್ಲಮೆಲ್ಲನೆ ಬೈರಾಗಿಯಾಗುವ ದಾರಿಗೆ ಹತ್ತಿರುವನಂತೆ! ಆದರೆ ನಿಮ್ಮ ಗಡ್ಡಗಳು ಕಳೆದೆರಡು ವರ್ಷಗಳಲ್ಲಿ ಬೆಳೆದಷ್ಟು ಆತನ ಗಡ್ಡಗಳು ಎರಡೇ ತಿಂಗಳಲ್ಲಿ ಹೇಗೆ ಬೆಳೆದಾವೆಂದು ನಾನು ನನ್ನಲ್ಲೇ ಅಂದುಕೊಂಡೆನು; ಆದರೂ ನನಗನಿಸುವದೇನಂದರೆ, ನೀವು ಇನ್ನು ಇಲ್ಲಿಯ ನಿಮ್ಮ ಬುವಾಬಾಜಿಯನ್ನು ಸಾವರಿಸಿಕೊಂಡು ಬೇಗನೆ ದಾರಿ ಹಿಡಿಯಬೇಕು. ಪೋಲೀಸರು ಫತ್ತರಗಡದ ಲೂಟಿಯನ್ನು ಮಾಡಿ ತಪಾಸುಹಚ್ಚಿದ್ದು, ಗುನ್ಹೆಗಾರ-ಸಾಥಿದಾರರ ಬಂಧನವು ಅವರಿಂದ ಬೇಗನೆ ಆಗಲಿದೆಯೆಂದು ತಿಳಿಯುತ್ತದೆ."

"ನಾವೂ ನಮ್ಮಗಳಲ್ಲಿ ಈ ವಿಚಾರ ನಡೆಸಿಯೇ ನಡೆಸಿರುವೆವು; ಆದರೆ 'ಶ್ರೀಮಂತರ ಮನೆಯಲ್ಲಿ ಕಾಲು ಸೇರುವುದು ಎಷ್ಟು ಕಠಿಣವೋ, ಒಳಗೆ ಬಿದ್ದ ಕಾಲು ಹೊರಹೊರಡಲಿಕ್ಕೂ ಅಷ್ಟೇ ಕಠಿಣವು' ಎಂದೆನ್ನುವ ಲೋಕಾ

ರೂಢಿಯ ಮಾತು ಸುಳ್ಳಲ್ಲ. ಇದು ಮಠವೆಂಥದು! ನನಗಿದು ಸೆರೆಮನೆಯೇ ಆಗಿದೆ. ನನ್ನ ಬಗ್ಗೆ ಇಲ್ಲಿ ಯಾರಿಗೂ ಇನ್ನೂ ಸಂಶಯ ಬಂದಿಲ್ಲವೆಂಬುದು ನಿಜವು; ಆದರೆ ನಮ್ಮ ವ್ಯವಸ್ಥೆಗೆಂದಾದರೂ ಮನೆಯ ಮಾಲಕನ ಮನುಷ್ಯನು ಇಲ್ಲಿ ಹಗಲಿರುಳೂ ಮಠದ ಕಾವಲಿಗೆಂದು ಇರುವನು. ನಾನು ಬಂದಾಗಿನಿಗಿಂತ ಹೋಗುವಾಗ ಅದೆಷ್ಟೋ ಹೆಚ್ಚು ಗದ್ದಲವುಂಟಾದೀತು; ಯಾಕೆಂದರೆ, ಮೊದಲು ನನ್ನ ಶಿಷ್ಯನಾಗಿದ್ದ ಈ ಮನೆಯ ಮಾಲಕನು ಸಹಸಾ ನನ್ನನ್ನು ಹೋಗಗೊಡಲಿಕ್ಕಿಲ್ಲ; ಮತ್ತು ಒಂದು ವೇಳೆ ಅವನು ಹೋಗಗೊಟ್ಟರೂ, ನಮ್ಮ ಕಳಊಟದ ಸಮಾರಂಭಗಳು ಎಷ್ಟೋ ದಿನ ನಡೆದಾವು"

"ಬಹೂತ ಅಚ್ಛಾ! ಮತ್ತು ಆ ಸತ್ಕಾರ-ಸಮಾರಂಭಗಳು ನಡೆದಿರುವಾಗ ಇಲ್ಲವೆ ಈ ಮಠದಲ್ಲಿ ಗುರುಪೀಠವನ್ನು ಸ್ಥಾಪಿಸಿ ನೀನು ಕುಳಿತಿರುವಾಗ ಪೋಲೀಸರು ಬಂದು ನಿನ್ನನ್ನು ಪ್ರತಿಬಂಧಿಸಿ ಕೈಗೆ ಬೇಡಿಗಳನ್ನು ತೊಡಿಸಿದರೆಂದರೆ. ಚೆನ್ನಾಗಿಯೇ ಶೋಭೆಯಾದೀತು!"

"ಇನ್ನು ಓಡಿ ಹೋಗುವುದೆಂದರೂ ಮುಂದೆ ಯಾವ ಪ್ರದೇಶಕ್ಕೆ ಹೋಗಬೇಕೆಂಬ ಬಗ್ಗೆ ವಿಚಾರ ಮಾಡುತ್ತಿರುವೆನು. ಆದರಿಂದಲೂ ಸ್ಥಿರವಾದ ಆಸನವು ಬೇಗನೆ ಚಲಿಸಲೊಲ್ಲದು. ನಾವು ಇಲ್ಲಿಂದ ಎಲ್ಲಿಗೆ ಹೊರಡಬೇಕೆಂಬ ಬಗ್ಗೆ ಒಂದಿಷ್ಟು ಸಲಹೆಯನ್ನು ನೀನಾದರೂ ಕೊಡಬಾರದೆ?"

'ಸಲಹೆಯನ್ನೇನು ಕೊಡಬೇಕು? ಇಲ್ಲಿಂದ ಮೂವತ್ತು-ಮೂವತ್ತೈದು ಹರದಾರಿಯ ಮೇಲೆ ರಾಮಗಡ ಸಂಸ್ಥಾನದ ಸೀಮೆ ಹತ್ತುತ್ತದೆ. ಆ ಸಂಸ್ಥಾನವು ಮುಸಲ್ಮಾನರದಿದೆ. ಅಲ್ಲಿ ನಿಮಗೆ ಪೋಲೀಸರ ಪಾಶವು ಬಂದು ಸೋಂಕಲಿಕ್ಕೆ ಬಹಳ ಪ್ರಯಾಸ ಬಿದ್ದೀತು; ಆದರೆ ನೀವಿಲ್ಲಿ ಸುಗ್ರಾಸವನ್ನು ತಿಂದುಂಡವರು. ಇಲ್ಲಿಯೂ ಕೆಲ ಕರಾಮತಿ ತೋರಿಸಿ, ಇಲ್ಲಿಯ ಕೆಲ ನೆನಪನ್ನು ಸಂಗಡ ಒಯ್ಯಬೇಕೆಂಬಿರುವಿರೋ? ಇಲ್ಲವೆ ಬರಿಗೈ ಅಲ್ಲಾಡಿಸುತ್ತ ಹೊರಡುವವರೊ?"

"ಆ ವಿಚಾರವಾದರೂ ಏನೂ ಇಲ್ಲೆಂತಿಲ್ಲ. ಇಲ್ಲಿಯ ಸ್ಮಾರಕಗಳೆಂದು ಕೆಲ ನಿರ್ಜೀವ ಹಾಗು ಕೆಲ ಸಜೀವ ವಸ್ತುಗಳನ್ನು ಸಂಗಡ ಒಯ್ಯುವ ಬೇತುಗಳು ಮನಸ್ಸಿನಲ್ಲೇ ನಡೆದಿರುತ್ತವೆ."

"ನಿರ್ಜೀವಗಳೇನೆಂಬುದು ತಿಳಿಯಿತು; ಆದರೆ ಸಜೀವಗಳೆಂದರೆ ನಿಮ್ಮ ಬಟ್ಟೆಗಳೊಳಗಿನ ತಗಣಿ-ಕೂರಿಗಳ ಹೊರತು ಮತ್ತೇನು ಒಯ್ಯತಕ್ಕವರು?"

"ಭಲೆ! ಅದೇಕಂತೆ? ಗುರುವು ಶಿಷ್ಯನಿಂದ ಪರಾಭವದ ಇಚ್ಛೆಮಾಡಬೇಕೆನ್ನುತ್ತಾರೆ; ಮತ್ತು ಜಂಬೂನ ಮನಸ್ಸಿನಂತೆ ಸಾಧಿಸಿದರೆ, ಅವನು ಇಲ್ಲಿ

ಯದೊಂದು ಸಜೀವ ನಡೆದಾಡುವ-ಮಾತಾಡುವ ಸ್ಮಾರಕವನ್ನು ಸಂಗಡ ಲೊಯ್ಯುವ ಸಂಭವವಿದೆ; ಆದರೆ ತೊಂದರೆಯೆನಿಸುವುದೇನಂದರೆ, ಓಡಿ ಹೋಗಲಿಕ್ಕೆ ನಾವು ಇಬ್ಬರೇ ಇಬ್ಬರು! ಅಲ್ಲದೆ ಕೈಯೊಳಗೆ ಖಡ್ಗಾದಿ ಶಸ್ತ್ರ ಗಳೇನೂ ಇರುವುದಿಲ್ಲ. ನೀನು ಆಗಲೆ ಅಂದಂತೆ ನಮ್ಮ ಆತ್ಮ ಸ್ವರೂಪ ದೋರುವ ಪ್ರಸಂಗವೂ ಬಂದೀತು; ಆದರೆ ಕೈಯೊಳಗಿನ ಈ ಬರೀ ಕಟ್ಟಿಗೆ ಯಿಂದೇನಾಗಬೇಕು?''

"ಒಟ್ಟಿನಲ್ಲಿ ಮಥುರಾರಾಣಿಯು ನಿನಗಿಂತಲೂ ಬುದ್ಧಿವಂತಳೇನೋ ನಿಜ. ಯಾಕಂದರೆ ನಿನಗುಂಟಾಗುವ ಈ ಐಶ್ವರ್ಯದ ಸಂಕಟವನ್ನು ಅವಳು ಕೇಳಿರುವಳು. ಅಂತೆಯೇ ನಿಮ್ಮ ಬಿಡುಗಡೆಗೆ ಸಹಾಯವಾಗಬೇಕೆಂದು ಅವಳು ನನ್ನೊಡನೆ ನಿಮಗೀ ಕಾಣಿಕೆ ಕಳಿಸಿರುತ್ತಾಳೆ.'' ಎಂದಂದು, ಆತನು ಹೊರ ಗಿನ ಕೋಣೆಯೊಳಗಿದ್ದ ಕಾವಡಿಯೊಳಗಿಂದ ತಕ್ಕೊಂಡು ಬಂದಿದ್ದ ದಪ್ಪನ್ನ ಅರಿವೆಯು ಉದ್ದನ್ನ ಎರಡು ಮೂರು ಪಟ್ಟಿಗಳನ್ನು ಬಿಚ್ಚಿದನು. ಆದರೊಳ ಗಿಂದ ಎರಡು ಮೂರು ಪುಟ್ಟ, ಆದರೆ ಸಾಣಿ ಹಚ್ಚಿ ಹದಗೊಳಿಸಿದ ಜಂಬಿಗೆಯಾ ಗಳೂ ಪಿಸ್ತೂಲುಗಳೂ ಹೊರಟವು! ಗುರುಮಹಾರಾಜರು ಅದನ್ನು ಕಂಡು ಆಶ್ಚರ್ಯಚಕಿತರಾಗಿ "ಮಥುರಾರಾಣಿಯ ದೂರದೃಷ್ಟಿಯನ್ನು ಎಷ್ಟು ಹೊಗ ಳಿದರೂ ಅಲ್ಪವೇ ಸರಿ; ಆದರೆ ನೀನು ದಾರಿಯಲ್ಲಿ ಇವನ್ನೆಲ್ಲ ಸಂಬಾಳಿಸಿ ಕೊಂಡು ಹೇಗೆ ಬಂದೆ?"

ಬೈರಾಗಿಗಳಿಗಿಂತ ಕಾವಡಿ ಧರಿಸುವ ಯಾತ್ರಿಕರ ವೇಷವೇ ಈ ಕೆಲ ಸಕ್ಕೆ ಹೆಚ್ಚು ಅನುಕೂಲದ್ದಿರುತ್ತದೆ. ನಿಮ್ಮ ಬೈರಾಗಿಗಳಿಗೆ ಇಂಥ ವಸ್ತು ಗಳನ್ನು ನಿಮ್ಮ ಚರ್ಮದ ಆಸನಗಳಲ್ಲಿ ಬಚ್ಚಿಡುವುದು ಕಠಿಣವು; ಆದರೆ ಕಾವಡಿಧಾರಿಗೆ ಹೆಚ್ಚಿನ ಅನುಕೂಲತೆಯಿರುತ್ತದೆ. ಅದೇನಂದರೆ, ಹೊರಗೆ ಬಿದರಿನ ಕಾವಡಿ. ಅವುಗಳ ಮುಚ್ಚಳ ತೆಗೆದ ಬಳಿಕ ತಾಮ್ರದ ತಗಡಿನ ಮುಚ್ಚಳಿಕೆಯಿಂದ ಮುಚ್ಚಲ್ಪಟ್ಟ ಗಿಂಡಿಗಳಿರುತ್ತವೆ; ಮತ್ತು ಅವುಗಳಲ್ಲಿ ತೀರ್ಥವಿರುತ್ತದೆಂಬ ತಿಳುವಳಿಕೆಯಿಂದ ಯಾವ ಮನುಷ್ಯರೂ ಅವುಗಳಿಗೆ ಕೈ ಹಚ್ಚುವದಿಲ್ಲ ಅದರಿಂದ ಆ ಗಿಂಡಿಗಳ ಹೊಟ್ಟೆಯೊಳಗಿನ ಜೀನಸುಗಳನ್ನು ಚೆನ್ನಾಗಿ ಬಚ್ಚಿಡಲು ಬರುತ್ತದೆ.''

"ಹಾಗಾದರೆ ನೀನೂ ಒಂದೆರಡು ದಿನ ಇಲ್ಲಿಯೇ ನಮ್ಮೊಡನಿರು. ಅಂದರೆ ಅದುವರೆಗೆ ಈ ಜೀನಸುಗಳು ಈ ಕಾವಡಿಯಲ್ಲಿ ಹೀಗೆಯೇ ಗುಪ್ತ ವಾಗಿರಲಿ; ಮತ್ತು ರಾತ್ರಿಯಲ್ಲೆದ್ದು ಓಡಿ ಹೋಗಲಿಕ್ಕೆ ಇಬ್ಬರ ಬದಲು ಮೂವರು ಜನರೂ ಆದೇವು.''

"ಹಾಗೇ ಆಗಲಿ; ನಿನ್ನ ಶಿಷ್ಯನು ನಮ್ಮೊಡನೆ ಬರುವವನೋ ಅಥವಾ ಜೊತೆಗೆ ಸಜೀವ ಒಯ್ಯುವದಿದೆಯೆಂದು ಬೇರೆ ರೀತಿಯಿಂದ ಬೇರೆ ಮಾರ್ಗವಾಗಿ ಹೋಗುವವನೋ?"

"ಇದನ್ನು ಈಗಲೆ ಹೇಳಬರುವಂತಿಲ್ಲ. ಆ ಸಜೀವವನ್ನೊಯ್ಯಲಿಕ್ಕೆ ಕದಾಚಿತ್ ವಾಹನದ ಅನುಕೂಲತೆಯಾದರೆ, ನಮಗೆಲ್ಲರಿಗೂ ಒಮ್ಮೆಲೆ ಹೋಗಬಂದೀತು."

"ಆದರಿನ್ನು ವಿಲಂಬವು ಸ್ವಲ್ಪವೂ ತರವಲ್ಲವೆಂಬದನ್ನು ಮಾತ್ರ ನಾನು ಖಂಡಿತವಾಗಿ ತಿಳಿಸುತ್ತೇನೆ ಪೋಲೀಸರು ನಮ್ಮಾಗಳ ಶೋಧದಲ್ಲಿರುವಂತೆ, ನಾವೂ ಅವರ ಶೋಧದಲ್ಲಿದ್ದೇವೆ. ಅದರಿಂದ ನನಗೆ ತಿಳಿದಿರುವುದೇನಂದರೆ, ಪೋಲೀಸ ಅಧಿಕಾರಿಗಳು ಬ್ರಿಟಿಶ ನಾಡಿನಂತೆ ಸಂಸ್ಥಾನೀ ಪ್ರದೇಶದಲ್ಲಿಯು ವಾರಂಟುಗಳನ್ನೆಲ್ಲ ಜೇಬಿನಲ್ಲಿರಿಸಿಕೊಂಡು ಸುತ್ತಮುತ್ತಲೂ ಸಂಚರಿಸುತ್ತಿರುವರು ನೀವು ಈ ಮಠದಲ್ಲಿ ಬಂದು ಸೇರಿರುವದು ಒಂದು ಬಗೆಯಿಂದ ಹೇಗೆ ಅಡಚಣಿಯಾಯಿತೋ, ಅದೇ ಇನ್ನೊಂದು ಬಗೆಯಿಂದ ಅನುಕೂಲವೂ ಆಗಿದೆ ಎನ್ನಬೇಕ; ಯಾಕಂದರೆ ಬೇರೆ ಕಡೆಗಳಂತೆ ಸರ ಗಂಗಾರಾಮರ ಈ ವಾಡೆಯಲ್ಲಿ ಪೋಲೀಸ ಅಧಿಕಾರಿಗಳಿಗೆ ತಮ್ಮ ಬೇತುಗಳನ್ನು ಹೇಗಾದರೂ ಅಮಲಿನಲ್ಲಿ ತರಲಾಗಲಿಕ್ಕಿಲ್ಲ. ಸ್ವಂತ ಸರ ಗಂಗಾರಾಮರು ಆನರರಿ ಮ್ಯಾಜಿಸ್ಟ್ರೇಟರಿರುತ್ತಾರೆ; ಆದರೆ ಅವರ ಆ ಹುದ್ದೆಯದೇ ಒಮ್ಮೊಮ್ಮೆ ಪೋಲೀಸರಿಗೆ ಅಡಚಣಿಯಾದೀತು!"

ಕಟ್ಟಕಡೆಗೆ ಗುರುಮಹಾರಾಜರು:—"ಈ ಬಗ್ಗೆ ನಾನು ಈಗ ಯೋಚಿಸಿ, ನಸಕಿನಲ್ಲಿ ಏನೆಂಬುದಕ್ಕೆ ನಿನಗೆ ಖಂಡಿತವಾಗಿ ತಿಳಿಸುವೆನು."

ಆ ಇಬ್ಬರು ಮೂವರು ಎದ್ದು ತಮ್ಮ ತಮ್ಮ ಕೋಣೆಗಳಿಗೆ ಮಲಗಲಿಕ್ಕೆ ಹೋದ ಬಳಿಕ, ಬನ್ಸೀಧರನೂ ಆ ಸಿಬ್ಬಣಿಕೆಯಿಂದಿಳಿದು ಮೆಲ್ಲನೆ ಹೋಗಿ ತನ್ನ ಕೋಣೆಯಲ್ಲಿ ಮಲಗಿಕೊಂಡನು.

ಬೆಳಗ್ಗ ಎದ್ದ ಮೇಲೆ ಚಹದ ಕಾಲಕ್ಕೆ ಆತನು ಕಣ್ಣುಗಳನ್ನುಜ್ಜಿಕೊಳ್ಳುತ್ತ ತಾನು ಮಲಗಿಕೊಂಡಿದ್ದ ಸೋಗನ್ನು ಚೆನ್ನಾಗಿ ತೋರಿಸಿದನು; ಮತ್ತು ನೋಡಲಿಕ್ಕೆ ಹೋಗದಿದ್ದ ನಾಟಕದ ಹಾಗು ನಾಟಕಗೃಹದ ವರ್ಣನಗಳನ್ನು ಚಚ್ಚಾಗಿ ಉಪ್ಪು-ಖಾರ ಹಚ್ಚಿ ಮಾಡಿದನು; ಯಾಕಂದರೆ ಆತನಿಗೆ ಖಾತ್ರಿಯಿದ್ದಿತೇನಂದರೆ, ಕೇಳಿಕೊಳ್ಳುವವರಲ್ಲಿ ನಿನ್ನೆ ರಾತ್ರಿಯಲ್ಲಿ ಯಾರೂ ಆ ನಾಟಕ ನೋಡಲಿಕ್ಕೆ ಹೋದ ಸಂಭವವು ಯತ್ಕಿಂಚಿತ್ತೂ ಇರಲಿಲ್ಲ.

———

ಚಂದುವು ಆಗಾಗ್ಗೆ ರಾತ್ರಿಯ ಕಾಲಕ್ಕೆ ತನ್ನ ಕೋಣೆಯ ಬಾಗಿಲ ವನ್ನು ಭದ್ರಪಡಿಸಿಕೊಂಡು ಮೇರಿಯ ಪತ್ರ ಹಾಗು ಆಕೆಯ ಬಗ್ಗೆ ಬಂದಿದ್ದ ಆ ತಂತಿಗಳನ್ನು ಪುನಃ ಪುನಃ ಹಿಡಿದುಕೊಂಡು ಕೂರುತ್ತಿದ್ದನು. ಆಗ ಆತನ ಮನಸ್ಸಿನಲ್ಲಿ ವಿಚಾರವುಂಟಾಗುತ್ತಿತ್ತೇನಂದರೆ, ಮೇರಿಯು ಸತ್ತದ್ದೇನೋ ನಿಜ; ಆದರೆ ಆಕೆಯ ಮರಣಕ್ಕೆ ನಿಜವಾದ ಕಾರಣವೇನಾಯಿತು? ಅವಳು ಏತರಿಂದ, ಎಷ್ಟು ದಿನ ಪೀಡಿತಳಾಗಿದ್ದಳು? ಕೊನೆಗೆ ಅವಳು ಯಾರ ಕಡೆಗಿದ್ದಳು? ಅವಳ ಪಶ್ಚಾತ್ ಅವಳ ಕಡೆಯವರಾರಿರುತ್ತಾರೆ? ಮುಂತಾದವುಗಳ ಬಗ್ಗೆ ಏನಾದರೂ ವಿಶ್ವಸನೀಯ ಮಾಹಿತಿ ದೊರಕಿಸಬೇಕು. ಒಂದು ದಿನ ತಂತಿಯ ಕಾಗದವನ್ನು ಕೈಯಲ್ಲಿ ತಕ್ಕೊಂಡು ಅವನು ಒಂದು ತಂತಿಯನ್ನು ಬರೆಯತೊಡಗಿದನು; ಆದರೆ ಮೊದಲು ಯಾರ ಹೆಸರಿಗೆ, ಎಲ್ಲಿಗೆ ತಂತಿ ಕಳಿಸಬೇಕೆಂಬ ಯೋಚನೆಯಲ್ಲೇ ಆತನು ಮುಂದುಗಾಣದಾದನು.

ಅವನಲ್ಲಿ ತಾ|| ೧೨ನೇ ಆಗಸ್ಟದ ಮೇರಿಯ ಸ್ವದಸ್ತೂರದ ಪತ್ರವಿದ್ದಿತು. ಆ ಅಕ್ಷರಗಳು ಆತನ ಪರಿಚಯದವೆಂದು ಆ ಕಾಗದವನ್ನು ಅವಳೇ ಬರೆದಳೆಂಬ ಬಗ್ಗೆ ಸಂದೇಹವಿರಲಿಲ್ಲ; ಆದರೆ ವಿಳಾಸಕ್ಕೆಂದು ಆ ಪತ್ರವನ್ನು ಮತ್ತೊಮ್ಮೆ ಚನ್ನಾಗಿ ಪರೀಕ್ಷಿಸಲು, ಅದರ ಮೇಲೆ ವಿಳಾಸವನ್ನೇ ಬರೆದಿಲ್ಲವೆಂಬದು ಆತನ ಲಕ್ಷ್ಯದಲ್ಲಿ ಬಂತು. ಬಳಿಕ ಆತನು ಆಕೆಯ ತಂತಿಯನ್ನು ನೋಡಲಾಗ ಅದರ ಮೇಲೆ ತಂತಿಕಳಿಸುವವನ ಸಹಿಯೇ ಇರಲಿಲ್ಲ! ತಂತಿಯ ಮೇಲೆ ಅದನ್ನು ಕಳಿಸುವವನ ಮನೆಯ ವಿಳಾಸಾದಿಗಳು ಬಹುಶಃ ಇರುತ್ತಿರುವದಿಲ್ಲ. ಬರೇ ಊರ ಹೆಸರಷ್ಟೇ ಇರುತ್ತದೆ. ಅದರಂತೆ ಆ ತಂತಿಯ ಮೇಲೂ 'ಲಂಡನ್ನ' ಎಂಬ ಅಕ್ಷರಗಳಿದ್ದವು; ಆದರೆ ಸಹಿಯೂ ಇರದಿರುವದೆಂತು? ಎಷ್ಟು ನೆನಪಿನಿಂದ ತಂತಿಕೊಟ್ಟವನು ಅದರ ಕೆಳಗೆ ತನ್ನ ಹೆಸರನ್ನೇಕೆ ಹಾಕಲಿಕ್ಕಿಲ್ಲ! ಅವನೇನು ಇನ್ನು ಒಂದೆರಡು ಶಬ್ದಗಳ ಫೀಗಾಗಿ ಅಂಜುತ್ತಿದ್ದನೇ? ತಾನಾಗಿ ತಂತಿ ಕೊಡುವ ಯಾವನೊಬ್ಬ ಮಿತ್ರನು ಆಗತ್ಯದವನೇ ಇರಬೇಕು! ಹಾಗಾದರೆ ತನ್ನ ಹೆಸರು ತಿಳಿಸುವದರಿಂದ ಆ ಆಗತ್ಯದ ಜೀವಾಳದಲ್ಲಿ ಭರತಿಯೇ ಉಂಟಾಗಲಾರದೆ?

ಹೇಗೋ ಇರಲಿ. ತಂತಿಯ ಸಂಗತಿಯ ಬಗ್ಗೆ ಪ್ರತ್ಯುತ್ತರವೆಂದು ಮತ್ತೆ ಮಾಹಿತಿ ತರಿಸುವ ಸಲುವಾಗಿ ಯಾರಿಗೆ ಬರೆಯಬೇಕೆಂಬದು ಆತನಿಗೆ ಹೊಳೆಯಲೊಲ್ಲದು. ಇನ್ನು ಮೇರಿಯ ಪತ್ರದ ಮೇಲೆ ವಿಳಾಸವಿದ್ದಿದ್ದರೂ ಪ್ರಯೋಜನವೇನು? ಆ ವಿಳಾಸಕ್ಕೆ ಬರೆಯುವದೆಂತು? ಆಕೆ ಸತ್ತ

ಬಳಿಕ ಇನ್ನು ಆ ವಿಳಾಸದ ಮೇಲೆ ಯಾರಿಗೆಂದು ಬರೆಯಬೇಕು? ಸ್ವತಃ ಆವಳಿಗೇ ಪ್ರತ್ಯುತ್ತರ ಬರೆಯುವದಿದ್ದರೆ ಮಾತ್ರ ಆ ವಿಳಾಸದ ಉಪಯೋಗವಾಗುತ್ತಿತ್ತು.

ಈ ಸಂಬಂಧದಲ್ಲಿ ಪತ್ರ ಬರೆದು ಮಾಹಿತಿ ತರಿಸುವವೆಂದರೆ ಚಂದುವಿಗಾಗಿ ಆ ಮಾಹಿತಿ ದೊರಕಿಸಿ ಕಳಿಸುವ ಶ್ರಮ ವಹಿಸಲಿಕ್ಕೆ ಹಿಂದು ಮುಂದೆ ನೋಡದಂತಹ ಚಂದೂನ ಕೆಲ ಜನ ಸ್ನೇಹಿತರು ಲಂಡನ್ನ ಮತ್ತು ಆಕ್ಸಫರ್ಡ-ನಲ್ಲಿದ್ದರು; ಆದರೆ ಅವರಿಗೆ ಬರೆದರೂ ಅವರಿಂದ ಮಾಹಿತಿ ದೊರಕುವ ಸಂಭವವು ಕಡಿಮೆಯೆಂವೇ ಚಂದೂನಿಗನಿಸುತ್ತಿತ್ತು. ಯಾಕಂದರೆ ಅವರಲ್ಲಿಯು ಬಹು ಸ್ವಲ್ಪಜನರೇ ಕ್ವಚಿತ್ ಪ್ರಸಂಗಗಳಲ್ಲಿ ಚಂದೂ ಮೇರಿಯರು ಏಕತ್ರಿತರಾಗಿದ್ದುದನ್ನು ಕಂಡಿರಬಹುದು; ಮತ್ತು ಈತನು ಔಪಚಾರಿಕ ರೀತಿಯಿಂದ ಅವರಿಗೆ ಆವಳ ಗುರ್ತುಮಾಡಿ ಕೊಟ್ಟಿರಬಹುದು; ಆನರೂ ಆವಳು ಇರುತ್ತಿರುವದೆಲ್ಲೆಂಬದು ಅವರಿಗೆ ಗೊತ್ತಿರುವ ಸಂಭವವಿರಲಿಲ್ಲ. ಅವಳಿರುವ ಮನೆಗೆ ತನ್ನ ಯಾವನೊಬ್ಬ ಗೆಳೆಯನೊಡನೆ ಆತನೆಂದೂ ಹೋಗಿರಲಿಲ್ಲ; ಮತ್ತು ನಿಜವಾಗಿ ಹೇಳುವುದಾದರೆ, ಅವರನ್ನು ಜೊತೆಗೆ ಕರೆಕೊಂಡು ಅವಳಲ್ಲಿಗೆ ಹೋಗಲಿಕ್ಕೆ ಆವಳ ಸ್ವಂತದ ಮನೆಯಾದರೂ ಇದ್ದಿತೆಲ್ಲಿ?

ತಂತಿಯ ಕಾಗದದಲ್ಲಿ ಸಹಿ ಇಲ್ಲವೆಂಬುದು ತಿಳಿದ ಬಳಿಕ ಚಂದೂನ ಮನಸ್ಸಿನಲ್ಲಿ ಒಂದು ಸಂದೇಹವು ಇಣುಕಿ ಹೋಯಿತೇನಂದರೆ, ಈ ತಂತಿಯು ಖೊಟ್ಟಿ ಬೇರೆ ಇರಲಿಕ್ಕಿಲ್ಲವಷ್ಟೇ? ಅಂದರೆ ಮೇರಿಯು ನಿಜವಾಗಿಯೂ ಸತ್ತಿರವೆ, ಅವಳ ಕೇಡನ್ನು ಬಯಸುತ್ತಿರುವ ಇಲ್ಲವೆ ತನ್ನ ಹಗೆತನವನ್ನು ಮನಸ್ಸಿನಿಂದ ಮಾಡುತ್ತಿರುವ ಯಾವನೊಬ್ಬ ಅಧಿಕಪ್ರಸಂಗಿ ದುಷ್ಟ ಕೇಡಿಯು ತನಗೀ ತಂತಿ ಕೊಟ್ಟಿರಬಹುದೇನು? ಇದರಾಚೆಗಿನದೊಂದು ಶಂಕೆಯೂ ಆತನ ಮನಸ್ಸಿನಲ್ಲಿ ಹೊಳೆದು ಹೋಯಿತು; ಆದರೆ ಅದು ಮೇಲಿನ ಕಲ್ಪನೆಗಿಂತ ಅಲ್ಪಾವಧಿ ಉಳಿದಿತ್ತು; ಹಾಗು ಆ ಕಲ್ಪನೆಯಿಂದ ಚಂದುವಿಗೆ ಸ್ವಂತದ ಬಗ್ಗೆ ನಗೆ ಬಂದಿತು ಒಂದಾನೊಂದು ಕಲ್ಪನೆಯು ತೀರ ಅಸಂಬದ್ಧ ಇಲ್ಲವೆ ಮೂರ್ಖತನದ್ದಿರುವದರಿಂದ ಅದು ಮನಸ್ಸಿನಲ್ಲಿ ಬಂದಿತೆಂದರೆ ದುಃಖಿತನಿಗೂ ನಗೆ ಬರಬೇಕು. ಆ ತಂತಿಯಿಂದ ಚಂದುವಿಗುಂಟಾದ ಆ ವಿಕ್ಷಿಪ್ತ ಕಲ್ಪನೆಯೆಂದರೆ, ಈ ತಂತಿಯನ್ನು ಸ್ವತಃ ಮೇರಿಯೇ ಕೊಟ್ಟಿದ್ದರೆ ಅದರಲ್ಲಿ ಆವಳ ಉದ್ದೇಶವೇನಿದ್ದೀತು? ಅವಳ ಸ್ವಭಾವವು ಒಂದಿಷ್ಟು ಚೇಷ್ಟೆ ವಿನೋದಪ್ರಿಯವಾಗಿದ್ದಿತೆಂಬದು ಅವನಿಗೆ ಗೊತ್ತಿತ್ತು; ಆದರೆ ಇಂಥ ಜೀವ ಹೋಗುವ ಇಲ್ಲವೆ ಪ್ರಸಂಗದಲ್ಲಿ ಎರಡನೆಯವರ ಜೀವ ಕಳೆಯುವ ಚೇಷ್ಟೆಯನ್ನು ಎಂಥ

ವಿನೋದಿಯಾದರೂ ಮಾಡುವ ಧೈರ್ಯವನ್ನೆಂತು ತಾಳುವನು? ಆದರೆ ಆ ವಿಷಯದ ನೇಮವನ್ನಾದರೂ ಹೇಗೆ ಹೇಳಬೇಕು?

ತಾರುಣ್ಯದ ನಗೆಚೇಷ್ಟೆಗಳಲ್ಲಿ ಎಷ್ಟೋ ಸಮಯಗಳಲ್ಲಿ ವಿನೋದಕ್ಕೆ ಸೀಮೆ ಉಳಿಯುವದಿಲ್ಲ ಮೇರಿಯು ಕದಾಚಿತ್ ತನ್ನ ಮನಸ್ಸಿನಲ್ಲಿ ಹಿಂದೀ ತರುಣರು ಇತ್ತ ಬಂದಾಗ ಸವಿಸವಿ ಮಾತಾಡುವರು ಲಗ್ನದ ವಚನವನ್ನೂ ಕೊಡುವರು ಕುಮಾರಿಕೆಯರ ಮೋಹಪಾಶದಲ್ಲಿ ಸಿಗಬೀಳುವರು; ಆದರೆ ಅವರ ಮನಸ್ಸಿನಲ್ಲಿ ನಿಜವಾದ ಪ್ರೇಮವೆಷ್ಟಿದೆಯೆಂಬ ಪರೀಕ್ಷೆಯು ಏತರಿಂದಾಗಬೇಕು? ವಿಲಾಯತಿಯಲ್ಲಿರುವಾಗಲೇ ಲಗ್ನವಾದರೆ ವಿಹಿತವು ಆ ಪ್ರಶ್ನೆಯೇ ಮುಗಿಯಿತು. ಪ್ರೇಮ-ವಿಶ್ವಾಸಗಳ ಪರೀಕ್ಷೆಯಾಯಿತು! ಆದರೆ ಇಂಗ್ಲಿಷ ಯುವತಿಯು ವಿಲಾಯತಿಯಲ್ಲುಳಿದು, ಹಿಂದೀ ತರುಣನು ಹಿಂದುಸ್ತಾನಕ್ಕೆ ಹೊರಟುಹೋದರೆ? ಆಗ ಅವರಿಬ್ಬರ ನಡುವಿನ ಅಂತರವಾಯಿತು ಐದಾರು ಸಾವಿರ ಮೈಲಿನದು! ಮತ್ತು ತಂತಿ-ಪತ್ರಗಳಿಗೊಂದಿಷ್ಟು ಮೋರೆತಪ್ಪಿಸಿಬಿಟ್ಟರೆ ಎಲ್ಲವೂ ತೀರಿಹೋಗುವದು. ಅದರಿಂದ ಈ ಯುವಕರ ಪ್ರೇಮ ಪರೀಕ್ಷೆ ಮಾಡಬೇಕಾದರೆ, ಇಂಥ ವಿಪರೀತ ತಂತಿಕೊಟ್ಟೇಮಾಡಬಂದೀತು; ಅಂದರೆ ಈ ತಂತಿಯ ಮೇಲೆ ಯಾವ ಪ್ರತಿಕ್ರಿಯೆಗಳು ನಡೆಯುವವೆಂಬದು ತಿಳಿದೀತು.

ನೀರಿನ ನೆಲೆ ನೋಡುವ ಒಂದು ರೀತಿಯು ಹೀಗಿದೆ. ಆ ನೀರಲ್ಲಿ ಹರಳು ಚೆಲ್ಲಿ ಕೊಟ್ಟು, ಅದು ತಳಕ್ಕೆ ಹೋಗಿ ತಲುಪಿ ಮೇಲೆ ಗುಳ್ಳೆ ಏಳಲಿಕ್ಕೆ ಎಷ್ಟು ಅವಕಾಶ ಹಿಡಿಯುವುದೆಂಬದನ್ನು ನೋಡಬೇಕು. ನನ್ನಲ್ಲಿಯ ಪ್ರೇಮದ ನೆಲೆ ನೋಡಲಿಕ್ಕೆ ಮೇರಿಯು ಈ ತಂತಿಯೆಂಬ ಹರಳನ್ನು ಚೆಲ್ಲಿ ಕೊಟ್ಟು ನೋಡಿರಬಹುದೇ? ನಾನು ಈ ತಂತಿಯಿಂದ ಅಂಜಿಬಿಟ್ಟು, ದುಃಖಿತನಾಗಿ ಅವಳ ಬಗ್ಗೆ ವಿಶೇಷ ವಿಚಾರಣೆಯನ್ನು ಕೂಡಲೆ ಮಾಡಿದರೆ, ಅದರ ಮೇಲಿಂದ ನನ್ನ ಮನೋಗತವನ್ನು ಅವಳು ಅನುಮಾನಿಸಬಹುದು; ಆದರೆ ನಾನು ಈ ತಂತಿಯ ಕಾಗದವನ್ನು ಜೇಬಿಗಿರಿಸಿ ಸುಮ್ಮನೆ ಕುಳಿತುಕೊಂಡರೆ, ಆ ಬಗ್ಗೆ ವಿಚಾರಣೆಯನ್ನೇನೂ ಮಾಡದಿದ್ದರೆ, ನಾನು ಅವಳಲ್ಲಿ ಖೊಟ್ಟಿ ಪ್ರೇಮ ತೋರಿದೆನೆಂಬ ಅನುಮಾನವು ಸ್ಪಷ್ಟವಾದೀತು ಬಳಿಕ ಮುಂದೆ ಏನಾದೀತೋ ಅದು, ಅವಳ ಮನಸ್ಸು ಹೇಗಿದ್ದಿತೋ ಅದನ್ನವಲಂಬಿಸುವದು. ಅವಳ ಪ್ರೇಮವು ನಿಜವಿದ್ದರೆ, ಅವಳು ಆ ವಿಶ್ವಾಸಘಾತದಿಂದ ದುಃಖಿಸಿಯಾದಾಳು; ಮತ್ತು ಅವಳ ಪ್ರೇಮವಾದರೂ ಅಂತಿಂತಹದೇ ಇದ್ದರೆ, ಅವಳು 'ಆತನ ಹಾಳು ಕಾಟ ತಪ್ಪಿತು!' ಎಂದಂದು, ತಾನು ಸ್ವತಃ ವಚನದಿಂದ ಮುಕ್ತಳಾಗಿ, ನನ್ನ ಮೇಲೆಯೇ ಮತ್ತೆ ಶಹಕೊಡಲಿಕ್ಕೆ ಸಿದ್ಧವಾಗುವಳು!

ಈ ವಿಕ್ಷಿಪ್ತ ಕಲ್ಪನೆಯು ಆತನಿಗೆ ರುಚಿಸಲಿಲ್ಲ. 'ಮೇರಿಯು ಮನದ ಪರೀಕ್ಷೆಯನ್ನು ಈ ರೀತಿಯಿಂದ ಮಾಡುವುದು ಅವಳಿಗಾಗಲಿ ನನಗಾಗಲಿ ಒಪ್ಪುವುದೇ?' ಆದರೆ ಕಲ್ಪನೆಯುಂಟಾದರೆ ಮತ್ತು ಅದರ ನಿವಾರಣವನ್ನು ಸಂಪೂರ್ಣ ಸಮಾಧಾನಕರವಾಗಿ ಮಾಡುವದೆಂದರೆ, ಈ ತಂತಿಯ ಸಂಗತಿಯ ಸಟಿ-ದಿಟಗಳ ನಿರ್ಣಯಕ್ಕಾಗಿ ಒಂದು ಕಾಗದವನ್ನು ಬೇರೆಯವರಿಗೆ ಬರೆದರೂ ಇನ್ನೊಂದನ್ನು ಅವಳ ವಿಳಾಸಕ್ಕೂ ಕಳಿಸಬೇಕು ನನ್ನ ಕೈಯಲ್ಲಿರುವ ತಂತಿಯು ಆ ವಿಕ್ಷಿಪ್ತ ಪತ್ರಕ್ಕೆ ಸಾಕಷ್ಟು ಆಧಾರವೂ ಪುರಾವೆಯೂ ಆದೀತು; ಇಲ್ಲವೆ ಚೇಷ್ಟೆಗೆ ಚೇಷ್ಟೆಯ ಉತ್ತರವೇ ದೊರೆತೀತು.

ಹೀಗೆ ಎಲ್ಲ ಬಗೆಯಿಂದಲೂ ಯೋಚಿಸಿ ಚಂದುವು ಹಾಗೆ ಕಾಗದಗಳನ್ನು ಕಳಿಸಿದನು. ಒಂದು ಪತ್ರವನ್ನು ಉದಯಶಂಕರನಿಗೆ ಬರೆದನು. ಅದರ ಜೊತೆಗೆ ಇತ್ತ ಬಂದಿದ್ದ ತಂತಿಯ ನಕಲನ್ನಿಟ್ಟು ಚಂದುವು ಅವನಿಗೆ ಬರೆದನೇನಂದರೆ:—"ಮೇರೀ ವೊಡಹಾಊಸಳ ಮಾಹಿತಿಯು ನಿನಗೆ ಹೆಚ್ಚಾಗಿರುವ ಸಂಭವವಿಲ್ಲ ಆದರೂ ನನ್ನ ಸಂಗತಿಯಲ್ಲಿರುವಾಗ ನೀನು ಅವಳನ್ನು ಯಾವಾಗಾದರೊಮ್ಮೆ ನೋಡಿರುವದು ಶಕ್ಯವಿದೆ. ಆದ್ದರಿಂದ ಪೋಷ್ಟಿನ-ಟೆಲಿಫೋನಿನ ಡಿರೆಕ್ಟರಿಗಳನ್ನು ನೋಡಿ ಇಲ್ಲವೆ ಇನ್ನಾವ ಉಪಾಯದಿಂದಲಾದರೂ ಅವಳ ಬಗ್ಗೆ ದೊರಕಬಹುದಾದಷ್ಟು ಮಾಹಿತಿಯನ್ನು ತೀವ್ರ ತಿಳಿಸುವ ಕೃಪೆ ಮಾಡಬೇಕು"

ಚಂದುವು ಇನ್ನೊಂದು ಕಾಗದವನ್ನು ಮಾರ್ಬಲ ಆರ್ಚದ ಪೋಷ್ಟ ಮಾಸ್ತರನಿಗೆ ಬರೆದನು. ಅದರಲ್ಲಿ:—"ನಾನೊಬ್ಬ ಅಪರಿಚಿತ ಮನುಷ್ಯನು ತಮಗೆ ಈ ಪತ್ರ ಬರೆದು ತೊಂದರೆ ಕೊಡುತ್ತಿರುವುದೇನೋ ನಿಜವು; ಆದರೆ ಅದನ್ನು ಕ್ಷಮಿಸಬೇಕು. ತಮಗೆ ಕಾಗದ ಬರೆಯಲು ಕಾರಣವೇನೆಂಬದು ನನಗೆ ತಲುಪಿದ್ದ ಇದರ ಜೊತೆಗಿರುವ ತಂತಿಯ ನಕಲಿನಿಂದ ತಿಳಿದೀತು. ಕೆಲ ಸ್ವಲ್ಪ ದಿನಗಳ ಮುಂಚೆ ಮೇರೀ ವೊಡಹಾಊಸ ಎಂಬ ಸ್ತ್ರೀಗೆ ನಾನು ಮುನ್ನೂರು ಪೌಂಡುಗಳನ್ನು ತಂತೀ ಮನಿಆರ್ಡರ ಮೂಲಕ 'ಕೇಅರ ಆಫ್ ದಿ ಪೋಷ್ಟ ಮಾಸ್ತರ, ಮಾರ್ಬಲ್ ಆರ್ಚ ಪೋಷ್ಟ' ಈ ಅಡ್ರೆಸ್ಸಿಗೆ ಅವಳು ಕಳಿಸಲು ತಿಳಿಸಿದ್ದರಿಂದ ಕಳಿಸಿದ್ದೆನು. ಆ ಹಣವನ್ನು ಕೊಡುವಾಗ ತಾವು ಅವಳ ಸಂಬಂಧದ ಕೆಲ ಗುರ್ತು-ಪರಿಚಯಗಳನ್ನು ಮಾಡಿಕೊಂಡಿರಬಹುದು. ಆದರೂ ಆ ಪರಿಚಯದ ಮೇಲಿಂದ ಆ ಸ್ತ್ರೀಯ ವಿಷಯದ ಕೆಲ ಮಾಹಿತಿಯನ್ನು ತಾವು ನನಗೆ ತಿಳಿಸಲು ಶಕ್ಯವಿದ್ದರೆ ನಾನು ತಮಗೆ ಅತ್ಯಂತ ಕೃತಜ್ಞನಾಗುವೆನು."

ಮೂರನೇ ಕಾಗದವನ್ನು ಆತನು ಕೆಂಟ ಪರಗಣೆಯೊಳಗಿನ ನೆವ್ಹಲ ಪೋರ್ಟ ಗ್ರಾಮದಲ್ಲಿಯ 'ಮಿರ್ಯಾಕಲ್' ಎಂಬ ಮನೆಯ ವಿಳಾಸಿಗೆ ಕಳಿಸಿದನು; ಆದರೆ ಅದನ್ನು ಅಲ್ಲಿಗೆ ಯಾರ ಹೆಸರಿಗೆ ಕಳಿಸಬೇಕೆಂಬದು ಗೊತ್ತಿರದ್ದರಿಂದಲೇ ಅವನು ಆ ಕಾಗದದ ಮೇಲೆ

"Next best friend of Mary Woodhouse, Miracle, Post Navalport, Country Kent, England" ಹೀಗೆ ವಿಳಾಸ ಬರೆದಿದ್ದನು.

ಆತನು ನಾಲ್ಕನೇ ಕಾಗದವನ್ನು ಯೂನಿಯನ್ ಚರ್ಚದ ಅಧಿಕಾರಿಗೆ ಬರೆದನು; ಮತ್ತು ಐದನೇ ಪತ್ರ ಕಳಿಸಿದ್ದು ಎಲ್ಲಕ್ಕೂ ಹೆಚ್ಚು ಮಾಹಿತಿ ದೊರೆತೀತೆಂಬ ನಂಬಿಗೆಯಿಂದ. ಯಾಕಂದರೆ, ಅವನು ಅದನ್ನು ಯು. ವು. ಬ್ರಿ. ಅ. ನ ಸೆಕ್ರೆಟರಿಯಾದ ಎಲ್. ಎನ್. ಪೇರಿಯ ಹೆಸರಿಗೆ ಕಳಿಸಿದ್ದನು. ಏಲೀನ ಪೇರಿಯು ಮೇರೀ ವೊಡಹಾಊಸಳ ದೂರಿನ, ಆದರೆ ಮಮತೆಯ ಆಪ್ತಳಿದ್ದು, ಅವಳು ಆ ಅಸೋಸಿಯೇಶನ್ನದ ಸನ್ಮಾನ್ಯ ಸೆಕ್ರೆಟರಿಯಾಗಿದ್ದಳು. ಲಂಡನ್ನ ಮತ್ತು ಆಕ್ಸಫರ್ಡಗಳ ನಿವಾಸದಲ್ಲಿ ಕೊನೆಯ ವರ್ಷ ಆ ಇಬ್ಬರಿಗೂ ಚಂದುವಿಗೂ ಹಲವು ಸಾರೆ ಭೆಟ್ಟಿಯಾಗುತ್ತಿತ್ತು. ಏಲೀನ ಪೇರಿಯು ಭಾವಿಕಳೂ ಧಾರ್ಮಿಕ ವೃತ್ತಿಯುವಳೂ, ಆದರೆ ಸ್ವಭಾವದಿಂದ ವಿನೋದಿಯೂ ಹಾಗು ಹೆಚ್ಚಾಗಿ ವಕ್ರೋಕ್ತಿ ಪ್ರಿಯಳೂ ಆಗಿದ್ದಳು; ಮತ್ತು ಯಾರಿಗಾದರೂ ನಡುವಂತೆ ಮರ್ಮಭೇದಕ ಮಾತನಾಡುವುದು ಆಕೆಗೆ ಹೆಚ್ಚಾಗಿ ಸಾಧಿಸುತ್ತಿತ್ತು. ಅವಳು ಸ್ವತಃ ಜೂಜು, ಸಿನೇಮಾ ಮುಂತಾದವುಗಳ ವಿರುದ್ಧಳಿದ್ದು, ಮೇರಿಯನ್ನು ತನ್ನ ಧ್ಯೇಯದ ಕಡೆಗೆಳೆದುಕೊಳ್ಳುವ ಬಗ್ಗೆ ಅವಳ ಪ್ರಯತ್ನವಿದ್ದಿತು. ಮೇರಿಯು ಹುಡುಗಾಟದ ಸ್ವಭಾವವನ್ನು ಕಂಡು ಅವಳಿಗೆ ಕೆಡಕೆನಿಸುತ್ತಿತ್ತು; ಹಾಗು ಅವಳು ಚಂದುವಿನೊಡನೆ ಲಗ್ನವಾಗಿ ಇಲ್ಲವೆ ಆಗಲಿಕ್ಕೆ ಹಿಂದುಸ್ತಾನಕ್ಕೆ ಹೊರಡುವ ಮಾತು ಹೊರಟಿತೆಂದರೆ, ಏಲೀನ ಪೇರಿಯು ಗೋಣು ಅಲ್ಲಾಡಿಸಿ:- "ಛೇ-ಛೇ! ಆ ಮಾತು ಕಾಲತ್ರಯಗಳಲ್ಲೂ ಘಟಿಸಲಾರದು. ಮೇರಿಯು ಹಿಂದುಸ್ತಾನಕ್ಕೆ ಹೋಗುವಳೇ! ದಾರಿ ನೋಡಿರಿ! ನಾನು ಇವಳನ್ನು ನನ್ನ ಶಿಷ್ಯಿಣಿಯನ್ನಾಗಿಯೂ ಜೋಗತಿಯನ್ನಾಗಿಯೂ ಮಾಡುವವಳಿದ್ದೇನೆ." ಏಲೀನಳು ಹೀಗೆಂದ ಬಳಿಕ ಎಲ್ಲರೂ ಚೇಷ್ಟೆಗಾಗಿ ನಗುವರು. ಬಳಿಕ ಚಂದುವು ಕೊಂಚ ಮ್ಲಾನವದನ ಮಾಡಿದನೆಂದರೆ, ಮೇರಿಯು ಏಲೀನಳೆದುರಿಗೇ ಅವನ ಚುಂಬನವನ್ನು ತಕ್ಕೊಳ್ಳುವಳು; ಹಾಗು 'ಮೂರ್ಖ ತರುಣಾ! ಈಗಾದರೂ ಖಾತ್ರಿ

ಯಾಯಿತಷ್ಟೇ?' ಈ ಹಾಗು ಇದೇ ಬಗೆಯ ಬೇರೆ ಹಲವು ಏಲೇನ ಪೇರಿಯ ವಿಷಯದ ನೆನಪುಗಳು ಚಂದೂನ ಸ್ಮರಣೆಯಲ್ಲಿ ಮರೆಯದಂತಿದ್ದವು.

ಬೇಡ-ಬೇಕು ಎಂದೆನ್ನುತ್ತ ಮನಸ್ಸುಗಟ್ಟಿಮಾಡಿ ಆತನು ಸ್ವತಃ ಮೋರೀ ವೋಡಹಾಲೂಸಳಿಗೂ ಒಂದು ವಿನೋದದ ಪತ್ರ ಬರೆದನು. ಅದು ಹೀಗಿದ್ದಿತು:—' ನಿನಗೆ ಸಾವು ಬಂದ ಒಳ್ಳೇ ಸುದ್ದಿಯನ್ನು ತಂತಿಯಿಂಧ ತಿಳಿಸಿದ ಬಗ್ಗೆ ನಿನಗೇನು ಇನಾಮು ಕೊಡಲಿ? ವಿನೋದಕ್ಕಾದರೂ ಕೆಲ ಮೇರೆ ಇರಬೇಕು ಈ ತಂತಿ ಕಳಿಸುವ ನಿನ್ನ ಹೇತುವು ನನ್ನ ಕುಚೇಷ್ಟೆ ಮಾಡಬೇಕೆಂದಿದ್ದಿತೋ ಅಥವಾ ನನ್ನ ಸತ್ವಪರೀಕ್ಷೆ ಮಾಡಬೇಕೆಂದಿದ್ದಿತೋ? ಏನೇ ಇರಲಿ. ನೀನಿತ್ತ ಬಂದ ಬಳಿಕ ನಿನಗೇ ಗುನ್ಹೆಯ ಮಾಫಿ ದೊರೆತೀತು ಗುನ್ಹೆಗಾರನಿಗೆ ಕ್ಷಮೆಮಾಡಿದರೆ ಹೆಚ್ಚಿನಗಿಂತ ಹೆಚ್ಚು ದಯೆತೋರಿಸಿದಂತಾಗುತ್ತದೆ; ಆದರೆ ನೀನು ಬಂದರೆ ನಿನಗೆ ಕ್ಷಮೆದೊರೆಕೀತು; ಅಲ್ಲದೆ ಮೇಲೆ ಇನಾಮೂ ದೊರತೀತು. ಆ ಇನಾಮಿನ ಹವಾಲಿಯನ್ನು ಮಾತ್ರ ಅಂತರಿಕ್ಷದಲ್ಲಿ ಹಾರಾಡಿದ ಯಾವ ಹಕ್ಕಿಗೂ ನಾನು ಕೊಡಲಾರೆನು; ಯಾಕಂದರೆ, ಹಕ್ಕಿಗಳೊಡನೆ ಸಂಬಂಧವಿಟ್ಟ ಅನುಭವವು ನನಗೆ ಚೆನ್ನಾಗಿ ಬಂದಿರುತ್ತದೆ; ಆದರೆ ಆ ಮೋಜಿನ ಸಂಗತಿಯನ್ನು ನೀನು ಇಲ್ಲಿಗೆ ಬಂದಾಗಲೇ ನಿನಗೆ ಸಮಕ್ಷ ತಿಳಿಸೇನು. ತಂತಿಗೆ ತಂತಿಯಿಂದಲೇ ಪ್ರತ್ಯುತ್ತರ ಕೊಡುವದು ಯೋಗ್ಯ; ಆದರೆ ನಿನ್ನಷ್ಟು ವಿನೋದಪೂರ್ಣ ತಂತಿಯನ್ನು ಸ್ವಲ್ಪದರಲ್ಲೇ ಬರೆಯುವ ಪಾತ್ರತೆಯು ನನ್ನಲ್ಲಿಲ್ಲ; ಮತ್ತು ನಿನಗಿದ್ದಷ್ಟು ವಿನೋದ ಪ್ರಕೃತಿಯೂ ಸದ್ಯಕ್ಕೆ ನನ್ನದಿಲ್ಲ''

ಚಂದುವು ಇಷ್ಟು ಪತ್ರಗಳನ್ನು ಬರೆದನು; ಆದರೆ ಎಲ್. ಎನ್. ಪೇರಿಯ ಹೊರತು ಬೇರೆ ಯಾರದೂ ನಿಜವಾಗಿ ಉಪಯೋಗವಾದೀತೆಂದು ಆತನಿಗೆ ಅನಿಸುತ್ತಿರಲಿಲ್ಲ; ಆದರೆ ನಿರಾಶೆಯ ಮನುಷ್ಯನಿಂದ ನಿರ್ವಿಕಾರ ಬುದ್ಧಿಯನ್ನು ನಡೆಸಿ ತೀರ ಯುಕ್ತಿಸಿದ್ಧವಾಗಿ ನಡೆಯಲಿಕ್ಕಾಗುವದಿಲ್ಲ. ಆತನು ಪತ್ರ ಬರೆಯುವ ಈ ಯಾವ ಉದ್ಯೋಗ ಮಾಡಿದ್ದನೋ ಅದಕ್ಕೆ ಉದಾಹರಣೆ ಬೇಕಾದರೆ—ಒಂದಾನೊಂದು ಕಾಲದಲ್ಲಿ ಸಮುದ್ರದಲ್ಲಿ ತುಫಾನವುಂಟಾಗಿ ಯಾವುದೊಂದು ಹಡಗಿಗೆ ಅಪಘಾತವಾಗುತ್ತದೆ; ಚುಕ್ಕಾಣಿ ಮುರಿಯುತ್ತದೆ; ಶೀಡುಗಳ ಹಗ್ಗಗಳು ಹರಿಯುತ್ತವೆ; ಅದರ ಪ್ರಾವರಣವು ಹರಿದುಹೋಗುತ್ತದೆ; ಕಟ್ಟಿಗೆಯೂ ಮುರಿದುಬೀಳುತ್ತದೆ. ಬರೇ ಒಂದೆರಡು ಮುರುಕು ಮುರುಕಾದ ಹುಟ್ಟುಗಳು ಬಾಕಿ ಉಳಿಯುತ್ತವೆ. ಅವುಗಳ ಸಾಧನದಿಂದ ಆ ತುಫಾನದ ಸಮುದ್ರದಲ್ಲಿ ಗಾಳಿಯ ಸ್ವಾಧೀನವಾಗಿ ಹಡಗು ಮತ್ತು ಅಂಬಿಗರು ಅಸಹಾಯ ಸ್ಥಿತಿಯಲ್ಲಿ ತೇಲುತ್ತ ನಡೆದಿರುತ್ತಾರೆ. ಅವರು ಯಾರ ಬಳಿಯಲ್ಲಿ ಏನೆಂದು

ಹಾಯ ಕೇಳಬೇಕು? ಮತ್ತು ಕೇಳದ ಹೊರತು ಸಹಾಯ್ಯಮಾಡುವ ಬುದ್ಧಿ
ಯು ಅದಾರಿಗಾಗಬೇಕು? ಆ ಮೇಲೆ ಆ ಅಂಬಿಗರೊಂದು ಹಂಚಿಕೆ ಮಾಡು
ತ್ತಾರೆ. ತಮ್ಮ ಸ್ಥಿತಿಯನ್ನು ಬರೆದು ಸಹಾಯ್ಯಮಾಡುವ ಬಿನ್ನಹ ಪತ್ರಿಕೆಯ
ಮೂರು-ನಾಲ್ಕು ಪ್ರತಿಗಳನ್ನು ಸಿದ್ಧ ಮಾಡಿ ಮೂರು-ನಾಲ್ಕು ಸೀಸೆಗಳಲ್ಲಿ
ಹಾಕಿ ಅವುಗಳ ಬಾಯಿಗಳನ್ನು ಚೆನ್ನಾಗಿ ಮುಚ್ಚಿ ಸಮುದ್ರದಲ್ಲಿ ಚೆಲ್ಲುತ್ತಾರೆ.
ದೈವದಿಂದ ಸಮುದ್ರದಲ್ಲೇ ಇಲ್ಲವೆ ದಂಡೆಯ ಮೇಲೆ ಯಾರಕೈಗಾದರೂ
ವುಗಳೊಳಗಿನ ಯಾವುದೊಂದು ಸೀಸೆ ಸಿಕ್ಕಿತೆಂದರೆ, ಸಹಾಯವೊದಗುವ
ಂಭವವಾಗುವದು; ಆದರೆ ಇಂಥ ಸೀಸೆಗಳ ಉಪಯೋಗವಾದ ಉದಾಹರಣೆ
ಕು ವಿಶ್ವಸನೀಯವಾಗಿ ದೊರೆಯುವದಿಲ್ಲ! ಚಂದುವಾದರೂ ಇಂದು ಅದೇ
ಮಾರ್ಗವನ್ನು ಹಿಡಿದಿದ್ದನು

ಉದಯಶಂಕರನಿಂದ ಬಂದ ಉತ್ತರದ ಸಂಗತಿಯು ಈ ಪ್ರಕಾರವಿತ್ತು:
ನೀನು ಪಾಸಾದ ತಂತಿಯನ್ನು ನಾನು ಕೊಟ್ಟಿದ್ದಕ್ಕೆ ನಿನ್ನಿಂದ ಕಳಿಸಲ್ಪಟ್ಟ
ಭಾರಪ್ರದರ್ಶಕ ತಂತಿಯು ತಲುಪಿತು ತದನಂತರ ನಿನ್ನ ಕಾಗದವೂ
ಂತು; ಆದರೆ ಅದರೊಳಗಿನ ವಿಷಯದ ಮಾಹಿತಿಯು ನಿನಗೆ ತಿಳಿಸುವ
ಂಗೆ ದೊರಕಲಿಲ್ಲೆಂಬ ಬಗ್ಗೆ ಖೇದವೆನಿಸುತ್ತಿದೆ; ಆದರೆ ನಾನು ಆ ಮಾಹಿತಿ
ದೊರಕಿಸುವ ವಿಷಯದಲ್ಲಿ ಮನಸರಿಯನ್ನೇನೂ ಮಾಡಿರುವದಿಲ್ಲ. ನೀನು
ತ್ರದಲ್ಲಿ ಬರೆದಿರುವ ಹೆಸರಿನ ಪ್ರಮದೆಗೂ ನನಗೂ ನೀನಿಲ್ಲಿರುವಾಗ ಎಲ್ಲಿ
ುರುತು ಮಾಡಿಕೊಟ್ಟಿಯೆಂಬುದು ನನಗಂತೂ ಸ್ಮರಿಸುವದಿಲ್ಲ. ಕದಾಚಿತ್
ನು ಪರಿಚಯ ಮಾಡಿ ಕೊಟ್ಟಿರಲೂ ಬಹುದು; ಆದರೆ ನಾನದನ್ನು ವ ರೆತಿ
ೇನೆ. ಯಾಕಂದರೆ, ವಿಲಾಯತಿಯಲ್ಲಿ ದಾರಿಯಲ್ಲಿ ಹೋಗ ಹೋಗು
ರುವಾಗ ಮಾಡಿ ಕೊಟ್ಟ ಗುರ್ತು-ಪರಿಚಯಗಳು ಗೀತೆಯಲ್ಲಿ ಹೇಳಿರು
ಂತೆ ಮಹಾಪೂರದಲ್ಲಿ ತೇಲಿಹೋಗುತ್ತಿರುವಾಗ ಕ್ಷಣದಲ್ಲಿ ಪರಸ್ಪರರಿಗೆ ಭೆಟ್ಟಿ
ಾಗಿ ದೂರಾಗುವ ಹುಲ್ಲುಕಡ್ಡಿಗಳಂತೆಯೇ ಸರಿ; ಆದರೆ ನೀನು ಇಲ್ಲಿ
ಯ್. ಸಿ. ಎಸ್ಸಿನಂತೆ ಇಲ್ಲಿಯ ಯಾವುದೊಂದು ಗುಪ್ತ ಸಾಮಾಜಿಕ ಪರೀಕ್ಷೆಗೆ
ಳಿತಿದ್ದೆಯೋ ಹೇಗೆಂಬದನ್ನು ನೀನು ನನಗೆ ಮೊದಲು ತಿಳಿಸು. ಇನ್ನು
ಳಿತಿದ್ದರೂ ನೀನು ಆ ಸಂಗತಿಯನ್ನು ಈ ಕಿವಿಯಿಂದ ಆ ಕಿವಿಗೆ ತಿಳಿಯ
ಡದಿರುವುದು ಆಶ್ಚರ್ಯವೆನಿಸುವುದಿಲ್ಲ. ತಂತಿಯಲ್ಲಿ ತಿಳಿಸಿದ ಮೇರೀ ಮೊಡ
ಲೂಸಳಲ್ಲಿ ನಿನ್ನ ಪ್ರೇಮ ಕುಳಿತಿದ್ದರೆ ನೀನು ಅದನ್ನು ಶಕ್ಯವಾದಷ್ಟು ಗುಪ್ತ
ಇರಿಸುತ್ತಿದ್ದೆ. ಅದನ್ನು ನೀನು ನಿನ್ನ ಕೋಟಿನ ಕಾಲರಿನ ಮೇಲೆ ಯಾವು
ಂದು ಬಿಲ್ಲೆಯಂತೆ ಹಚ್ಚಿಕೊಂಡು ಮೆರೆಸಿರಲಿಕ್ಕಿಲ್ಲವೆಂಬುದು ಖಂಡಿತವು.

ಇತ್ತ ಎರಡು ಪ್ರಕಾರದ ತರುಣ ಹಿಂದೀ ವಿದ್ಯಾರ್ಥಿಗಳು ನನಗೆ ದೊರಕುತ್ತಾರೆ. ಒಂದು ಪ್ರಕಾರವೆಂದರೆ, ಅವರ ಪ್ರೇಮದ ಬಾಂಬು ಗುಪ್ತವಾಗಿ 'ಟಾಯಿಮ್ ಫ್ಯೂಜ' ಹಚ್ಚಿದ್ದಿರುತ್ತದೆ; ಮತ್ತು ಆ ಬಾಂಬಿನ ಸ್ಫೋಟವಾದ ಮೇಲೆಯೇ ಅದು ಎಲ್ಲಿಯಾದರೂ ಇತ್ತೆಂದು ಜನರಿಗೆ ತಿಳಿಯುತ್ತದೆ. ನೀನು ಇಲ್ಲಿ ಬಾಂಬಿನ ಉದ್ಯೋಗದಲ್ಲಿ ತೊಡಗಿದ್ದರೂ ನಿನ್ನ ಬಾಂಬುಗಳು ಮೇಲೆ ವಿವರಿಸಿದಂತೆಯೇ ಇದ್ದಾವು! ಇನ್ನೊಂದು ವರ್ಗವು ಹೀಗಿರುತ್ತದೆ. ತನ್ನೊಡನೆ ಸಹಜವಾಗಿ ಮಾತಾಡುವ ಪ್ರತಿಯೊಬ್ಬ ತರುಣ ಇಂಗ್ಲಿಷ ಯುವತಿಯು ತನ್ನ ಖಾಸ ಪ್ರಿಯತಮೆಯೇ ಇರುವಳೆಂಬಂತೆಯೂ ಅವಳೊಡನೆ ಮುಂಚೆ ಲಗ್ನವಾಗಿರದಿದ್ದರೂ ಅದು ಬೇಗನೆ ಆದೀತು, ಎಂಬಂತೆಯೂ ಆತನು ತನ್ನ ಹಿಂದೂ ಮಿತ್ರರಿಗೆ ಭಾಸವಾಗಗೊಡಲಿಕ್ಕೆ ತಪ್ಪುವುದಿಲ್ಲ ಅದರಿಂದ ಆತನಿಗೆ ಆಗಾಗ್ಗೆ ಭೆಟ್ಟಿಯಾಗುವ ಸ್ನೇಹಿತನಿಗೆ ಭ್ರಮವಾಗುವುದೇನಂದರೆ, ಈ ಮರ್ದಪುರುಷನು ಡಝನಗಟ್ಲೆ ಇಂಗ್ಲಿಷ ಮಡದಿಯರನ್ನು ತನ್ನ ಜೊತೆಗೆ ಕರೆದೊಯ್ಯಲಿರುವನೋ ಏನೆಂಬೆನಿಸುವದು! ಯಾಕಂದರೆ, ಹಿಂದುಸ್ತಾನಕ್ಕೆ ಹೋಗಿ ಅವರು ಯಾವುದೊಂದು ವಿಧಿಯಿಂದ ಧರ್ಮಾಂತರ ಹೊಂದಿದರೆಂದರೆ, ಆ ಡಝನಗಟ್ಲೆ ರಮಣಿಯರನ್ನು ಆತನು ಇಲ್ಲಿಯ ಕಾಯಿದೆಗನುಸರಿಸಿ ಲಗ್ನವಾಗಲಿಕ್ಕೆ ಬಂದೀತು; ಆದರ ನಿಜವಾದ ವಸ್ತುಸ್ಥಿತಿಯಿರುವುದೇನಂದರೆ, ಅವರೊಳಗಿನ ಯಾವಳೊಬ್ಬಳೂ ಅವನನ್ನು ತನ್ನ ಬೂಟಿನ ತುದಿಯಿಂದ ಕೂಡ ಮುಟ್ಟಲಿಕ್ಕಿಲ್ಲ. ಇರಲಿ.

ಮೇರೀ ವೊಡಹಾಊಸ ಎಂಬ ಹೆಸರಿನ ರಮಣಿಯೊಡನೆ ನಿನ್ನ ಸಂಬಂಧವಿದ್ದಿತೇನೆಂಬ ಬಗ್ಗೆ ನಾನು ಹೆಚ್ಚು ವಿಚಾರಣೆ ಮಾಡಲಿಚ್ಛಿಸುವದಿಲ್ಲ; ಆದರೆ ಮನುಷ್ಯನು ಯಾವುದೊಂದು ಹೆಸರು ನೆನಪಿಟ್ಟು ಆ ಬಗ್ಗೆ ವಿಚಾರಣೆಯನ್ನೇ ಮಾಡಹತ್ತಿದೆನೆಂದರೆ ಅದು ಬೇರೆ ರೀತಿಯಿಂದಲೂ ಕಣ್ಣೆದುರು ಬಂದರೂ ಮನಸ್ಸಿಗೆ ಅಲ್ಲಿಂದಲ್ಲೇ ಸ್ವಲ್ಪಾದರೂ ಪ್ರತಿಬಂಧ ಮಾಡುತ್ತದೆ. ಮೊನ್ನೆ 'ಸಂಡೇ ನ್ಯೂಜ' ಎಂಬ ಸಚಿತ್ರ ವಾರಪತ್ರಿಕೆಯನ್ನೋದುತ್ತಿರುವಾಗ ಅದರಲ್ಲೊಂದು ಚಿತ್ರವು ಕಂಡಿತು. ನಾನು ಅದನ್ನು ಕತ್ತರಿಸಿಕೊಂಡು ಅದನ್ನೇ ನಿನಗೀಗ ಕಳಿಸುತ್ತಿರುವೆನು. ಇದರಿಂದ ನಿನಗೇನಾದರೂ ಪ್ರಯೋಜನವಾಗುವುದೋ ಹೇಗೊ ನೋಡಿಕೋ! ಹೆಸರಿನಂತೆಯೇ ಅನೇಕ ಹೆಸರಿರುತ್ತವೆ ಈ ಚಿತ್ರವಿದ್ದ ಬಳಿಕ ಗುರ್ತಿಗೆ ಬೇಕಾದ ನಿರ್ಣಾಯಕ ಗಮಕ ಸಿಕ್ಕೀತು; ಆದರೆ ಈ ಚಿತ್ರದ ಕೆಳಗೆ ಮೇರೀ ವೊಡಹಾಊಸ ಮತ್ತು ಟಾಮ ಕೂಪರ ಇವರ ಹೆಸರುಗಳಿದ್ದು, ಈ ಇಬ್ಬರು ಸಿನೇಮಾ ತಾರೆಗಳ ಲಗ್ನವು ಇದೀಗ ಆಯಿತು;

ಮತ್ತು ಒಂದು ವಿಖ್ಯಾತ ಸಿನೇಮಾ ಕಂಪನಿಯು ಇವರೊಂದಿಗೆ ನೌಕರಿಯ ಕರಾರು ಮಾಡಿ ಇವರನ್ನು ಆಸ್ಟ್ರೇಲಿಯಕ್ಕೆ ಕರೆದುಕೊಂಡು ನಡೆದಿದೆಯೆಂಬ ಸಂಗತಿಯಿದೆ ಈ ಶಕುನವಂತಿಯಲ್ಲಿ ನಿನ್ನ ಪ್ರಶ್ನೆಗೆ ಏನಾದರೂ ಉತ್ತರ ದೊರೆತರೆ ನೋಡು ನನ್ನ ಸ್ಥಳೀಕ ವಿಚಾರಣೆಯಲ್ಲಿ ಮಾತ್ರ ಈ ಮೇರಿಯ ಯಾವ ಮಾಹಿತಿಯೂ ದೊರೆಯಲಿಲ್ಲ. ತದ್ವಿರುದ್ಧವಾಗಿ ಶಂಕೆಯುಂಟಾಯಿ ತೇನಂದರೆ, ಆಗಸ್ಟ್ ೭ನೇ ಮಂಗಳವಾರ ದಿವಸ ಸತ್ತಿದ್ದ ಹಾಗು ೨ನೇ ಬುಧವಾರ ದಿವಸ ಸ್ಮಶಾನದಲ್ಲಿ ಹುಗಿಯಲ್ಪಟ್ಟ ಮೇರಿಯು ಇವಳು ಖಂಡಿತ ವಾಗಿಯೂ ಅಲ್ಲ; ಯಾಕಂದರೆ ಇವರ ವಿವಾಹದ ಪ್ರಸಿದ್ಧಿಯ ತಾರೀಖು ಆ ಮೃತ್ಯು ತಿಥಿಯ ನಂತರದ್ದೇ ಇದೆ. ಪ್ರೊಬೇಶನರ ಎಂದು ನಿನ್ನನ್ನು ಯಾವ ಜಿಲ್ಲೆಯಲ್ಲಿ ಆರಿಸಿರುತ್ತಾರೆ? ಇನ್ನು ಮುಂದಿನ ನಿನ್ನ ಅಧಿಕಾರದ ಹೆಚ್ಚಳವನ್ನು ತಿಳಿಸುವಾಗ ನೀನೊಬ್ಬ ಪ್ರಸಿದ್ಧ ಸಿವ್ಹಿಲಿಯನ್ನಿನಂತೆ ಹಿಂದೀ ಜನರನ್ನು ಶಿಕ್ಷಿಸುವ ಹೆಚ್ಚಿನ ಯಾವ ಅಧಿಕಾರ ದೊರೆತವೆಂಬ ಶಬ್ದದಿಂದಲೇ ಬಹುಶಃ ಬರೆದೀ. ನಿನ್ನ ಹೆಚ್ಚಳವೆಂದರೆ, ನೀನು ಹಿಂದೂ ಗುನ್ಹೆಗಾರರಿಗೆ ಮಾಡುವಂಥ ದಂಡದ ಹಾಗು ತುರಂಗದ ಶಿಕ್ಷೆಗಳ ವೃದ್ಧಿಯೇ ಆದೀತು ''

'ಮಾರ್ಬಲ್‌ಆರ್ಚ'ದ ಪೋಸ್ಟಮಾಸ್ತರನಿಂದ ಬಂದ ಉತ್ತರವು ಹೀಗೆ: 'ನೀವು ಕಳಿಸಿದ್ದ ೩೦೦ ಪೌಂಡಿನ ತಂತಿ ಮನಿಆರ್ಡರಿನ ಬಟವಡೆಯು ಇದೇ ಪೋಸ್ಟಿನಿಂದಾಯಿತು ಹಣಪಡೆದವಳ ಹೆಸರು ಮೇರೀವೂಡಹಾಊಸ ಎಂದಿತ್ತು. ಅವಳ ಗುರ್ತುಹೇಳುವ ಸಲುವಾಗಿ ಈ ವಿಭಾಗದೊಳಗಿನ ಮಿಡ್ ಲಂಡ ಬ್ಯಾಂಕಿನ ಒಬ್ಬ ಪರಿಚಯಸ್ಥ ನೌಕರನು ಬಂದಿದ್ದನು. ಆ ಗುರ್ತದ ಮೇಲಿಂದ ಹಾಗು ಅವಳ ಸಹಿಮಾಡಿಸಿಕೊಂಡು ಆ ಹಣವನ್ನು ಅವಳಿಗೆ ಕೊಡ ಲಾಯಿತು. ಆ ನಿಮ್ಮ ತಂತಿಯ ಹೊರತು ಆಕೆಯ ಹೆಸರಿಗೆ ಬಂದಂಥ ಯಾವ ಪತ್ರಗಳನ್ನೂ ಎಂದೂ ಬಟವಡೆಮಾಡಿದ್ದು ಇಲ್ಲಿಯ ಪೋಸ್ಟಮನ್ನನಿಗೆ ಸ್ಮರಿಸುವದಿಲ್ಲ. ಇದಕ್ಕೂ ಹೆಚ್ಚು ಮಾಹಿತಿಯು ಇಲ್ಲಿಂದ ನಿಮಗೆ ಸಿಗಲಿಕ್ಕೆ ಶಕ್ಯವಿಲ್ಲ.''

ಲಂಡನ್ನದೊಳಗಿನ ಯೂನಿಯನ್ ಚರ್ಚದ ಮುಖ್ಯ ಅಧಿಕಾರಿಯು ಚಂದೂನ ಪತ್ರಕ್ಕೆ ಹೀಗೆಂದು ಉತ್ತರ ಕಳಿಸಿದ್ದನು:-"ನಿಮ್ಮ ಪತ್ರದೊಳಗಿನ ಸಂಗತಿಯನ್ನೋದಿ ಆಶ್ಚರ್ಯವಾಯಿತು. ಕಾರಣ ಮೇರೀ ವೂಡಹಾಊಸ ಎಂಬ ಹೆಸರಿನ ಒಬ್ಬ ರಮಣಿಯ ಬಗ್ಗೆ ನಿಮ್ಮ ಪತ್ರದಲ್ಲಿ ಬರೆದ ತಾರೀಖಿಗೆ ಈ ಚರ್ಚದಲ್ಲೊಂದು ಧರ್ಮವಿಧಿಯಾದುದೇನೋ ನಿಜ; ಆದರೆ ಅದು ಅವಳ ಪ್ರೇತಸಂಸ್ಕಾರದ್ದೆಂದರೆ ದಫನವಿಧಿಯಾಗಿರದೆ ವಿವಾಹಸಂಸ್ಕಾರವಾಗಿತ್ತು!

ಲಗ್ನದ ರೆಜಿಷ್ಟರದಲ್ಲಿ ಆ ತಾರೀಖಿಗೆ ಅದೊಂದೇ ಲಗ್ನವು ಬರೆಯಲ್ಪಟ್ಟಿದ್ದು ಅದರೊಳಗಿನ ವಧು-ವರರ ಹೆಸರುಗಳು ಮೇರೀ ಮೊಡಹಾಊಸ ಮತ್ತು ಟಾಮ್ ಕೂಪರ ಎಂದಿರುತ್ತವೆ. ಇದರ ಮೇಲಿಂದ ನಿಮಗೆ ತಿಳಿದು ಬರ ಬಹುದೇನಂದರೆ, ನಿಮ್ಮನ್ನು ಯಾರಾದರೂ ಜಗ್ಗಿ ಕೊಳ್ಳಕ್ಕೆಳೆಯಹತ್ತಿದ್ದಾರೆ; ಅಲ್ಲದೆ ಇದರಿಂದ ನೀವೂ ನನ್ನನ್ನು ಅಲ್ಲಿಗೇ ಎಳೆಯಲು ಪ್ರಯತ್ನಿಸುತ್ತಿ ರುವಿರೆಂದೆನ್ನಬೇಕಾಗುತ್ತದೆ; ಆದರೆ ನೀವು ಹಾಗೆ ಮಾಡಲಿಕ್ಕೆ ಕಾರಣವೇನೂ ಇರದ್ದರಿಂದ, ನಾನು ಆ ಕಲ್ಪನೆಯನ್ನು ಗ್ರಾಹ್ಯವೆಂದು ತಿಳಿಯುವದಿಲ್ಲ. ಲಗ್ನ ರೆಜಿಷ್ಟರದ ಪುಸ್ತಕವು ಸಾರ್ವಜನಿಕ ಸ್ವರೂಪದ ಪುಸ್ತಕವಿರುವದರಿಂದ ನೀವು ಯೋಗ್ಯವಾದ ಫೀ ಮತ್ತು ಅರ್ಜಿಗಳನ್ನು ಕಳಿಸಿದರೆ, ಅದರ ಸರ್ಟಿ ಫಾಯಿಡ ಕಾಪಿಯನ್ನು ನಾನು ನಿಮಗೆ ಕಳಿಸಿಕೊಡಬಹುದು. ಆಯುಷ್ಯ ವಿಮೆಯ ಹಣ ಪಡೆಯುವ ಯಾವುದೊಂದು ಬೇಕಿದ್ದರೆ ಮಾತ್ರ ಅದರ ಬಗ್ಗೆ ಈ ತಂತಿಯಿಂದ ಜಾಗರೂಕರಾಗಬೇಕು.''

ಕೆಂಟ ಪರಗಣೆಯೊಳಗಿನ ನೆವ್ಹೆಲ್‌ಪೋರ್ಟ ಪೋಷ್ಟಿನ ಮಾಸ್ತರನು ಬರೆದು ತಿಳಿಸಿದ್ದೇನಂದರೆ, "ಈ ಊರಲ್ಲಿ 'ಮಿರ್‍ಯಾಕಲ್' ಎಂಬ ಹೆಸರಿನ ಮನೆಯಿರುವುದೆಂಬದನ್ನು ಕೇಳಿ ನಮಗದು 'ಮಿರ್‍ಯಾಕಲ್' ಅಂದರೆ ಆಶ್ಚ ರ್ಯವೇ ಅನಿಸಿತು; ಯಾಕಂದರೆ, ಈ ಊರ ಈ ಪೋಷ್ಟ ಆಫೀಸು ನನ್ನ ಕಡೆಗಿರಹತ್ತಿ ಹತ್ತು ವರ್ಷಗಳಾಗಿದ್ದು, ಈ ಗ್ರಾಮದೊಳಗಿರುವ ನೂರು ಮನೆ ಗಳೊಳಗಿನ ಪ್ರತಿಯೊಂದುವ್ಯಕ್ತಿಯು ನನಗೆ ಚೆನ್ನಾಗಿ ಪರಿಚಯದ್ದಿದೆಯೆನ್ನಿರಿ! ಮೇರೀ ಮೊಡಹಾಊಸ ಎಂಬ ಹೆಸರಿನ ರಮಣಿಯು ಅಥವಾ ಅವಳ 'ನೆಕ್ಸ್ಟ ಬೆಸ್ಟ ಫ್ರೆಂಡ' ಇವರಲ್ಲಾರದೂ ಇಲ್ಲಿಯವರಾರಿಗೂ ಮಾಹಿತಿಯಿರದ್ದರಿಂದ, ನಿಮ್ಮ ಪತ್ರವನ್ನು ಡೆಡ್ ಲೆಟರ ಆಫೀಸಿಗೆ ರವಾನಿಸಲಾಯಿತು. ಯಾವು ದೊಂದು ಮೃತಾತ್ಮವು ಅಲ್ಲಿಗೆ ಹೋಗಿ ಬೇಕಾದರೆ ಆ ಬಗ್ಗೆ ವಿಚಾರಣೆ ಮಾಡಿ ಕೊಳ್ಳಬಹುದು."

ಕೊನೆಯ ಉತ್ತರವು ಎಲ್. ಎನ್. ಪೇರಿಯಿಂದ ಬಂತು; ಆದರೆ ಅವಳಿಗೆ ಚಂದೂನ ಪತ್ರವು ಬೇಗನೆ ತಲುಪದಿದ್ದರೆ ಅವಳಿಂದ ಉತ್ತರವೇ ಬರುತ್ತಿರಲಿಲ್ಲ! ಆ ಪತ್ರದಲ್ಲಿ ಹೀಗೆ ಬರೆದಿದ್ದಿತು:—

'ನಿಮ್ಮ ಕಾಗದವು ಹಲವು ಕಡೆಗೆ ಸಂಚರಿಸಿ ಮೊನ್ನೆಯ ದಿನ ನನ್ನ ಕೈಗೆ ಬಂದು ತಲುಪಿತು. ಇಲ್ಲಿ ಶೋಧಿಸಿರಿ-ಅಲ್ಲಿ ಪತ್ತೆ ಹಚ್ಚಿರಿ ಎಂಬ ಅಕ್ಷರ ಗಳಿಂದ ಆ ಲಕ್ಕೋಟೆಯ ಮೇಲೆ ಹಿಂದೆ-ಮುಂದೆ ಹೆಚ್ಚಾಗಿ ಶರಾ ಬರೆದಿರು ವುದರಿಂದ ಅದಕ್ಕೆ ಇಜಿಪ್ತ ದೇಶದೊಳಗಿನ ಹಳೇ 'ಇಸ್ಸಿಕಾ' ಲೇಖದ

ಸ್ವರೂಪ ಬಂದಿತ್ತು; ಆದರೆ ನಿಮ್ಮ ಸುದೈವದಿಂದ ಅದು ನನ್ನ ಕೈಗೆ ಬಿದ್ದು, ಇಂದು ನಾನದಕ್ಕೆ ಉತ್ತರ ಬರೆದು ಕಳಿಸುತ್ತಿರುವೆನು. ಇಲ್ಲದಿದ್ದರೆ ನಾಳಿನ ಹಡಗದಿಂದ ನಾನು ಅಮೇರಿಕೆಗೆ ಹೊರಟು ಹೋಗಿದ್ದೆನೆಂದರೆ, ನಿಮ್ಮ ಕಾಗದವು 'ಡೆಡ್ ಲೆಟರ ಆಫೀಸಿ'ಗೇ ಹೋಗುತ್ತಿತ್ತು! ಅಮೇರಿಕೆಯು ನನ್ನ ಪ್ರಯಾಣವು ತೀರ ಆಕಸ್ಮಿಕವಾಗಿ ಗೊತ್ತಾಯಿತೆಂಬ ಸಂಗತಿಯು ಮಾತ್ರ ನಿಜ. ನಿಮ್ಮಿಂದ ಕ್ವಚಿತ್ತಾಗಿಯೇ ಯಾವುದೊಂದು ಕಾಗದ ಬರುವ ಸಂಭವವು ನನಗನಿಸುತ್ತಿತ್ತು; ಆದರೆ ನನಗೂ ನಿಮಗೂ ಮುಂಚಿನ ಪತ್ರವ್ಯವಹಾರವಿಲ್ಲ. ನನ್ನ ವಿಳಾಸವಾದರೂ ನಿಮಗೆ ಪಕ್ಕಾ ಗೊತ್ತಿರುವ ಕಾರಣವಿರಲಿಲ್ಲ. ಆದರಿಂದ ಕೊಂಚ ತೊಂದರೆಯಾಗುತ್ತಿದ್ದಿತೆಂಬದು ನಿಜವು.

'ಆದರೆ ನಿಜವಾಗಿ ಹೇಳಬೇಕೆಂದರೆ, ಮೇರೀ ಮೊಡಹಾಲೂಪಳ ಬಗ್ಗೆ ನಿಮಗೆ ಏನನ್ನು ಬರೆಯಬೇಕೆಂದೂ ನನಗೆ ಅನಿಸಲೊಲ್ಲದು! ಮೊದಲು ಆ ತಂತಿಯ ಅರ್ಥವು ನನಗೆ ತಿಳಿಯುವುದನ್ನು ನಾನು ನಿಮಗೆ ತುಸ ವಿವರಿಸಿ ಹೇಳುವೆನು; ಯಾಕೆಂದರೆ, ನನಗಂತೂ ಅದರೊಳಗಿನ ಶಬ್ದಗಳನ್ನು ಬರೆದವರು ಬೇಕಂತಲೇ ಲಾಕ್ಷಣಿಕ ಅರ್ಥದಿಂದ ಯೋಜಿಸಿರುವಂತೆ ತೋರುತ್ತದೆ. ಅದು ಹೇಗೆಂದರೆ:—ಮೇರಿ ಮೊಡಹಾಲೂಪಳು ಅಂದು ಬೆಳಗಿನ ಮೂರೂವರೆಗೆ ತೀರಿಕೊಂಡಳೆಂದು ಅದರಲ್ಲಿ ಬರೆಯಲಾಗಿದೆ; ಆದರೆ ಅವಳು ಶರೀರದಿಂದ ನಿಜವಾಗಿಯೂ ಸತ್ತಿರುವುದಿಲ್ಲ; ಅಂದರೆ ಶೀಲದಿಂದ-ಚಾರಿತ್ರ್ಯದಿಂದ ಸತ್ತಿರುತ್ತಾಳೆ! ಯಾಕೆಂದರೆ, ಕೊನೆಯು ವರೆಗೂ ನಿಮ್ಮೊಡನೆ ಲಗ್ನವಾಗುವ ತೋರಿಕೆಯನ್ನು ತೋರಿ, ಮುಂದಿಗೆ ಗೊತ್ತಾಗದಂತೆ ಆ ದಿನ ಬೆಳಗಿನ ಮೂರೂವರೆಗೆ ಅವಳು ತನ್ನೊಬ್ಬ ಲಫಂಗ ಪ್ರಿಯಕರನ ಕೈಹಿಡಿದು ಮನೆಯೊಳಗಿಂದ ಓಡಿಹೋಗಿರುವಳು. ಮುಂದಿನ ವಾಕ್ಯದಲ್ಲಿ ಬರೆದಿರುವುದೇನಂದರೆ, ಬೆಳಗಿನ ಒಂಬತ್ತು ಗಂಟೆಗೆ ಯೂನಿಯನ್ ಚರ್ಚದಲ್ಲಿ ಅವಳನ್ನು ಹೂಳಲಾಯಿತೆಂದು! ಆದರೆ ಅದರ ಅರ್ಥವು ಆ ಲಫಂಗನೊಡನೆ ಆಕೆಯ ಲಗ್ನವು ಬೆಳಿಗ್ಗೆ ಒಂಬತ್ತು ಗಂಟೆಗೆ ಯೂನಿಯನ್ ಚರ್ಚದಲ್ಲಿ ವಿಧಿಪೂರ್ವಕವಾಗಿ ಆಗಿ ಹೋಯಿತು. ಮೂರನೇ ವಾಕ್ಯದಲ್ಲಿ ಕೊನೆಯು ವರೆಗೂ ಅವಳ ತುಟಿಯ ಮೇಲೆ ನಿಮ್ಮ ಹೆಸರಿದ್ದಿತು, ಎಂದಿದೆ. ಇದರ ಅರ್ಥವು ಮುಂಚಿನ ದಿನ ರಾತ್ರಿ ಗುಡ್‌ನಾಯಿಟ್ ಎಂದು ಅಪ್ಪಣೆ ಪಡಕೊಂಡು ಮಲಗಲಿಕ್ಕೆ ಹೋಗುವಾಗ ಅವಳು ಮಾತಾಡಿದ್ದರಲ್ಲಿ ನಿಮ್ಮ ವಿಷಯಕ ಸಂಗತಿಗಳನ್ನೇ ತೆಗೆದಿದ್ದಳು; ಮತ್ತು ನಿಮ್ಮ ಪರೀಕ್ಷೆ ಪಾಸಾದ ಬಳಿಕ ನಿಮ್ಮ ಪತ್ರ ಬಂದ ಮೇರೆಗೆ ಹಿಂದುಸ್ತಾನಕ್ಕೆ ಹೊರಡುವ ಧ್ಯಾಸವು ಅಕೆಗೆ ಹತ್ತಿತ್ತೆಂಬ ಭಾಸ

ವನ್ನು ಅವಳು ತೋರುತ್ತಿದ್ದಳು. ಇದರ ಮೇಲಿಂದ ಅವಳು ನಿಮ್ಮ ದೃಷ್ಟಿಯಿಂದ ಸತ್ತಿದ್ದು, ಅವಳ ದಫನವಿಧಿಯಾಗಿ ಹೋಯಿತೆಂಬ ಸಂಗತಿಯು ನಿಜವಷ್ಟೆ?

'ಅವಳು ಸತ್ತು ಹೋದಳು, ಎಂದು ಒಮ್ಮೆಲೆ ನಿಮಗೆ ಹೇಳಿಬಿಟ್ಟರೆ ಅದರಲ್ಲಿಲ್ಲವೂ ಬಂದು ಹೋಯಿತು; ಅಂದರೆ ನಿಮ್ಮ ದುಃಖದ ಪರಮಾವಧಿಯಾಗಿ ಬಿಟ್ಟಿತು; ಮತ್ತು ಅವಳು ನಿಮ್ಮನ್ನು ಮೋಸ ಪಡಿಸಿ ತನ್ನ ಬೇತು ಸಾಧಿಸಿಕೊಂಡಳೆಂಬುದು ತಿಳಿಯಲು, ಮುಂದೆ ನಿಮಗಾವ ದುಃಖವಾದೀತೋ, ಅದು ಮೃತ್ಯುವಾರ್ತೆಯ ದುಃಖಕ್ಕಿಂತ ಯಾವಾಗಲೂ ಅಲ್ಪವೇ ಇದ್ದು, ಅದರಲ್ಲೇ ಸಮಾವೇಶವಾದೀತು. ನಿಮ್ಮೊಡನೆ ಯಾರೋ ಕಪಟವನ್ನಾಚರಿಸಿರುವರು; ಆದರೆ ಅವರು ಅದನ್ನು ಈ ಬುದ್ಧಿಯಿಂದ ಮಾಡಿರಬಹುದೇ?

'ಮೇರೀ ವೊಡಹಾಊಸಳ ಕುಟುಂಬದ ಹಾಗು ನನ್ನ ಋಣಾನುಬಂಧುತ್ವವು ಘನವಾದದ್ದು. ಆ ಮಾನದಿಂದ ನಿಮ್ಮ ಋಣಾನುಬಂಧುತ್ವವು ಏನೂ ಇಲ್ಲೆಂದರೂ ನಡೆದೀತು? ಮೇರಿಯು ನನ್ನೊಡನಿದ್ದಾಗ ಕ್ವಚಿತ್ತಾಗಿ ಯಾವುದೊಂದು ದಾರಿಯಲ್ಲಿ ಗಂಟುಬಿದ್ದು ಅವಳ ಸಂಬಂಧದ ಗುರ್ತನಿಂದ ನನ್ನ-ನಿಮ್ಮಲ್ಲಿ ನಾಲ್ಕು ಮಾತುಗಳೇನು ನಡೆದಿದ್ದವೋ ಅಷ್ಟೇ; ಆದರೆ ಆ ಕುಟುಂಬದೊಡನೆ ನನ್ನ ಸಂಬಂಧವಿದ್ದದ್ದು ಅವಳ ಸಾತ್ವಿಕರಾದ ತಾಯಿ-ತಂದೆಗಳ ಮೂಲಕ. ಆ ಬಡವರು ತೀರಿಕೊಂಡರು; ಮತ್ತು ಆ ಕೂಡಲೆ ಅವಳು ಬಸವಿಯಾದಳು! ಅವಳ-ನನ್ನ ಸ್ವಭಾವವು ಕೊಂಚವೂ ಹೊಂದುವಂತಿರಲಿಲ್ಲ; ಹಾಗು ನಿಮಗೆ ಒಮ್ಮೆಲೆ ಹೇಳಿ ಬಿಡುವುದೇನಂದರೆ, ಆ ಇದಿಯು ನಿಮ್ಮ ಕೊರಳಿಗೆ ಬೀಳದಿದ್ದದ್ದು ನಿಮ್ಮ ಮೇಲೆ ದೇವರ ಕೃಪೆಯೇ ಆಯಿತೆಂದು ತಿಳಿಯಿರಿ.

ನಾನು ಇಲ್ಲಿಯ ಯು. ಸಿ. ಬ್ರಿ. ಅ. ನ ಒಬ್ಬ ಸೆಕ್ರೆಟರಿಯಾಗಿದ್ದೇನೆ. ತದ್ವಿರುದ್ಧನಾಗಿ ಮೇರೀ ವೊಡಹಾಊಸಳು ಅಮಲಗ್ರಸ್ತ, ಜೂಜಾಡುವ, ಬದ್‌ಮಾಷ್ ಹಾಗು ಸಟ್ಟಾಬಾಜಿಯ ಚಟವುಳ್ಳವರೂ ಅವರ ಆಶ್ರಿತರಾದ ಸಿನೇಮಾ ಸ್ಟಾರ್ಸರೂ ಇವರ ಸಂಗತಿಯಲ್ಲಿ ಯಾವಾಗಲೂ ಇರತಕ್ಕಂಥವಳು? ಇದರ ಮೇಲಿಂದ ನನ್ನ-ಅವಳ ರಹಸ್ಯವು ಎಷ್ಟಿದ್ದೀತೆಂಬುದು ನಿಮ್ಮ ಲಕ್ಷ್ಯದಲ್ಲಿ ಬಂದೀತು ಅವಳ ಶೀಲ ಮತ್ತು ಚಾರಿತ್ರ್ಯಗಳು ಹೀಗೆ. ಅಂತೆಯೇ ಅವಳ ಜಾಲದೊಳಗಿಂದ ನೀವು ಮುಕ್ತರಾದ ಬಗ್ಗೆ ನಾನು ನಿಮ್ಮ ಅಭಿನಂದವನ್ನೇ ಮಾಡುತ್ತೇನೆ.

'ಅವಳು ತನ್ನ ನಿಜ ಸಂಗತಿಯನ್ನು ಬಹು ಚಾತುರ್ಯದಿಂದ ಕೊನೆ

ಯು ವರೆಗೂ ನಿಮ್ಮಿಂದ ಬಚ್ಚಿಟ್ಟದ್ದಳೆಂಬಂತೆ ತೋರುತ್ತದೆ. ನಿಮ್ಮ ಎದು ರಿಗೆ ನಾನು ನಿಮ್ಮನ್ನು ಹೊಗಳಬೇಕೆಂತಿಲ್ಲ; ಆದರೆ ನಿಮ್ಮ ನಡತೆಯು ಸಹಜ ವಾಗಿ ನನ್ನ ಲಕ್ಷ್ಯದಲ್ಲಿ ಬಂದದ್ದರ ಮೇಲಿಂದ ನೀವು ಸ್ವತಃ ಸದ್ಗುಣಿಗಳೂ ಸೌಜನ್ಯಪೂರ್ಣರೂ ಇರುತ್ತೀರೆಂಬದು ನನಗೆ ಖಾತ್ರಿಯಾಗಿದೆ; ಮತ್ತು ಈ ಇದಿಯು ನಿಮ್ಮ ಕೊರಳಿಗೆ ಬಿದ್ದಿದ್ದರೆ ನಿಮಗೆ ಕಷ್ಟ-ವಿಡಂಬನೆಗಳೆಷ್ಟಾಗು ತ್ತಿದ್ದವೆಂಬುದರ ಕಲ್ಪನೆಯು ನನಗಾಗುತ್ತಿದೆ ಅಂತೆಯೇ ನಾನು ನಿಮ್ಮನ್ನು ಅಭಿವಂದಿಸುತ್ತೇನೆ; ಯಾಕಂದರೆ, ನಿಮ್ಮಲ್ಲಿ ಪ್ರೇಮವುಂಟಾದ ಬಗ್ಗೆ ಮೇರಿ ಯು ಯಾವ ನೋಟವನ್ನೂ ಯಾವ ನಾಟಕವನ್ನೂ ತೋರಿಸಿದಳೋ, ಆಕೆ ಯು ನಿಮ್ಮ ಸದ್ಗುಣಗಳಲ್ಲಿ ಮೋಹಿಸಿರುವುದರಿಂದಲ್ಲ! ಆದರೆ ನಿಮ್ಮ ಸುರೂಪ ವನ್ನು ಹಾಗು ಅದಕ್ಕಿಂತಲೂ ಹೆಚ್ಚೆಂದರೆ, ನಿಮ್ಮ ಸಂಪತ್ತನ್ನು ಕಂಡು.

'ನಿಮ್ಮಂತಹ ಗರ್ಭ ಶ್ರೀಮಂತ ತರುಣ ವಿದ್ಯಾರ್ಥಿಗಳು ಇತ್ತ ಕಡೆಗೆ ಬರುತ್ತಾರೆ. ಇಲ್ಲಿ ಹೇಗೆ ವರ್ತಿಸಬೇಕೆಂಬದು ಅವರಿಗೆ ಚೆನ್ನಾಗಿ ತಿಳಿಯುವ ದಿಲ್ಲ. ಮನುಷ್ಯನು ಪರದೇಶಗಳಲ್ಲಿ ಜೀನಹಂಕ ವೃತ್ತಿಯನ್ನಿಡಬಾರದೆಂಬ ದು ನಿಜ; ಆದರೆ ಅನವಶ್ಯಕ ಉದಾರತನದಿಂದ ತಮ್ಮ ನಿಜವಾದ ಯೋಗ್ಯತೆ ಗಿಂತ ತಾವು ಹೆಚ್ಚು ಶ್ರೀಮಂತರಿರುತ್ತೇವೆಂಬದನ್ನು ಭಾಸವಾಗಗೊಡ ಬಾರದು. ಇಲ್ಲಿ ನಿಮ್ಮ ಕಾಲೇಜುಗಳ ಗೆಳೆಯರು ನಿಮ್ಮನ್ನು 'ಪ್ರಿನ್ಸ' ಎಂಬ ಶಬ್ದದ ಹೊರತು ನಿಮ್ಮ ಹೆಸರಿನ ಉಲ್ಲೇಖ ಮಾಡುತ್ತಿರಲಿಲ್ಲೆಂಬುದು ನಿಮಗೆ ಸ್ಮರಿಸುತ್ತಿರಬಹುದು; ಮತ್ತು ಹಿಂದೂ ಸಂಸ್ಥಾನಿಕ ಇಲ್ಲವೆ ರಾಜ ಪುತ್ರನೆಂದ ಮಾತ್ರಕ್ಕೆ ಆತನ ಖರ್ಚಿಕತನದ ಬಗ್ಗೆ ಇತ್ತಕಡೆಯ ಜನರ ಅಪೇಕ್ಷೆಯೇನಿರುತ್ತದೆಂಬದರ ಕಲ್ಪನೆಯು ನಿಮಗಿದ್ದೀತು.

'ಹಿಂದುಸ್ಥಾನದೊಳಗಿನ ಶ್ರೀಮಂತ ತಂದೆ-ತಾಯಿಗಳು ಈ ವಿಷಯ ದಲ್ಲಿ ಹೆಚ್ಚಾಗಿ ದೋಷಿಗಳಾಗುತ್ತಾರೆ. ತಮ್ಮ ಹುಷಾರ ಮಗನು ವಿಲಾ ಯತಿಗೆ ಆಯ್. ಸಿ. ಎಸ್. ಪರೀಕ್ಷೆಗೆಂದು ಹೋಗಲು, ಅವನು ಕೇಳಿದ್ದ ಕ್ಕಿಂತ ಹೆಚ್ಚು ದುಡ್ಡಿನ ಮಳೆಯನ್ನು ಅವರು ಅವನ ಮೇಲೆ ಸುರಿವರು. ತಮ್ಮ ಮಗನನ್ನು ಯಾರೂ ಜೀನಹಂಕನೆನಬಾರದೆಂದೂ ಆತನ ದೈನ್ಯವು ಕೊಂಚವೂ ತೋರಬಾರದೆಂದೂ ಅವರ ಉದ್ದೇಶವಿರುತ್ತದೆ; ಮತ್ತು ಬೇರೆ ಯೋಚನೆ ಏನಂದರೆ, ಮಗನು ದೂರ ಪರದೇಶಕ್ಕೆ ಹೋಗಿರುತ್ತಾನೆ; ಅವ ನನ್ನು ಸುಖಿಯನ್ನಾಗಿರಿಸುವದು ತಮ್ಮ ಕರ್ತವ್ಯವೇ ಸರಿ. ನಿಮ್ಮ ಶ್ರೀಮಂತ ತಂದೆಯುವರಂತೂ ಮಗನು ಆಯ್. ಸಿ. ಎಸ್. ಆಗುವದೆಂದರೆ, ಸ್ವರ್ಗ ವನ್ನೇ ಕೆಳಗಿಳಿಸಿದಂತೆಂದು ನಿಮ್ಮ ಯಾವನೊಬ್ಬ ಮಿತ್ರನ ಬಾಯಿಂದ ಕೇಳಿ

ರುತ್ತೇನೆ. ಆಯ್. ಸಿ. ಎಸ್‌ನಿಂದ ಹಿಂದುಸ್ತಾನದಲ್ಲಿ ಮುಂದೆ ನಿಮಗುಂಟಾಗುವ ಐಶ್ವರ್ಯದ-ವೈಭವದ ವೇಧವೇ ಇಲ್ಲಿ ಮೊದಲು ಹತ್ತಿರುವಂತೆ ಅವರು ನಿಮಗೆ ನಡೆಯಲಿಕ್ಕೆ ಕಲಿಸುತ್ತಿರಬೇಕು. ನೀವು ಮೇರಿಯ ಸಲುವಾಗಿ ಎಷ್ಟು ದುಡ್ಡು ಖರ್ಚು ಮಾಡಿದಿರಿ; ಹಾಗು ಕೇವಲ ನಿಮ್ಮ ಸ್ವಂತದ ಅನುಕೂಲತೆಗಾಗಿ ಎಷ್ಟು ಖರ್ಚು ಮಾಡಿದಿರಿ, ಇದು ನಿಮ್ಮದು ನಿಮಗೇ ಗೊತ್ತಿದ್ದೀತು! ಆದರೆ ಹಿಂದುಸ್ತಾನಕ್ಕೆ ಹೊರಡುವ ಸಿದ್ಧತೆಗೆಂದು ನೀವು ಹಿಂದುಸ್ತಾನಕ್ಕೆ ಹೋದ ಬಳಿಕ ಅವಳಿಗೆ ಯಾವ ಮುನ್ನೂರು ಪೌಂಡು ತಂತಿಯ ಮೂಲಕ ಕಳಿಸಿದಿರೋ ಅದರದೇನಾಗಿದ್ದೀತೆಂಬ ಕಲ್ಪನೆಯನ್ನು ನೀವು ಈಗಲಾದರೂ ಮಾಡಿರಿ!

'ಇಲ್ಲಿ ನಿಮ್ಮ ಸ್ವತಂದ ಲಕ್ಷ್ಯವು ನಾಚು ರಂಗು ಮುಂತಾದ್ದರ ಕಡೆಗೆ ಕೊಂಚವೂ ಇರಲಿಲ್ಲೆಂದು ನನ್ನ ಅನುಮಾನವಿದೆ. ನೀವು ನಿಮ್ಮ ಅಭ್ಯಾಸದಲ್ಲಿ ಹೆಚ್ಚು ಲಕ್ಷ್ಯವಿತ್ತಿದ್ದಿರೆಂದೇ ನೀಮಗೆ ಎಂ. ಎ., ಬ್ಯಾರಿಸ್ಟರ ಮತ್ತು ಆಯ್. ಸಿ. ಎಸ್. ಪಾಸಾಗ ಬಂದಿತು; ಆದರೆ ಕೊನೆಗೂ ನಿಮಗೀ ರಮಣಿಯ ಕಪಟವು ತಿಳಿಯಲಿಲ್ಲೆಂಬದು ಮಾತ್ರ ನಿಜವು!

'ಮೇರಿಯು ನೋಡಲಿಕ್ಕೆ ಸುಂದರಳಿದ್ದಳೆಂಬದು ನನಗೆ ಸಮ್ಮತವಿದೆ. ಅವಳ ಬಳಿಯಲ್ಲೊಂದು ಬಗೆಯ ಮೋಹಕ ಮೋಹಿನಿಯಿದ್ದಿತು; ಆದರೆ ನಿಮ್ಮ ಹಿಂದುಸ್ತಾನದಲ್ಲಿ ಇಂಥ ಸುಂದರ ಕುಮಾರಿಕೆಯರಿರುವದೇ ಇಲ್ಲವೇ? ನನಗೆ ಖಾತ್ರಿ ಅನಿಸುವದೇನಂದರೆ, ನಿಮ್ಮ ಪ್ರೀತಿಯ ತಂದೆ-ತಾಯಿಗಳು ನಿಮಗಾಗಿ ಯಾವಳೊಬ್ಬ ಸುಂದರ ಉಪವರ ಕನ್ಯೆಯನ್ನು ಶೋಧಿಸುವದರಲ್ಲಿ ಗರ್ಕರಾಗಿದ್ದಾರು; ಮತ್ತು ಇವಳಿಗಿಂತಲೂ ಅವಳು ವಿಹಿತ ಎಂಬಂತಿರುವ ಹತ್ತೆಂಟು ಮಂದಿ ಕುಮಾರಿಕೆಯರು ನೀವು ಮರಳಿ ಹೋದ ನಂತರ ವಿವಾಹೇಚ್ಛುಗಳೆಂದು ನಿಮಗೆ ತೋರಿಸ ಬರುತ್ತಿರಬಹುದು; ಆದರೆ ಇವಳ ಮೋಹಕ್ಕೆ ಬಲಿಬಿದ್ದು, ವಿವಾಹವಾಗುವ ಬಗ್ಗೆ ನೀವು ಇವಳಿಗಾವ ವಚನವಿತ್ತಿರೋ, ಅದರಿಂದ ನೀವು ನಿಮ್ಮ ತಂದೆ-ತಾಯಿಗಳಿಗೆ ಖಂಡಿತವಾಗಿಯೂ ಘಾತಮಾಡಿದಂತಾಗಲಿಲ್ಲವೇ?

'ಮಿಶ್ರವಿವಾಹಗಳಿಗೆ ಮೂಗುಮುರಿಯುವವಳು ನಾನಲ್ಲ; ಆದರೆ ಮಿಶ್ರವಿವಾಹ ಮಾಡುವಾಗ ಕೂಡ ವಧೂವರರ ಸ್ವಭಾವದ, ಶೀಲದ, ಚಾರಿತ್ರ್ಯದ ಹಾಗು ಧ್ಯೇಯಗಳ ಪರೀಕ್ಷೆಯು ಉಭಯ ಪಕ್ಷದಿಂದಲೂ ಆಗಬೇಕಷ್ಟು ಆಗುವದಿಲ್ಲೆಂದು ಅನ್ನಬೇಕಾಗುತ್ತದೆ; ಹಾಗು ಮೊದಲೇ ಆದ ವಿಷಮ ವಿವಾಹದಲ್ಲಿ ಈ ಇತರ ಸಂಗತಿಗಳ ವಿಷಮತೆಯು ಭರ್ತಿಯಾಯಿ

ತೆಂದರೆ ಪರಿಣಾಮಗಳು ಹೀಗೆಯೇ ಆಗುತ್ತ ಹೋದಾವು! ಇತ್ತ ಕಡೆಯ ಹುಡುಗಿಯರೊಡನೆ ಲಗ್ನವಾಗುವ ಹವ್ಯಾಸಕ್ಕೆ ಬಿದ್ದ ಹುಡುಗರಲ್ಲಿ ನೂರಕ್ಕೆ ಐದು ಜನರ ತಂದೆ-ತಾಯಿಗಳಿಗೆ ಕೂಡ ಈ ಮಾತು ಸಮ್ಮತವಿರಲಿಕ್ಕಿಲ್ಲ; ಹಾಗು ನಾನು ಹೀಗೆ ಅನ್ನುವೆನು, ಈ ಮಿಶ್ರವಿವಾಹದೊಳಗಿನ ಹಿಂದೂ ತರುಣರಿಗೆ ಮುಂದೆ ಯಾವಾಗ ಪುತ್ರರಾಗುವರೋ ಆಗ ಅವರು ತಮ್ಮ ಪರಂಪರೆಯನ್ನು ನಡೆಸಬೇಕೆಂದು ಸ್ವತಃ ಇವರಿಗೂ ಅನಿಸಲಿಕ್ಕಿಲ್ಲ; ಆದರೆ ಈ ಲೋಕದಲ್ಲಿ ಪ್ರತಿಯೊಬ್ಬನು ತನ್ನಷ್ಟಕ್ಕೆ ತಾನು ತಪ್ಪುತ್ತಿರುವುದೇನೋ ನಿಜ; ಆದರೆ ಪಶ್ಚಾತ್ತಾಪದ ಪ್ರಸಂಗವು ಮಾತ್ರ ಎಲ್ಲರ ಮೇಲೆಯೂ ಸಮನಾಗಿಯೇ ಬರಲಿ-ಬಾರದಿರಲಿ; ಆದರೂ ನಾನು ತುಸ ಅಡ್ಡ ದಾರಿಗೆ ಹೊರಳಿ ಇಂಥ ಅಪ್ರಿಯ ಸಂಗತಿಗಳನ್ನು ಬರೆದ ಬಗ್ಗೆ ನೀವು ಕ್ಷಮಿಸಬೇಕು! ಇವು ನನಗೆ ಹೊಳೆಯಲಿಕ್ಕಂಟಾದ ನಿಜವಾದ ಕಾರಣವು ನೀವು ನನಗೆ ನನ್ನ ಚಿಕ್ಕ ತಮ್ಮನಂತೆ ತೋರುವದೇ ಅಹುದು. ನಿಮ್ಮ ದೃಷ್ಟಿಯಲ್ಲಿ ಪ್ರೇಮುಲತನವಿದೆ ಎಂದು ನನಗೆ ಅನಿಸುತ್ತಿತ್ತು; ಆದರೆ ನಿಮ್ಮಲ್ಲಿ ವಿಷಮಿಶ್ರಿತ ಆಧ್ಯಾತೆಯು ಎಂದೂ ತೋರಲಿಲ್ಲ. ಆದರಿಂದ ಕೊನೆಗೆ ನಿಮಗೆ ಕೊಂಚವೇ ಬರೆಯುವದೇನಂದರೆ, ಮೇರೀ ಫೂಡ ಹಾಊಸಳು ನಿಮಗೆ ಯಾವ ಮೋಸವನ್ನು ತೋರಿದಳೋ, ಅದು ಅವಳದವಳಿಗೇ ಆಯಿತೆಂದು ನೀವಿನ್ನು ತಿಳಿಯಿರಿ! ಕಿಂಬಹುನಾ, ಅವಳು ಸತ್ತದ್ದರಿಂದ ಹೊಳಲ್ಪಟ್ಟಳೆಂದು ಲಾಕ್ಷಣಿಕ ಶಬ್ದದಿಂದ ನಿಮಗಾರು ತಿಳಿಸಿದರೋ ಅದನ್ನು ನಿಜವಾದ ಅರ್ಥದಿಂದ ಬರೆದರೆಂದೇ ಬೇಕಾದರೆ ತಿಳಿದುಕೊಳ್ಳಿರಿ; ಮತ್ತು ನಿಮ್ಮ ಮನಸ್ಸಿನ ಮೇಲೆ ಮೋಹದ ಯಾವ ಆವರಣವು ಬಂದಿದ್ದಿತೋ ಅದನ್ನು ದೇವರು ಪರಿಹಾರ ಮಾಡಿದ ಬಗ್ಗೆ ಆತನಲ್ಲಿ ಕೃತಜ್ಞರಾಗಿರಿ.

'ಮೇರಿಯು ತನ್ನ ಚಾರಿತ್ರ್ಯವನ್ನು ಹೆಚ್ಚಾಗಿ ಬೆಳಗಬೇಕಾಗಿದೆ; ಆದರೆ ಅದರ ಪ್ರಾರಂಭದ ಮೇಲಿಂದಲೇ ಅನುಮಾನ ಮಾಡುವುದಾದರೆ, ಅದು ಭಯಂಕರವೇ ಆದೀತು.

'ಯಂಗ ವುಇಮೆನ್ಸ ಅಸೋಸಿಏಶನ್ನಿನ ಸೆಕ್ರೆಟರಿ' ಎಂದು ನನ್ನ ಪ್ರಯಾಣವು ಹಿಂದುಸ್ತಾನದ ಕಡೆಗೆ ಬಂದರೆ ನಿಮ್ಮ ಭೆಟ್ಟಿಯ ಲಾಭವಾದೀತೆಂಬ ಆಶೆಯನ್ನು ನಾನು ಅದೇಕೆ ಮಾಡಬಾರದು? ಆದರೆ ನಾನು ಬಂದ ಕಾಲಕ್ಕೆ ನಿಮ್ಮ ಹಿಂದೂ ಪತ್ನಿಯೂ ನಿಮ್ಮ ಮಕ್ಕಳೂ ಇವರ ಗುರ್ತು ಮಾಡಿಕೊಳ್ಳುವ ಭಾಗ್ಯವು ನನಗೆ ಲಭಿಸೀತೆಂದು ನಾನು ಬಯಸುತ್ತೇನೆ."

ಏಲೀನ ಪೇರಿಯ ಈ ಪತ್ರ ಓದಿ ಚಂದೂನ ಮನಸ್ಸಿಗೆ ಚೆನ್ನಾಗಿಯೇ ಹೊಡೆತ ಕುಳಿತಿತು. ಕಿಂಬಹುನಾ ಮೇರಿಯು ಮೃತ್ಯುವಿನ ತಂತಿಯಿಂದ

ಬಿದ್ದ ಹೊಡೆತದಷ್ಟೇ ಈ ಪೆಟ್ಟಾದರೂ ಇದ್ದಿತು; ಆದರೆ ಈ ಎರಡು ಪೆಟ್ಟುಗಳ ವರ್ಗವು ಮಾತ್ರ ಒಂದಾಗಿರಲಿಲ್ಲ; ಮತ್ತು ಅವುಗಳ ಪರಿಣಾಮವೂ ಒಂದೇ ಬಗೆಯದಾಗಿರಲಿಲ್ಲ. ತಂತಿಯಿಂದ ಚಂದುವಿಗಾದ ದುಃಖವು ಸರ್ವಸ್ವ ನಾಶದ್ದಾಗಿತ್ತು; ಆದರೆ ಅದು ಮೇರಿ ಸತ್ತಿದ್ದರಿಂದ ಹಾಗು ಮೇರಿಯ ಪ್ರೇಮವು ತನ್ನಲ್ಲಿ ನಿಜವಾಗಿದ್ದಿತೆಂಬ ನಂಬಿಗೆಯಿಂದ ಹಾಗಾಗಿತ್ತು. ಪೇರಿಯ ಪತ್ರದಿಂದಲೂ ಮೇರಿಯು ಸತ್ತಳು; ಆದರೆ ಅವಳು ದೇಹದಿಂದ ಸತ್ತಿರದೆ ಲಾಕ್ಷಣಿಕ ಅರ್ಥದಿಂದ ಸತ್ತಿದ್ದಳು. ಆ ತಂತಿಯಿಂದ ದುಃಖವಾಯಿತು; ಮತ್ತು ತದ್ವಿರುದ್ಧವಾಗಿ ಈ ಪತ್ರದಿಂದ ಆತನಿಗಾದದ್ದು ಸುಖವೇ ಆಗಿತ್ತೆಂಬ ವಿರೋಧವನ್ನು ಮಂಡಿಸಲಾಗಲಿಕ್ಕಿಲ್ಲ; ಆದರೆ ದಿಟವಾಗಿ ಪ್ರೇಮ ಮಾಡುವ ಮೇರಿಯು ಸತ್ತ ದುಃಖ ಮತ್ತು ಆವಳು ತನ್ನನ್ನು ಮೋಸಪಡಿಸಿ ಮೂರ್ಖರಲ್ಲಿ ಸೇರಿಸಿದಳೆಂಬ ತಿಳುವಿನ ದುಃಖ ಇವೆರಡೂ ಶಬ್ದಗಳನ್ನು ದುಃಖ ಎಂಬ ಒಂದೇ ಶಬ್ದದಿಂದ ವರ್ಣಿಸಲಿಕ್ಕೆ ಬರುತ್ತಿದ್ದರೂ, ಅವು ಒಂದೇ ವರ್ಗದವೆಂತಾದಾವು? ಫಜೀತಿಯ ದುಃಖದ ಮಾನವು ಪ್ರಿಯ ಮನುಷ್ಯರ ಮೃತ್ಯುವಿನ ದುಃಖಕ್ಕಿಂತ ಯಾವಾಗಲೂ ಕಡಿಮೆಯೇ ಸರಿ. ಆ ತಂತಿಯು ನಿಜವಾಗಿದ್ದರೆ ಚಂದುವು ಒಂದು ದೈವದ ಹೊರತು ಬೇರೆ ಯಾರ ಮೇಲೂ ಸಿಟ್ಟಾಗಲು ಕಾರಣವಿರಲಿಲ್ಲ; ಆದರೆ ಮೇರಿಯು ವಿಶ್ವಾಸಘಾತಕಿ ಎಂದಾದರೆ, ಚಂದುವು ದೈವದ ಜೊತೆಗೆ ಸ್ವಂತದ ಮೇಲೆಯೂ ಸಿಟ್ಟಾಗಲಿಕ್ಕೆ ಸಬಲವಾದ ಕಾರಣವಿತ್ತು. ಆತನ ಮನಸ್ಸು ಆತನಿಗೆ 'ಆ ಹುಡುಗಿಯು ಮೋಸಗಾರ್ತಿಯಾದಳು; ಆದರೆ ನೀನಂತೂ ಒಳ್ಳೇ ಬುದ್ಧಿವಂತನಿದ್ದೆಯಲ್ಲವೆ? ಇಂಥ ದೊಡ್ಡ ಎಂ. ಏ. ಬ್ಯಾರಿಸ್ಟರ, ಆಯ್. ಸಿ. ಎಸ್. ಈ ಎಲ್ಲ ಪರೀಕ್ಷೆ ಪಾಸಾಗುವಷ್ಟು ನಿನಗೆ ಬುದ್ಧಿಯಿದ್ದಿತು; ಆದರೆ ಯಃಕಶ್ಚಿತಳಾದ ಒಬ್ಬ ಮಾಯಾವೀ ಹುಡುಗೆಯ ಅಂತರಂಗದ ನಿಜ ಸಂಗತಿಯನ್ನು ತಿಳಕೊಳ್ಳುವಷ್ಟು ಬುದ್ಧಿಯು ನಿನಗಿರಬಾರದೆ? ಅಂದಬಳಿಕ ಮಾನಶಾಸ್ತ್ರಜ್ಞರು ಅನ್ನುತ್ತಿರುವಂತೆ ಮನುಷ್ಯನೆಂದರೆ, ಬುದ್ಧಿಶೂನ್ಯ ಹಾಗು ಭಾವನಾಪ್ರಧಾನ ಎಂಬುದೇ ನಿಜವೇನು?' ಎಂದೆನ್ನುತ್ತಿತ್ತು.

ಹೇಗೆಯೇ ಇರಲಿ, ಚಂದುವು ಮೇರಿಯನ್ನು ಹೀಯಾಳಿಸಿದರೂ, ದೇವರನ್ನು ಹೀಯಾಳಿಸಿದರೂ, ತನ್ನನ್ನು ಹೀಯಾಳಿಸಿಕೊಂಡರೂ ಪ್ರತಿಕ್ಷೋಭನದ ಯಾವ ಉಪಪತ್ತಿಯು ಗ್ರಂಥಾಂತರಗಳಲ್ಲಿ ಹೇಳಿದೆಯೋ, ಅದು ಇಲ್ಲಿ ನಿಜವಾಗದಿದ್ದೀತೆ? ಜಾದೂ ಆಟ ಮಾಡುವ ಪ್ರೊಫೇಸರನು ತನ್ನ ಎಲ್ಲ ಜಿನಸುಗಳನ್ನು ತಕ್ಕೊಂಡು ಹೋದ ಬಳಿಕ ಅಲ್ಲೇನು ಉಳಿಯು

ತ್ತದೆ? ನೋಡಿದ ನೋಟದ ಬಗ್ಗೆ ಆಶ್ಚರ್ಯಪಡುತ್ತ ತನ್ನ ಇಂದ್ರಿಯಗಳನ್ನೂ ಬುದ್ಧಿಯನ್ನೂ ಮುಗ್ಧಗಳನ್ನಾಗಿ ಮಾಡಿದ ಬಗ್ಗೆ ತನ್ನನ್ನು ಕಂಡು ತಾನೇ ನಗುವ ಪ್ರೇಕ್ಷಕನಷ್ಟೇ ಆ ಸ್ಥಳದಲ್ಲಿರುವನು. ಮೇರಿಯು ಕಾರಣದಿಂದ ಉಂಟಾದ ಸುಖ-ದುಃಖ ಮಿಶ್ರಿತವಾದ ಆ ಮಾಯಾಬಝಾರವು ಈ ಪ್ರಕಾರ ಅಕಲ್ಪಿತವಾಗಿ ಮುಗಿದ ಬಳಿಕ, ಮೇರಿಯು ಎಷ್ಟು ಪ್ರಮಾಣದಿಂದ ಚಂದೂನ ಮನಸ್ಸಿನೊಳಗಿಂದ ಹೊರಟು ಹೋಗುವಳೋ, ಅಷ್ಟೇ ಪ್ರಮಾಣದಿಂದ ಚಂದುವಿಗುಂಟಾದ ವೈರಾಗ್ಯವೂ ಹೊರಟು ಹೋಗಬೇಕೆಂಬುದನ್ನು ವಾಚಕರೇ ಹೇಳಬಹುದು. ಅದನ್ನು ನಾವು ನಮ್ಮ ಶಬ್ದಗಳಿಂದ ತಿಳಿಸುವ ಆವಶ್ಯಕತೆಯೇನು? ಆದರೆ ಬವಳಿಯು ಒಮ್ಮೆಲೆ ಬರುತ್ತದೆ; ತದ್ವಿರುದ್ಧವಾಗಿ ಸ್ಮೃತಿಯು ಮಾತ್ರ ಮೆಲ್ಲಮೆಲ್ಲನೆ ಬರಹತ್ತುತ್ತದೆ.

ಮಿದುಳಿನ ಮೇಲೆ ಸುತ್ತಿಗೆಯ ಪೆಟ್ಟು ಬಿದ್ದ ಕೂಡಲೆ ಬವಳಿಯಿಂದ ಒಮ್ಮೆಲೆ ಮುಚ್ಚಲ್ಪಡುವ ಕಣ್ಣುಗಳು ಕೂಡಲೆ ತೆರೆಯುವದಿಲ್ಲ. ಅವು ನಿದಾನವಾಗಿಯೇ ತೆರೆಯುವವು; ಮತ್ತು ಎಂತೆಂತು ತೆರೆದು ಅಕ್ಕಪಕ್ಕದ ಪದಾರ್ಥಗಳು ಕಣ್ಣಿಗೆ ಕಾಣಹತ್ತುವವೋ, ಆಂತಂತೇ ಲುಪ್ತವಾಗಿದ್ದ ಸ್ಮೃತಿಯು ಮತ್ತೆ ಉಂಟಾಗಹತ್ತುತ್ತದೆ. ಚಂದುವಿಗೆ ಸಹಜವಾಗಿಯೇ ತಿಳಿಯಹತ್ತಿತೇನಂದರೆ, ಮೇರಿಯ ಮೃತ್ಯುವೇ ಸುಳ್ಳೆಂಬದು ನಿಶ್ಚಿತವಾಗಲು, ಬೈರಾಗಿಯ ಶಾಪವೂ ದೇವರ ನ್ಯಾಯನಿರ್ಣಯವೂ ಇವುಗಳದೇನಾಗಬೇಕು? ಆ ಶಾಪದ ನಂತರವೇ ನಾನು ಆಯ್. ಸಿ. ಎಸ್. ಪಾಸಾದ ತಂತಿಬರಲಿಲ್ಲವೆ? ದೇವರು ನನ್ನ ಮೇಲೆ ನಿಜವಾಗಿಯೂ ಸಿಟ್ಟಾಗಿದ್ದರೆ, ಆತನು ನನ್ನ ಪರೀಕ್ಷೆಯನ್ನು ನಾಪಾಸೇಕೆ ಮಾಡಲಿಲ್ಲ? ಅವನು ನನ್ನನ್ನು ಪಾಸಾಗಗೊಟ್ಟನೆಂದ ಬಳಿಕ ದೇವರ ಅವಕೃಪೆಗೆ ಅರ್ಧಕ್ಕರ್ಧ ಕಾಟು ಬೀಳಲಿಲ್ಲವೆ? ಇನ್ನುಳಿದ ಅರ್ಧ ಅವಕೃಪೆಯು ನಾನು ಪಾಸಾಗಿ ಮೇರಿಯು ನಿಜವಾದ ಪ್ರೇಮವನ್ನು ಹೃದಯದಲ್ಲಿಟ್ಟುಕೊಂಡು ಸತ್ತಿದ್ದರೆ ನಿಜವಾಯಿತೆಂದು ಅನ್ನಬಹುದಿತ್ತು; ಆದರೆ ಮೇರಿಯು ಸತ್ತದ್ದು ದಿಟವಾಗಿರದೆ, ಏಲೇನ ಪೇರಿಯು ಆ ಮರಣದ ತಂತಿಯ ಬಗ್ಗೆ ಮಾಡಿದ ಭಾಷ್ಯವನ್ನು ನಿಜವೆಂದು ತಿಳಿದರೆ, ಇಂಥ ವಿಶ್ವಾಸಘಾತುಕ ರಮಣಿಯ ಪಾಶದೊಳಗಿಂದ ನಾನು ಮುಕ್ತನಾದದ್ದು ಒಂದು ಬಗೆಯಿಂದ ನನ್ನನ್ನು ನಿರಾಶೆ ಇಲ್ಲವೆ ಮೋಸಗೊಳಿಸಿದ್ದಾಗಿದ್ದರೂ ಒಟ್ಟಿನಲ್ಲಿ ನೂರಕ್ಕೆ ನೂರರಂತೆ ಅದು ದೇವರಕೃಪೆಯೇ ಎಂದೇಕೆನಬಾರದು? ಇನ್ನುಳಿದ ಇಡೀಕಥೆಯೆಂದರೆ ಬೈರಾಗಿಗಳದು. ತಂತಿ ಖೊಟ್ಟಿ, ಸಾವು ಖೊಟ್ಟಿ, ವಿಶ್ವಾಸಘಾತವಷ್ಟೇ ನಿಜ; ಅಂದ ಬಳಿಕ ಬೈರಾಗಿಗೆ ಅಂತಜ್ಞಾನವಿದ್ದಿತೆಂದು ತಾನು

ತಿಳಕೊಂಡಿದ್ದ ಆ ಅಂತರ್ಜ್ಞಾನವೇತರದು? ಅದು ಬೈರಾಗಿ ಪದ್ಧತಿಯ ನಿಶ್ಚಿತ ಒತ್ತಾಯವೇ ಆಗದೇನು? ಅಂದರೆ ಅತ್ತ ಆ ಹುಡುಗಿಯು ಹಾಗೆ ಮೋಸಗೊಳಿಸಿದಳು; ಮತ್ತು ಇತ್ತ ಈ ಬೈರಾಗಿಗಳು ಹೇಗೆ ಮೋಸ ಪಡಿಸಿದರು! ಹಾಗು ಆ ಅಂತರ್ಜ್ಞಾನದ ಬಂಡವಲವು ಪೊಳ್ಳಾದರೆ ಬೈರಾಗಿಯನ್ನು ಗುರು ಮಾಡಿಕೊಳ್ಳಲಿಕ್ಕೆ ಆಧಾರವೇನು ಉಳಿಯಿತು? ಮತ್ತು ನಾನು ಇಷ್ಟು ದಿನ ಇವರ ಯಾವ ಸೇವೆ ಮಾಡಿದೆನೋ, ಅದೆಲ್ಲ ಆತ್ಮವಿಡಂಬನವನ್ನೇ ಮಾಡಿದಂತಲ್ಲವೆ? ಗುರುಭಜನೆಗೆ ತೊಡಗಲು ತನಗೆ ದಿವ್ಯಜ್ಞಾನಲಾಭವಂತೂ ಆಗಲೇ ಇಲ್ಲ ವೈರಾಗ್ಯದ ಕೃತ್ರಿಮ ಮನಸ್ಸಮಾಧಾನವೇನು ನಾಲ್ಕು ದಿನ ಲಭಿಸಿತೋ ಅಷ್ಟೇ! ಆದರೆ ನಾಳೆ ಈ ಎಲ್ಲ ರಹಸ್ಯದ ಸ್ಫೋಟವಾದರೆ ಮತ್ತು ಅದು ಎಂದಾದರೂ ಆಗದಿದ್ದೀತೇ?-ಆಗಿನ ನನ್ನ ಫಜಿತಿಗೆ ಮೇರೆಯೇ ಉಳಿಯಲಿಕ್ಕಿಲ್ಲ.ಜನರೇನೂ ಪ್ರತ್ಯಕ್ಷ ನನ್ನ ಮೋರೆಯ ಮೇಲೆ ಉಗುಳಲಿಕ್ಕಿಲ್ಲವಷ್ಟೇ; ಆದರೆ ನಾನು ಅವರಿಗೆ ಮುಖ ತೋರಿಸುವ ಬಗೆ ಹೇಗೆ? ಮತ್ತು ಸ್ವಂತದ ಜೀವಾಳದ ಕೆಲಸದಲ್ಲಿ ವಿವೇಕಬುದ್ಧಿಯನ್ನು ನಡೆಸಲಿಕ್ಕೆ ಅಪಾತ್ರನಾದ ನಾನು ನಾಳೆ ಆಯ್. ಸಿ. ಎಸ್ಸಿನ ದೊಡ್ಡ ಹುದ್ದೆಯ ಅಮಲ್ದಾರನಾಗಿ ಜನರ ನ್ಯಾಯನಿರ್ಣಯಗಳನ್ನೂ ಸರಕಾರ ದರ್ಬಾರುಗಳ ಮಹತ್ಕಾರ್ಯಗಳನ್ನೂ ಹೇಗೆ ಮಾಡುವವನು?

ಈ ವಿಚಾರಗಳಿಂದ ಚಂದೂನ ಮನಸ್ಸಿನಲ್ಲಿ ಅಲ್ಲೋಲ-ಕಲ್ಲೋಲವಾಯಿತು. ಆತನಿಂದ ಕುರ್ಚಿಯ ಮೇಲೆ ಕೂಡ ಕೂರಲಾಗಲಿಲ್ಲ. ಆತನು ಪಂಜರದಲ್ಲಿಟ್ಟ ಕಾಡು ಮೃಗದಂತೆ ಆ ತನ್ನ ಕೋಣೆಯಲ್ಲಿ ಇತ್ತಿಂದತ್ತ ಅತ್ತಿಂದಿತ್ತ ಅಡ್ಡಾಡಹತ್ತಿದನು. ತಾನು ಸ್ಮೃತಿಯಿಂದಿರುವೆನೆಂಬ ಖಾತ್ರಿ ಮಾಡಿಕೊಳ್ಳುವ ಸಲುವಾಗಿ ಆತನು ತನ್ನ ಬೊಟ್ಟುಗಳನ್ನು ಹಲ್ಲಲ್ಲಿ ಹಿಡಿದು ಕಡಿಯಹತ್ತಿದನು. ಜ್ಞಾನತಂತುಗಳನ್ನು ಆಗಾಗ್ಗೆ ಉತ್ತೇಜನಗೊಳಿಸಲಿಕ್ಕೆಂದು ಅವನು ಸ್ಮೆಲ್ಲಿಂಗ ಸಾಲ್ಟಿನ ಸೀಸೆಯನ್ನು ಮೂಸಿನೋಡತೊಡಗಿದನು. ಶಕುನವಂತಿಯೊಳಗಿಂದ ಸಂಶಯಗ್ರಸ್ತ ಮನುಷ್ಯನಿಗೆ ಯಾವುದೊಂದು ಉತ್ತರ ದೊರೆಯುವಂತೆ, ಆ ಕಾಗದಗಳೊಳಗಿಂದ ಅಂಥ ಉತ್ತರ ಸೂಚಿಸುವ ಯಾವುದೊಂದು ಕಾಗದ ಇಲ್ಲವೆ ಚೀಟಿ ಕೈಗೆ ಹತ್ತಬಹುದೆಂದು ಮೇಜಿನ ಮೇಲಿನ ಕಾಗದಗಳನ್ನು ಆತನು ಸುಮ್ಮನೆ ತಿರುವಿ ಹಾಕಹತ್ತಿದನು. ಆ ಕ್ಷೋಭನವು ಕುಗ್ಗಲಿಕ್ಕೆ ಆ ಕೋಣೆಯು ಆತನಿಗೆ ಸಾಲದಾಯಿತು. ಆದರಿಂದ ಎಲ್ಲಿಯಾದರೂ ದೂರ ಒಬ್ಬನೇ ತಿರುಗಾಡಲಿಕ್ಕೆ ಹೋಗಬೇಕೆಂದೂ, ಎಲ್ಲಿಯ ಶುದ್ಧ ತಾಜಾ ಹವೆಯಿಂದ ಮನಸ್ಸನ್ನು ತುಸ ಶಾಂತಗೊಳಿಸಬೇಕೆಂದೂ ಯೋಚಿಸಿ ಅವನು ಗೂಟದ ಮೇಲಿನ ತನ್ನ ಬಟ್ಟೆಗಳಿಗೆ ಕೈನೀಡಿದನು. ಇಷ್ಟರಲ್ಲಿ ಬನ್ಸೀ

ಧರನು ಅವನ ಕೋಣೆಯ ಕದವನ್ನು ತಟ್ಟಿ ಅದರೊಳಗೆ ಪ್ರವೇಶಿಸಿದನು.

ಮಾತಾಡಲಿಕ್ಕೆ ಇನ್ನೊಬ್ಬನು ದೊರೆತದ್ದರಿಂದ ಚಂದೂನ ಮನಸ್ಸಿನೊಳಗಿನ ವಿಚಾರಶೃಂಖಲೆಯು ತುಂಡರಿಸಿತು; ಆದರೆ ಬನ್ಸೀಧರನು ಬರತಕ್ಕವನಿದ್ದಾನೆಂಬುದು ಗೊತ್ತಿರದ್ದರಿಂದ, ಆತನು ತುಸ ತ್ರಾಸಗೊಂಡು: "ಬನ್ಸೀಧರ, ಏನಾದರೂ ವಿಶೇಷ ಕೆಲಸವಿದೆಯೇ? ಇರದಿದ್ದರೆ ನಾನು ಹೊರಗೆ ತಿರುಗಾಡಲಿಕ್ಕೆ ಹೋಗತಕ್ಕವನಿದ್ದೇನೆ."

ಬನ್ಸೀಧರನು ನಕ್ಕು:-- "ಬಹೂತ ಅಚ್ಛಾ! ನಾನೂ ನಿನ್ನೊಡನೆ ತಿರುಗಾಡಲಿಕ್ಕೆ ಬಂದರೆ ಸಾಗೀತಲ್ಲವೆ?"

ಇದಕ್ಕೆ ಏನು ಹೇಳಬೇಕೆಂಬದು ಚಂದುವಿಗೆ ಒಮ್ಮೆಲೆ ತಿಳಿಯಲೊಲ್ಲದು 'ಹೂ' ಎಂದರೂ ಕಠಿಣ! ಊಹೂ ಎಂದರೂ ಕಠಿಣ! ಆದರೆ ಅವರ ನಿರ್ಣಯವನ್ನು ಬನ್ಸೀಧರನೇ ಮಾಡಿದನು. ಆತನು:---'ಚಂದೂ ನನ್ನನ್ನು ಕ್ಷಮಿಸು; ಆದರೆ ಬರಿಯ ನಿನ್ನದೇ ಅಲ್ಲ, ನಿನ್ನ ಇಡೀ ಕುಟುಂಬದ ಹಿತಾಹಿತದ, ಸುಖ ದುಃಖದ, ಜೀವಾಳದ ಕೆಲ ಮಾತುಗಳನ್ನು ಇಂದು ನಾನು ನಿನ್ನೊಡನೆ ಆಡಲೇಬೇಕಾಗಿದೆ. ಮುಂಚೆ ಸಂದರ್ಭುವಸಕ್ಕೆ ಬಂದಿದ್ದ ಆ ಎರಡು ಪ್ರಸಂಗಗಳಲ್ಲಿ ನಾನು ನಿನಗೇನೂ ತೊಂದರೆ ಕೊಡಲಿಲ್ಲ; ಆದರೆ ಇಂದು ಮಾತ್ರ ಕೊಡತಕ್ಕವನೇ. ಇಲ್ಲ, ಕೊಡಲೇಬೇಕು. ಅದಕ್ಕೂ ಮೇಲೆ ನಿನ್ನ ಇಚ್ಛೆಯೇನು?"

ಆತನ ಈ ಕಟ್ಟುನಿಟ್ಟಿನ ಮಾತಿಗೆ ಚಂದುವಿನಿಂದ ಬೇಡವೆನ್ನಲಾಗಲಿಲ್ಲ ಆದರಿಂದ ಅವನು:-"ನಡೆ ಹಾಗಾದರೆ ಮೋಟರಿನಲ್ಲೇ ದೂರ ಹೋಗೋಣ. ನಿವಾಂತಸ್ಥಳದಲ್ಲಿ ಮಾತಾಡುತ್ತ ಕೂಡ್ರೋಣ."

'ತುಸ ತಡೆ' ಎಂದಂದು, ಬನ್ಸೀಧರನು ಧಾವಿಸುತ್ತಲೆ ಮನೆಯೊಳಗೆ ಹೋಗಿ ಕಾಗದ ಪತ್ರಗಳದೊಂದು ಫೈಲು ಸಂಗಡ ತಕ್ಕೊಂಡು ಬಂದನು. ಬಳಿಕ ಅವರಿಬ್ಬರೂ ಹೊರಹೊರಟರು. ಚಂದುವು ಮೋಟರ ಮನೆಯೊಳಗಿಂದ ತನ್ನ ಮೋಟರನ್ನು ಹೊರದೆಗೆದನು; ಆದರೆ ತನ್ನ ಮೋಟರಿನ ಜೊತೆಗೆ ಇರತಕ್ಕ ಮನೆಯ ಬೇರೊಂದು ಮೋಟರು ಮಾತ್ರ ಅಲ್ಲಿ ಕಾಣಿಸಲೊಲ್ಲದು. ಆಗ ಚಂದುವು ಸಹಜವಾಗಿ—"ಇನ್ನೊಂದು ಮೋಟರನ್ನು ಯಾರು ಒಯ್ದರು? ಮತ್ತು ನೀನು ಇಲ್ಲಿ ಸುಮ್ಮನೆ ಏಕೆ ನಿಂತಿರುತ್ತೀ?" ಎಂದು ಡ್ರೈವರನನ್ನು ಕೇಳಿದನು.

ಆ ಮೋಟರ ಡ್ರೈವರನು ಮೋರೆ ತಗ್ಗಿಸಿಕೊಂಡು: --"ಆ ಮೋಟರನ್ನು ಬಿಂಬಾಬಾಯಿಯವರೂ ಮತ್ತು—"

"ಮತ್ತಾರೊ?" ಚಂದುವು ಉತಾವಳಿಯಿಂದ ಕೇಳಲು,

"ಬಿಂಬಾಬಾಯಿಯವರೂ ಮತ್ತೂ ಆ ಶಿಷ್ಯ ಬೈರಾಗಿಗಳೂ ಇಬ್ಬರೂ ಕೂಡಿ ಆ ಮೋಟರಿನಿಂದ ಹೋಗಿರುತ್ತಾರೆ." ಡ್ರೈವರನು ಹೇಳಿದನು.

ಚಂದುವು ಅಂದ:-"ಈ ಸಂಗತಿಯು ಹೀಗೆಯೇ ಹಲವು ಸಾರೆ ನಡೆದುದನ್ನು ನೋಡಿದ್ದೇನೆ; ಇದರ ಅರ್ಥವೇನು?"

"ಆ ಅರ್ಥವನ್ನು ಹೇಳುವದಕ್ಕೆಂದೇ ನಾನು ನಿನ್ನೊಡನೆ ಬರತಕ್ಕವನಿದ್ದೇನೆ" ಎಂದು ಧನ್ನೀಧರನು ಉತ್ತರವಿತ್ತನು

ಮೋಟರು ಪ್ರಾರಂಭ ಮಾಡಿ ಅವರಿಬ್ಬರೂ ಒಳಗೆ ಕುಳಿತರು. ಚಂದುವು ಆ ಡ್ರಾಯವ್ಹರನನ್ನುದ್ದೇಶಿಸಿ: -"ಮೋಟರ ಮನೆಯ ಬಾಗಿಲವನ್ನಿಕ್ಕಿ ನೀನಿಲ್ಲಿಯೇ ಇರು. ಆ ಎರಡನೇ ಮೋಟರಿನಿಂದ ಅವರು ಯಾವಾಗ ತಿರುಗಿ ಬರುವರೆಂಬದನ್ನು ನನಗೆ ತಿಳಿಸು."

--

ದಿನ್ನೆಯ ಮೇಲಿನ ಗುಜಗೋಷ್ಠಿ

ಮೋಟರಿನಲ್ಲಿ ಕುಳಿತು ಅವರಿಬ್ಬರೂ ಐದು ಮೈಲು ದೂರ ತೆರಳಿದ ಬಳಿಕ ಒಂದು ದಾರಿಬಿಟ್ಟಿದ್ದ ಅಡ್ಡದಾರಿಗೆ ತಿರುಗಿದರು; ಮತ್ತು ಹಸುರು ಹುಲ್ಲಿನಿಂದ ಆಚ್ಛಾದಿಸಲ್ಪಟ್ಟ ಒಂದು ಚಿಕ್ಕ ದಿನ್ನೆಯ ಕೆಳಗೆ ಮೋಟರು ನಿಲ್ಲಿಸಿ, ಅವರಿಬ್ಬರೂ ಆ ದಿನ್ನೆಯ ಮೇಲೇರಿ ಹೋಗಿ ಕುಳಿತರು ಸಂಜೆಯು ಆಗಿ ದಿನ ಎಳೆ ಬಿಸಿಲು ಇದ್ದರೂ, ಅದು ಹಿಂಬದಿಯಿಂದ ಇದ್ದಿತು. ದಿನ್ನೆಯ ಕೆಳಗಡೆಗೆ ದೂರದವರೆಗೆ ರಮ್ಯವಾದ ನೋಟವು ಕಂಗೊಳಿಸುತ್ತಿತ್ತು

ಇಂಥ ಸ್ಥಳದಲ್ಲಿ ಮನಬಿಚ್ಚಿ ಮಾತನಾಡಲು ಈಗ ಏಕಾಂತದೊರಕಿರುವದನ್ನು ಕಂಡು ಧನ್ನೀಧರನು ಜೇಬಿನಿಂದ ಸಿಗರೇಟು, ಕಡ್ಡಿಪೆಟ್ಟಿಗೆ ತೆಗೆದನು; ಆದರೆ ಅದನ್ನು ಸೇದುವ ಮುನ್ನ ಒಮ್ಮೆಲೆ ನಕ್ಕು, ಚಂದುವನ್ನುದ್ದೇಶಿಸಿ: — "ಚಂದೂ, ಅಂಜಬೇಡ. ನಾನು ನಿನಗೆ ಕೊಡಲಿಕ್ಕೆಂದು ಈ ಸಿಗರೇಟು ತೆಗೆದಿಲ್ಲ. ನಾನೇ ಇದನ್ನು ಸೇದತಕ್ಕವನಿದ್ದೇನೆ. ನೀನು ನಿನ್ನ ಸಿಗರೇಟಿನ ಚಟಬಿಟ್ಟುಕೊಟ್ಟ ಬಗ್ಗೆ ನನ್ನ ಮನಸ್ಸಿನಲ್ಲಿ ನಿನ್ನ ವಿಷಯದ ಆದರವು ಅದೆಷ್ಟೋ ಹೆಚ್ಚಿದೆ. ವ್ಯಸನೀಜನರಿಗೆ ತಮ್ಮ ವ್ಯಸನವನ್ನು ಬಿಡಲಿಕ್ಕಾಗದಿದ್ದರೆ ಅವರು ಕಿಮಾನಪಕ್ಷ ಎರಡು ಕೆಲಸ ಮಾಡಬೇಕು. ಒಂದು ತನ್ನ ವ್ಯಸನವನ್ನು ಯಾವುದೊಂದು ಸದ್ಗುಣದಂತೆ ಭೂಷಣವೆಂದು ತಿಳಿದು ಅಥವಾ ಅದಕ್ಕೆ ವಿಪರೀತವಾಗಿ ನಿರ್ಲಜ್ಜತನದ ನೀತಿಧೈರ್ಯತೋರುವಪಕ್ಕೆಂದು ಅದನ್ನು ಜನರೆಯುವರ ಎದುರು ಮೆರೆಸಬಾರದು; ಹಾಗು ಯಾವುದು ತನ್ನ ಕೈಯಿಂದ ಆಗುವದಿಲ್ಲವೋ ಅದನ್ನು ಇನ್ನೊಬ್ಬನು ಮಾಡಲು ಶಕ್ತನಾಗುತ್ತಾನೆಂಬ ಬಗ್ಗೆ ಆತನ

ಶ್ರೇಷ್ಠತ್ವವನ್ನು ಪ್ರಾಂಜಲ ಮನಸ್ಸಿನಿಂದ ಒಪ್ಪುವದೇ ಆ ಎರಡನೇ ಕೆಲಸವು.

ಚಂದುವು:--"ಬನ್ಸೀ, ಈ ಮಾಯಾವೀ ಪ್ರಸ್ತಾವನೆಯು ಸಾಕಾಯಿತು. 'ಸೇತುವೆಯು ಕೆಳಗಿನಿಂದ ಹೆಚ್ಚಾಗಿ ನೀರು ಹರಿದು ಹೋಗಿದೆ.' ಎಂಬದೊಂದು ಇಂಗ್ಲಿಷ ನಾಣ್ಣುಡಿ ಇದೆ; ಆದರೆ ಅದರ ಜೊತೆಗೇ 'ಸೇತುವೆಯು ಕೆಳಗಿನಿಂದ ಇನ್ನೂ ಎಷ್ಟೋ ನೀರು ಹರಿದು ಹೋಗತಕ್ಕದ್ದಿದೆ' ಎಂಬ ಹೊಸ ನಾಣ್ಣುಡಿಯನ್ನು ನಾನು ನುಡಿಸೇನು. ನಾನು ಸಿಗರೇಟು ಸೇದಲಿಕ್ಕೆಂದು ಆಣೆಮಾಡಿದೆನು; ಆದರೆ ನನ್ನ ದಿನ್ನೂ ಇಡೀ ಆಯುಷ್ಯವು ಗತಿಸಬೇಕಾಗಿದೆ 'ಅಡವಿಯೊಳಗಿಂದ ಹೊರಬೀಳದಿರುವಾಗ ಸಿಳ್ಳು ಹೊಡೆಯಬಾರದು' ಎಂಬ ನಾಣ್ಣುಡಿಯು ನನಗೆ ಚೆನ್ನಾಗಿ ಗೊತ್ತಿದೆ. ಅಂತೆಯೇ ನಾನು ಸಿಗರೇಟು ಬಿಟ್ಟಬಗ್ಗೆ ನೀನು ಆದರಬುದ್ಧಿ ತೋರಿಸಿದ್ದಕ್ಕೆ ನಿನ್ನನ್ನು ಆಭಾರ ಮನ್ನಿಸುವದಾದರೆ ನಾನು ಅದನ್ನು ನನ್ನ ಮೃತ್ಯುಪತ್ರದಲ್ಲೇ ಮನ್ನಿಸೇನು. ಅದಿರಲಿ. ನಾವು ಈಗ ಇಲ್ಲಿ ಇಬ್ಬರೆಂದರೆ ಇಬ್ಬರೇ ಇರುತ್ತೇವೆ. ಆದ್ದರಿಂದ ಏನು ಮಾತಾಡತಕ್ಕದ್ದಿದೆಯೋ ಅದನ್ನು ಮಾತಾಡು."

"ಆದರೆ ಮಾತಾಡುವ ಮೊದಲೇ ನಾನು ನಿನಗೆ ತಿಳಿಸಿಡುವುದೇನಂದರೆ, ಆ ಮಾತಿನಲ್ಲಿ ನಾನೊಂದು ಬಗೆಯ ಹಿರಿಯತನದ ಹಕ್ಕು ಬಜಾಯಿಸತಕ್ಕವನಿದ್ದೇನೆ. ನಿನಗಿಂತ ನಾನು ಹತ್ತೆಂಟು ವರ್ಷಗಳಿಗೆ ಹಿರಿಯನಲ್ಲವೇ?"

"ಆದರೆ ನಿನ್ನೀ ಅಧಿಕಾರವನ್ನು ನಾನೆಂದು ಒಪ್ಪಿಲ್ಲ? ಮತ್ತು ಆ ನಿನ್ನ ಅಧಿಕಾರದಲ್ಲಿ ನನ್ನ ಕಿವಿಹಿಂಡುವ ಇಚ್ಛೆಯು ನಿನಗಿದ್ದರೆ ಇಗೋ ನೋಡು, ನಾನು ನನ್ನ ಕಿವಿಯನ್ನು ನಿನ್ನೆದುರು ಹಿಡಿದಿದ್ದೇನೆ."

"ಶಾಬಾಸ್! ಆದರೆ ಬುದ್ಧಿವಂತನ ಕಿವಿಯನ್ನು ಕೈಯಿಂದಲೇ ಹಿಂಡಬೇಕಾಗುವದೆಂತಿಲ್ಲ. ನಾನು ನಿನಗೆ ಯಾವ ಸಂಬಂಧದಲ್ಲಿ ಹೇಳತಕ್ಕವನಿರುವೆನೆಂಬ ತರ್ಕವನ್ನು ನೀನು ಕದಾಚಿತ್ ಮಾಡಿರಬಹುದು! ಆದರೆ ನಿನ್ನ ತರ್ಕದಲ್ಲಿ ಬಾರದಂತಹ ಒಂದೆರಡು ಸಂಗತಿಗಳನ್ನು ನಾನು ನಿನಗೆ ಮೊದಲೇ ಹೇಳುತ್ತೇನೆ." ಎಂದೆಂದು ಬನ್ಸೀಧರನು ಸಿಗರೇಟು ತುಟಿಯಲ್ಲಿ ಹಿಡಿದನು. ಕೂಡಲೆ ಚಂದುವು ಕಡ್ಡಿ ಕೊರೆದು ಅದಕ್ಕೆ ಹಚ್ಚಿದನು. ಮಾತು ಸಣ್ಣದೇ ಇರುತ್ತವೆ; ಆದರೆ ಅದು ಮನುಷ್ಯನ ಮನಃಸ್ಥಿತಿಯ ದರ್ಶಕವಾಗಿರುತ್ತದೆ.

ಬನ್ಸೀಧರ "ಔತಣದ ದಿನ ಸಂಜೆಯ ಮುಂದೆ ವಿಲಾಯತಿಯಿಂದ ಬಂದಿದ್ದ ಒಂದು ತಂತಿಯು ನಿನಗೆ ದೊರೆಕಿತು. ಅದನ್ನು ನೀನು ಇನ್ನೂ ಯಾರಿಗೂ ತೋರಿಸಿರುವುದಿಲ್ಲ; ಮತ್ತು [illegible] ಹುಡುಗಾ, ಆ ತಂತಿಯ ಸುದ್ದಿಯು ಇನ್ನೂ ಯಾರಿಗೂ ಹತ್ತಿರುವದಿಲ್ಲವೆಂದು ನಿನ್ನ ತಿಳುವಳಿಕೆ ಇದ್ದಂತೆ ತೋರುತ್ತದೆ!

ಇಗೋ ಇಲ್ಲಿ ನೋಡು, ಆ ತಂತಿಯ ನಕಲನ್ನು. ಇದು ಮೂಲಪ್ರತಿಯಂತೆ ಇದೆಯೋ ಇಲ್ಲವೋ ನೋಡಿ ಖಾತ್ರಿ ಮಾಡಿಕೋ."

ಚಂದುವು ಚಟಕ್ಕನೆ ಆ ಕಾಗದ ತಕ್ಕೊಂಡು ಓದಿ ನೋಡಿದನು; ಮತ್ತು ಖಿನ್ನ ಮನಸ್ಸಿನಿಂದ:—"ಈ ನಕಲು ಮೂಲಪ್ರತಿಯಂತೇ ಇದೆ; ಆದರೆ ನಿನಗೀ ಸುದ್ದಿಯನ್ನು ಯಾರು ಹೇಳಿದರು?"

"ಇದು ಎಷ್ಟು ಗೂಢವಾಗಿ ತೋರುವದೋ ಅಷ್ಟು ತಿಳಕೊಳ್ಳಲಿಕ್ಕೆ ಕಠಿಣವಿಲ್ಲ. ನೀನು ಜವಳಿ ಹತ್ತಿ ಬೀಳುವಾಗ ಒಂದು ಕಾಗದವನ್ನು ಮುದುಡಿಕೊಂಡು ಜೇಬಿಗೆ ಸೇರಿಸಿದ್ದನ್ನು ಡಾಕ್ಟರ ಜಾಲಂದರನು ನೋಡಿದನು. ಅದರ ಮೇಲಿಂದ ಅವನು ಬರೀ ತರ್ಕಮಾಡಿದನೇನಂದರೆ, ಅದು ಯಾವುದೊಂದು ತಂತಿಯಿರಬೇಕೆಂದು; ಮತ್ತು ಆ ಸಂಗತಿಯನ್ನು ಆತನು ನನಗೆ ತಿಳಿಸಿದೊಡನೆಯೇ ನಾನು ಅಂದು ಬೆಳಿಗ್ಗೆ ತಂತೀ ಕಚೇರಿಗೆ ಹೋಗಿ ಆ ತಂತಿಯ ಮೂಲಪ್ರತಿಯನ್ನು ನೋಡಿದೆನು. ನಾನು ಗುಪ್ತಪೋಲೀಸ ಇಲಾಖೆಯೊಳಗಿನ ಇನ್ಸಪೆಕ್ಟರನಿದ್ದಮೂಲಕ ನನಗಾ ಕೆಲಸವು ತೀರ ಸುಲಭವಾಯಿತು."

"ಈ ತಂತಿಯ ಸುದ್ದಿಯನ್ನು ನೀನು ಮತ್ತೆ-ಯಾರು ಯಾರಿಗೆ ತಿಳಿಸಿರುತ್ತೀ?"

"ಮಾಸಾಹೇಬ, ಜಾಲಂದರ ಹಾಗು ಸರ ಸಾಹೇಬ ಇವರ ಹೊರತು ಮತ್ತಾರಿಗೂ ಇದರ ಗಂಧವಾರ್ತೆಯನ್ನುಕೂಡ ತಿಳಿಯಗೊಟ್ಟಿರ ವದಿಲ್ಲ. ಅದರ ಚಿಂತೆಬೇಡ ಇರಲಿ. ನಾನು ನಿನಗೆ ಹೇಳಬೇಕಾದುದು ಈ ತಂತಿಯೊಳಗಿನ ವ್ಯಕ್ತಿಯ ಸಲುವಾಗಿ ಅಲ್ಲ. ಆ ವಿಷಯವು ಸ್ವತಂತ್ರವಿದೆ; ಆದರೆ ಈ ತಂತಿಯೊಳಗಿನ ದುಃಖದ ಸಂಗತಿಯ ಮೂಲಕ ನೀನು ಈ ಯಾವ ವೈರಾಗ್ಯವನ್ನು ತಾಳಿರುವೆಯೋ; ಮತ್ತು ಅದರೊಳಗೂ ನೀನು ಗುರು ಮತ್ತು ಗುರುಬಂಧುಗಳೆಂದು ಆ ಯಾವ ಇಬ್ಬರು ಬೈರಾಗಿಗಳನ್ನು ಮನೆಯಲ್ಲಿ ತಂದಿರಿಸಿರುವೆಯೋ ಅವರ ಬಗ್ಗೆಯೇ ನಾನು ಮಾತನಾಡುವದಿದೆ. ಆದರೂ ನಾನು ಅದನ್ನು ಹೇಳುವದಕ್ಕಿಂತ ಈ ಫೈಲಿನಲ್ಲಿಯ ಕಾಗದಗಳನ್ನು ನೀನೇ ಕ್ರಮವಾಗಿ ಓದು; ಇಲ್ಲವೆ ಬರಿಯ ತಿರುವಿ ಹಾಕಿದರೂ ಪಕ್ಷಿನೋಟದಿಂದ ನಿನಗೆಲ್ಲ ತಿಳಿದೀತು. ನಿನ್ನ ಓದುವದಾಗುವವರೆಗೂ ನಾನು ನಡುವೆ ಮಾತನಾಡುವುದಿಲ್ಲ. ಅದುವರೆಗೆ ಸಾಲುವಷ್ಟು ಸಿಗರೇಟುಗಳು ನನ್ನ ಬಳಿಯಲ್ಲಿವೆ."

ಚಂದುವು ಆ ಫೈಲನ್ನು ತಕ್ಕೊಂಡನು; ಮತ್ತು ಅದರೊಳಗಿನ ಕಾಗದಗಳನ್ನು ಕ್ರಮವಾಗಿ, ಆದರೆ ಮಿಗಿಲಾದ ಆಶ್ಚರ್ಯದಿಂದ ಓದಿಕೊಂಡನು. ಅದನ್ನು ಪೂರಾ ನೋಡಿ ಕೆಳಗಿಟ್ಟು:—"ಬನ್ಸೀಧರ! ನಾನು ನನ್ನ ಕಣು

ಗಳನ್ನಾದರೂ ಹೇಗೆ ನಂಬಬೇಕು?"

"ಅದೇನಪ್ಪಾ! ಕಣ್ಣಿನಿಂದ ಕಾಣದಂಥಹ ಸಂಗತಿಗಳನ್ನು ನೀನು ನಂಬುತ್ತಿದ್ದು, ಹಾಗು ಅವನ್ನು ನಂಬಿ ನಿನ್ನ ಇಡೀ ಜೀವನಕ್ರಮವನ್ನು ಬದಲಿಸಿರಲು, ಕಣ್ಣುಗಳಿಂದ ಓದಿದಂಥ ಈ ಸರಕಾರೀ ಕಾಗದಪತ್ರದೊಳಗಿನ ಮಾಹಿತಿಯನ್ನು ನಿಜವೆಂದು ತಿಳಿಯುಲಿಕ್ಕೆ ನೀನು ಮನಸ್ಸಿನಲ್ಲಿ ಸಂದೇಹವೇಕೆ ಪಡಬೇಕು?"

"ಅದಿರಲಿ. ನೀನನ್ನುವ ಆ ಎರಡನೇ ಮಾತು ಯಾವುದು?"

"ನಾನು ನಿನ್ನ ಮನಸ್ಸಿನಲ್ಲಿ ಹೊಕ್ಕು ನಿನ್ನ ಅನುಮಾನದ ತಳ-ಬುಡಗಳನ್ನೇನೂ ನೋಡಿರುವುದಿಲ್ಲ; ಆದರೆ ನನಗನಿಸುವುದೇನಂದರೆ:—(೧) ನೀನು ಹಕ್ಕಿಗಳ ಬೇಟಿ ಮಾಡಿದ್ದನ್ನು ಕಂಡು ಆ ಬೈರಾಗಿಗಳು ನಿನ್ನನ್ನು ಶಪಿಸಿದರು; ಮತ್ತು ಆ ಗಳಿಗೆಯನ್ನು ನೆನಪಿಡಲಿಕ್ಕೆ ನಿನಗೆ ಬಜಾಯಿಸಿದರು; ಮತ್ತು(೨) ಈ ತಂತಿಯಲ್ಲಿ ಯಾವ ನಿಶ್ಚಿತ ವೇಳೆ ಬರೆಯಲಾಗಿದೆಯೋ, ಇದು ಅದೇ ಗಳಿಗೆಯಾಗಿದ್ದು, ಆಗ ಮೇರೀ ವೂಡಹಾಊಸಳು ಅಲ್ಲಿ ಸತ್ತಳು ಇವೆರಡೂ ಸಂಗತಿಗಳು ಹೊಂದಿದ್ದರಿಂದ ನಿನ್ನ ಮನಸ್ಸಿಗೆ ಈ ಬೈರಾಗಿಗಳಲ್ಲೇನಾದರೂ ದಿವ್ಯಜ್ಞಾನವಿರಬೇಕೆಂದೆನಿಸಿತು."

"ನೀನು ಅನುಮಾನ ಪರಂಪರೆಯನ್ನು ಮಂಡಿಸಿದ್ದು ಸರಿಯಿದೆ; ಆದರೆ ಮುಂದೇನೆನ್ನುತ್ತೀ?"

"ಮತ್ತೇನೆನ್ನಲಿ? ಈ ನಿನ್ನ ಅನುಮಾನ ಪರಂಪರೆಯಲ್ಲಿ ದೋಷವಿದೆ; ಮತ್ತು ಈ ಅನುಮಾನ ಶೃಂಖಲೆಯೇ ನಿನ್ನ ತೀಕ್ಷ್ಣಬುದ್ಧಿಯ ಕಾಲಿಗೆ ಬೇಡಿ ಬಿದ್ದು, ನಿನ್ನನ್ನು ಹೀಗೆ ನಗೆಗೇಡು ಮಾಡಿದೆ. ಅದೇನಂದರೆ —೨೪ ತಾಸುಗಳ ಸಣ್ಣ ವಿಭಾಗಗಳನ್ನು ಮಾಡಿದರೆ ೬೦ ಗಳಿಗೆಗಳಾಗುತ್ತವೆ; ಮತ್ತು ಈ ಇಡೀ ಜಗತ್ತಿನಲ್ಲಿ ೬೦ ಗಳಿಗೆಗಳಲ್ಲಿ ನಡೆಯುವ ಸಂಗತಿಗಳು ಲೆಕ್ಕ ಮಾಡಲಿಕ್ಕೆ ಆಶಕ್ಯವಾದಷ್ಟು ಘಟಿಸುತ್ತಿರುವವಲ್ಲವೆ? ಅಂದಬಳಿಕ ಈ ಒಂದೊಂದು ಗಳಿಗೆಯಲ್ಲಿ ಘಟಿಸುವ ಕಿಮಾನ ಸಾವಿರಗಟ್ಲೆ ಮುಖ್ಯ ಮುಖ್ಯ ಸಂಗತಿಗಳಿಗೆ ನೀನು ಪರಸ್ಪರಗಳ ಕಾರ್ಯಸಂಬಂಧ ಹಚ್ಚತಕ್ಕವನೇ ಏನು?"

"ಭಲೆ-ಭಲೆ! ಇಷ್ಟು ವ್ಯಾಪಕ ಸಿದ್ಧಾಂತವನ್ನು ಯಾರೂ ಮಾಡುವುದಿಲ್ಲ; ಆದರೆ ನಾನು ವ್ಯಕ್ತಿಯೆಂದು ನನ್ನ ಸಂಬಂಧದಲ್ಲಿ ಒಂದೇ ಗಳಿಗೆಯಲ್ಲಿ ಮುಖ್ಯವಾದ ಎರಡು ಸಂಗತಿಗಳು ಐದಾರು ಸಾವಿರ ಮೈಲಿನ ಅಂತರದ ಮೇಲೆ ಘಟಿಸಿದರೆ, ಅವುಗಳ ಸಂಬಂಧವನ್ನು ನಾನು ಮನ್ನಿಸಬಾರದೇನು?"

"ಹಾಗಾದರೆ ವಿಲಾಯತಿಯಲ್ಲಿ ಘಟಿಸಿದ ಆ ಸಂಗತಿಯು ಇತ್ತ ಬೇಟಿ

ಯಲ್ಲಿ ಹಕ್ಕಿ ಕೊಂದ ಬಗ್ಗೆ ನಿನಗೆ ಶಿಕ್ಷೆಯೆಂದು ದೇವರು ಘಟಿಸಿದನೆಂದು ನೀನು ತಿಳಿದರೆ ನಾನು ಆ ಬಗ್ಗೆ ನಿನ್ನೊಡನೆ ಜಗಳಕಾದಲಿಕ್ಕಿಲ್ಲ. ನಾನು ನಾಸ್ತಿಕ. ನೀನು ಆಸ್ತಿಕನಿರುತ್ತೀಯೆಂದು ನಾನು ಅಂದೇನಿಷ್ಟೇ. ದೇವರ ನ್ಯಾಯ ನಿರ್ಣಯದಲ್ಲಿ ನಿನಗೆ ನಂಬಿಗೆಯಿದೆ; ಅಂದರೆ ನಿನ್ನ ಅಧ್ಯಾತ್ಮಜ್ಞಾನವು ನನಗಿಂತ ಶ್ರೇಷ್ಠವಿದೆ. ಮನಸ್ಸಿನ ಉಚ್ಚವಾತಾವರಣಕ್ಕೊಯ್ಯುವ ಇಂಥ ವಿಶ್ವಾಸದ ಬಗ್ಗೆ ಯಾರೂ ಯಾರೊಡನೆ ಜಗಳಾಡಬಾರದು; ಆದರೆ ಇದರಲ್ಲಿ ಆ ಬೈರಾಗಿಗಳ ಕರಾಮತು ಏನಿದೆಯಪ್ಪಾ ಚಂದೂ?"

"ಅದೇಕಿಲ್ಲ? ಈ ಗಳಿಗೆಯನ್ನು ನೆನಪಿಟ್ಟುಕೋ; ಎಂದು ಆತನು ನನಗೆ ಬಜಾಯಿಸಿದುದು ಆತನಿಗೆ ಆ ಗಳಿಗೆಯಲ್ಲಿ ಘಟಿಸುವ ಸಂಗತಿಗಳ ಅಂತ ಜ್ಞಾನವಾಗಿರಬೇಕಾದ್ದರಿಂದಲೇ ಅಲ್ಲವೆ?"

"ಇಲ್ಲಿ ಮಾತ್ರ ನಾನು ನಿನ್ನೊಡನೆ ವಾದಿಸಬಲ್ಲೆನು; ಯಾಕಂದರೆ, ನನಗೆ ಲೋಕದ ಯಾವ ಅನುಭವವಿದೆಯೋ ಅದು ನಿನಗಿರುವದಿಲ್ಲ. ನೀನು ತೀರ ಅಂತರ್ಗೃಹದಲ್ಲಿ ಪಾಲನ-ಪೋಷಣ ಹೊಂದಿರುವುದರಿಂದ, ಈ ಬೈರಾಗಿಯ ಹೊರತು ಮತ್ತೆ ನಾಲ್ಕೆಂಟು ಮಂದಿ ಬೈರಾಗಿಗಳಾದರೂ ನಿನ್ನ ಕಣ್ಣಿಗೆ ಕಂಡಿರುವರೋ ಇಲ್ಲವೋ ಈ ಬಗ್ಗೆ ಸಂದೇಹವೇ ಇದೆ. ನೀನು ಈ ಬೈರಾಗಿಯನ್ನು ಮೊದಲು ನೋಡಿದಾಗ ಪ್ರಾಣಿವಧದ ನಿಷೇಧದಿಂದ ನಿನ್ನ ಮನಸ್ಸು ಕೊಂಚ ಬಲಹೀನವಾಗಿರಬೇಕು. ನೀನು ಬೇಟೆಗಾರ ಕ್ಷತ್ರಿಯನಾಗಿದ್ದರೂ ಉಗ್ರಹಿಂಸೆಯು ಕಣ್ಣಿಗೆ ಯಾವಾಗಲೂ ವಿಷಾದವನ್ನುಂಟು ಮಾಡತಕ್ಕುದೇ ಇರುತ್ತದೆ. ನೆಲದ ಮೇಲೆ ಚೆಲ್ಲಿದ ರಕ್ತವು ಹುಟ್ಟು ದಯಾಬುದ್ಧಿಯ ಮನುಷ್ಯ ಧರ್ಮವನ್ನು ಜಾಗ್ರತಗೊಳಿಸದೆ ಬಿಡದು. ನೀನು ಬೇಟೆಯ ಸಮರ್ಥನವನ್ನು ಎಷ್ಟೇ ಮಾಡಿದರೂ ನಾನು ಅನ್ಯಾಯ ಮಾಡಿದೆ, ಅಪರಾಧ ಮಾಡಿದೆ ಎಂಬ ಅರಿವು ಸ್ವಲ್ಪಾದರೂ ಆ ಕಾಲಕ್ಕೆ ನಿನ್ನ ಮನಸ್ಸಿಗೆ ಆಗದಿರಲಿಕ್ಕಿಲ್ಲ ಮನಸ್ಸಿನ ಇಂಥ ಬಲಗುಂದಿದ ಅವಸ್ಥೆಯಲ್ಲಿ ಭಯಪ್ರದ ವೇಷದ ಆ ಬೈರಾಗಿಯು ನಿನ್ನನ್ನು ಸಿಟ್ಟಿನಿಂದ ನಿಷೇಧಿಸಿದರೆ. ಅದರ ನೆನಪು ನಿನ್ನ ಮನಸ್ಸಿನಲ್ಲಿ ಮರೆಯದಿರತಕ್ಕುದೇ; ಆದರೆ ಸೂರ್ಯಕಾಂತನು ನನಗೆ ಹೇಳಿದ್ದೇನಂದರೆ, ನೀನು ಆ ಕಾಲದಲ್ಲಂತೂ ಆ ಬೈರಾಗಿಗಳಿಗೆ ಬೈದು, ಅಂದು ಆತ್ಮಸಮರ್ಥನ ಮಾಡಿ ಆ ಸಮಯವನ್ನು ನೀಗಿಕೊಂಡೆ; ಹಾಗು ಆ ಮೇಲೆ ತುಸ ಹೊತ್ತಿನಲ್ಲೇ ನಿನ್ನ ಆ ಸರ್ ಸಿ. ಎಸ್. ಪಾಸಾದ ತಂತಿ ಬಂತು ಆಗಂತೂ ನೀನು ಆ ಬೈರಾಗಿಯೊಡನೆ ದೇವರ ನ್ಯಾಯನಿರ್ಣಯ ಬುದ್ಧಿಯ ಚೇಷ್ಟೆಯನ್ನೂ ಮಾಡಿದೆಯಂತೆ! ಆದರೆ ಈ ತಂತಿ ನಿನ್ನ ಕೈಗೆ ಬಿದ್ದ ಕೂಡಲೆ ನಿನ್ನ

ಹುಟ್ಟಿ ಹಾಗು ಕೃತ್ರಿಮ ಬಗೆಯ ಧೈರ್ಯವೆಲ್ಲ ಕಳಚಿ ಬಿದ್ದಿತು. ನಿನ್ನ ಬುದ್ಧಿಯು ದಿಙ್ಮೂಢವಾಯಿತು; ಹಾಗು ಬಳಿಕ ಆ ಗೊಂದಲದಲ್ಲಿ ಮುಂದು ವರಿಯುವಾಗ ಕೈಗೆ ಹತ್ತಿದ್ದ ಆ ಬೈರಾಗಿಗಳ ಗಡ್ಡವನ್ನೇ ಆಧಾರಭೂತವಾಗಿ ಹಿಡಿದುಕೊಂಡು, ಅವರಿಗೆ ಅಂತಜ್ಞಾನ ಮತ್ತು ಗುರುಪದಗಳನ್ನು ಅರ್ಪಿಸಿ ಬಿಟ್ಟೆ! ಆದರೆ ಈ ಫೈಲಿನೊಳಗಿನ ಕಾಗದಗಳ ಮೇಲಿಂದ ಈ ಬೈರಾಗಿಗಳ ನಿಜ ವಾದ ಯೋಗ್ಯತೆಯು ನಿನ್ನ ಧ್ಯಾನದಲ್ಲಿ ಬಂದ ಬಳಿಕಾದರೂ ನೀನೇನೆನ್ನುತ್ತೀ ಹೇಳು! ಇಂಥ ನೀಚ ಜನರಿಗೆ ತನ್ನ ಇಡುಗಂಟಿನೊಳಗಿನ ದಿವ್ಯವಾ ಅಂತಜ್ಞಾನದ ಬೆಲೆಯುಳ್ಳ ಪದಾರ್ಥವನ್ನು ಕೊಡುವಷ್ಟು ದೇವರು ಮೂರ್ಖನಿರುವನು, ಅನ್ಯಾಯಿಯಿರುವನು, ತಾರತಮ್ಯಶೂನ್ಯನಾಗಿರುವನು ಹೀಗೆ ನೀನೆನಬೇಕಾಗಿದೆಯೇನು?''

ವಿಷಯವನ್ನು ಕೊಂಚ ಬದಲಿಸಲಿಕ್ಕೆಂದು ಚಂದುವು:—''ಆದರೆ ಈಗ ಆ ಮಾತಾಡಿ ಪ್ರಯೋಜನವೇನು?''

''ಉಪಯೋಗವಿಷ್ಟೆ, ನಾನು ಈ ಬೈರಾಗಿಗಳನ್ನು ಯಾವ ಅವಸ್ಥೆಗೆ ಮುಟ್ಟಿಸತಕ್ಕವನಿರುವೆನೋ ಅದರಿಂದ ನಿನ್ನ ಗುರುಭಕ್ತಿಗೆ ಹಿಡಿಮಣ್ಣು ಬಿದ್ದರಂತೂ ವಿಹಿತವೇ; ಆದರೆ ಆ ನಿನ್ನ ಗುರುಭಕ್ತಿಯು ನನ್ನ ಕರ್ತವ್ಯಕ್ಕಾ ದರೂ ಅಡ್ಡಬರಬಾರದು! ಈ ಕರ್ತವ್ಯದಲ್ಲಿ ನಾನು ಕೇವಲ ನಿನ್ನ ಹಿರಿಯ ಆಪ್ತನೆಂದಿಷ್ಟೇ ಅಲ್ಲ, ನಾನೊಬ್ಬ ಜಬಾಬುದಾರ ಸರಕಾರೀ ಅಧಿಕಾರಿಯಿರುತ್ತೇ ನೆಂಬದನ್ನು ಲಕ್ಷ್ಯದಲ್ಲಿಡು; ಅಲ್ಲದೆ ನಿನಗೆ ತಿಳಿಸುವದೇನಂದರೆ, ಈ ಗುರುವು ನಿನ್ನ ಬುದ್ಧಿಯನ್ನು ಬಲಿಯಾಗಿ ಸ್ವೀಕರಿಸಿದರೂ ಅದರಿಂದ ನನಗೇನೂ ಕೆಡ ಕೆನಿಸಲಿಕ್ಕಿಲ್ಲ; ಆದರೆ ಈತನ ಶಿಷ್ಯನು ಬಿಂಬೆಯನ್ನು ಬಲಿತಕ್ಕೊಳ್ಳಲಿಕ್ಕೆ ಹೊಂಚು ಹಾಕಿರುತ್ತಾನೆಂಬ ಸಂದೇಹ ಬರಲು, ಮನಸ್ಸು ನಡುಗಿ ಹೋಗು ತ್ತದೆ! ಈ ಬಗ್ಗೆ ನಿನಗೆ ಏನಾದರೂ ತಿಳಿದಿದೆಯೋ?''

''ನಿನಗುಂಟಾದ ಸಂದೇಹವು ನನಗೂ ಉಂಟಾಗಿದೆ. ಅಂದಿನ ದಿನ ಹಾಗು ಇಂದೂ ನಾನು ಮತ್ತು ನೀನು ಕೂಡಿ ಮಠದ ಕಡೆಗೆ ಹೋದಾಗ ಜಂಬು-ಬಿಂಬೆಯರು ಮೋಟರು ತಕ್ಕೊಂಡು ಅವೇಳೆಯಲ್ಲಿ ಹೊರಗೆ ತಿರುಗಾಡ ಲಿಕ್ಕೆ ಹೋಗುತ್ತಾರೆಂದು ಮಠದ ಕಾವಲುಗಾರನೂ ಮೋಟರ ಡ್ರೈವರನೂ ಹೇಳಿದ್ದನ್ನು ಕೇಳಿಕೊಂಡಿರುತ್ತೇನೆ.''

''ಆದರೆ ನಾನು ಅದಕ್ಕೂ ಹೆಚ್ಚಿಗೆ ಕೇಳಿರುವದನ್ನು ನೀನು ಕೇಳಿದಂ ತಿಲ್ಲ. ಆದಿರಲಿ ಅದೆಲ್ಲ ನಿನಗೆ ತಾನಾಗಿಯೇ ತಿಳಿದೀತು. ನಿನ್ನಿಂದ ನನಗೀಗ ಒಂದೇ ವಚನ ಬೇಕಿದ್ದು, ನಾನು ಇನ್ನು ಮುಂದೆ ಏನು ಮಾಡುವೆನೋ

ಅದರಲ್ಲಿ ನೀನು ಕೈಹಾಕಬಾರದೆಂಬುದೇ; ಇಷ್ಟೇ ಅಲ್ಲ, ನೀನು ಆ ನನ್ನ ಪ್ರತಿಯೊಂದು ಕೆಲಸದಲ್ಲಿ ನನಗೆ ಮನಗಟ್ಟಿ ಸಹಾಯ ನೀಡಬೇಕು. ಇನ್ನು ಮುಂದಿನ ಘಟನೆಗಳಿಗೂ ನಿನ್ನ ಗುರು ಭಕ್ತಿಗೂ ಸರಿಹೊಂದಿಸುವದು ನಿನ್ನಿಂದಾದರೆ ವಿಹಿತವೇ ಅದಕ್ಕೆ ನನ್ನ ಅಡ್ಡಿಯಿಲ್ಲ. ಸರಿಹೊಂದಿಸಲಾಗಲಿಲ್ಲೆಂದು ಹರಿಗೊಗೆದು ಬಿಟ್ಟರೆ ಅದಂತೂ ಬಂಗಾರಕ್ಕಿಂತಲೂ ಬೆಲೆಯುಳ್ಳದ್ದಾದೀತ; ಮತ್ತು ಆ ಕೆಲಸಕ್ಕೆ ಇಂದಿನ ರಾತ್ರಿಯಿಂದಲೇ ಹೇಗೆ ಪ್ರಾರಂಭಿಸಬೇಕೆಂಬುದನ್ನು ನಾನು ದಾರಿಯಲ್ಲಿ ನಿನಗೆ ಹೇಳುವೆನು. ನಾವು ಮುಚ್ಚಂಜೆಯೊಳಗಾಗಿ ಮನೆಗೆ ಹೋಗಿ ತಲುಪುವದೇ ಯೋಗ್ಯವು.”

ಗುರು ಮತ್ತು ಶಿಷ್ಯ ಇವರ ವಿಷಯುವಾಗಿ ತನ್ನ ಶ್ರದ್ಧೆಯು ಹೇಗೆ ಮೆಲ್ಲಮೆಲ್ಲನೆ ಅಕುಂಚಿತವಾಗುತ್ತಿತೆಂಬುದನ್ನು ಚಂದುವು ಮನಬಿಚ್ಚಿ ಬನ್ಸೀಧರನಿಗೆ ಈ ಕಾಲಕ್ಕೆ ಹೇಳಿದ್ದರೂ ಅದು ಯೋಗ್ಯವಾಗುತ್ತಿಲ್ಲ. ಅದರೂ ತನ್ನ ಮೂರ್ಖತನವನ್ನು ಲೋಕದವರೆದುರು ಒಪ್ಪಿಕೊಳ್ಳುವುದನ್ನು ಎಷ್ಟು ಮುಂದೂಡಲಾದೀತೋ ಅಷ್ಟು ಯಾರು ಗುರುವರೂ ಇಷ್ಟವೇ ಇರುತ್ತದೆ. ಅಂತೆಯೇ ಇತ್ತ ತನ್ನ ನಾಚಿಕೆಯನ್ನು ಮುಚ್ಚಿಕೊಂಡು, ಅತ್ತ ಬನ್ಸಿಧರನೊಡನೆ ಸ್ನೇಹದೋರಿ ಚಂದುವು ಅವನೊಡನೆ ಸಂಪೂರ್ಣ ಸಹಕಾರತೆಯನ್ನು ಮಾನ್ಯ ಮಾಡಿದನು.

ಮನೆಗೆ ತಲುಪಿದ ಕೂಡಲೆ ಬನ್ಸೀಧರನು ಮಾಸಾಹೇಬರಿಗೆ ಭೆಟ್ಟಿಯಾದನು; ಹಾಗು ಚಂದುವಿನೆದುರಿಗೇ ಅತನು ಅವರನ್ನುದ್ದೇಶಿಸಿ: “ಮಾಸಾಹೇಬ, ಇನ್ನು ಮುಂದೆ ಚಂದುವು ನನಗೆ ನನ್ನ ಕೆಲಸದಲ್ಲಿ ಸಹಾಯ ಮಾಡತಕ್ಕವನಿರುತ್ತಾನೆಂಬುದೊಂದೇ ಗುರ್ತಿನ ಮಾತು ಈಗ ಹೇಳುವೆನು. ಇಂದು ನೀವು ಮಠದೊಳಗಿನ ಗುರು, ಶಿಷ್ಯ ಹಾಗು ಆ ಯಾತ್ರಿಕ ಇವರನ್ನು ಮಠದಲ್ಲಿ ಉಣಗೊಡದೆ, ಆ ತ್ರಿವರ್ಗರನ್ನೂ ಇಂದು ರಾತ್ರಿಯು ಊಟಕ್ಕೆ ಇಲ್ಲಿಗೇ ಈ ದೊಡ್ಡಮನೆಗೆ ಬರಮಾಡಿಕೊಳ್ಳಿರಿ. ಅವರಿಗೆ ಅಡಿಗೆಯವರಿಂದ ಬಡಿಸ ಹಚ್ಚಿರಿ. ಅವರ ಊಟದ ಸಮಾಚಾರ ತಕ್ಕೊಳ್ಳಲಿಕ್ಕೆ ನಮ್ಮ ವತಿಯಿಂದ ಹಾಜರಿರಲಿಕ್ಕೆ ಬಿಂದೆಗೆ ಹೇಳಿರಿ; ಅಂದರೆ ಆ ಮೇಲೇನು ಮಾಡಬೇಕೆಂಬದನ್ನು ನಾನು ಹೇಳುವೆನು.”

ಇಂದು ರಾತ್ರಿಯ ಊಟದ ಸ್ಥಳವು ಬದಲಾಯಿತು; ಹಾಗು ಖುದ್ದ ಮಾಸಾಹೇಬರ ನಿಮಂತ್ರಣದ ಮೇರೆಗೆ ದೊಡ್ಡವಾಡೆಯಲ್ಲಿ ತಾವು ತ್ರಿವರ್ಗರನ್ನೂ ಊಟಕ್ಕೆ ಕರೆದ ಬಗ್ಗೆ ಗುರುಮಹಾರಾಜರಿಗೆ ಅಪೂರ್ವವೇ ಅನಿಸಿತು. ಆ ಮೂವರೂ ಅತ್ತ ಊಟಕ್ಕೆ ಹೋದರು. ಅವರ ಊಟವು ಪ್ರಾರಂಭ

ವಾದ ಕೂಡಲೆ ಅಡಿಗೆಯುವನನ್ನು ಒತ್ತಟ್ಟಿಗೆ ಕರೆದು ಉಣ್ಣುವವರಿಗೆ ಶಕ್ಯವಾದಷ್ಟು ಹೆಚ್ಚು ಆಗ್ರಹ ಮಾಡಬೇಕೆಂದು ಸೂಚಿಸಲಾಯಿತು. ಬಳಿಕ ಮಾಸಾಹೇಬ ಮತ್ತು ಚಂದೂ ಇವರೊಡನೆ ಬನ್ಸೀಧರನು ಮಠದೊಳಗೆ ಹೊಕ್ಕನು. ಆತನು ಹಿಂದು ಮುಂದಿನ ಕದಗಳನ್ನು ಚನ್ನಾಗಿ ಭದ್ರಪಡಿಸಿಕೊಂಡನು ಕಿಟಕಿಗಳನ್ನು ಮುಚ್ಚಿ[illegible]ಡನು. ಆ ಯಾತ್ರಿಕನ ಕಾವಡಿಯ ಬಳಿಗೆ ಹೋಗಿ ಅದರ ಮೇಲಿನ [illegible] ತೆಗೆದು ಒಳಗಿನ ಗಿಂಡಿಗಳ ಬಾಯಿಗಳನ್ನು ಬಿಚ್ಚಿದನು; [illegible] ಒಂದು ಗಿಂಡಿಯೊಳಗಿಂದ ಮೂರು ಜಂಬಿಯಾಗಳನ್ನೂ ಇನ್ನೊಂದು ಗಿಂಡಿಯಿಂದ ಮೂರು ಪಿಸ್ತೂಲುಗಳನ್ನೂ ಹೊರದೆಗೆದನು. ಚಂದೂ ಹಾಗು ಮಾಸಾಹೇಬರಿಗೆ ಇದರ ಅರ್ಥವು ತಿಳಿಯಲೊಲ್ಲದು. ಆಗ ಬನ್ಸಿ[illegible]:—"ಈ ಇಬ್ಬರು ದರವಡೆಗಾರರಿಗೆ ಈ ಮೂರನೆಯುವನೊಬ್ಬ ಸಾಥಿದಾ[illegible]ನು. ಇವರಿಗೆ ಇಂದು ಇಲ್ಲವೆ ನಾಳೆ ರಾತ್ರಿ ಇಲ್ಲಿಂದ ಒಡಿ ಹೋಗಲಿಕ್ಕೆ ಸಹಾಯ್ಯ ಮಾಡುವ ಸಲುವಾಗಿ ಹಾಗು ಪ್ರಸಂಗ ಬಿದ್ದರೆ ಬಚಾವಿಗಾಗಿ ಈ ಆಯುಧಗಳನ್ನು ತಕ್ಕೊಂಡು ಈ ಯಾತ್ರಿಕನು ಇಲ್ಲಿಗೆ ಬಂದಿರುತ್ತಾನೆ. ಇನ್ನು ನಾನು ಇವುಗಳನ್ನೇನು ಮಾಡುತ್ತೇನೆಂಬದನ್ನು ತೋರಿಸುವೆನು, ಎಂದಂದು, ಆತನು ಆ ಮೂರೂ ಪಿಸ್ತೂಲಗಳನ್ನು ಬಿಚ್ಚಿ ಅವುಗಳೊಳಗಿನ ಕಾಡತೂಸುಗಳನ್ನು ತನ್ನ ಜೇಬಿಗೆ ಹಾಕಿಕೊಂಡನು; ಮತ್ತು ಜಂಬಿಯಾಗಳ ಸಾಣೆಯ ಮಗ್ಗಲು ಹಾಗು ತುದಿ ಇವುಗಳನ್ನು ಕೆಳಗಿನ ಫರಸುಗಲ್ಲುಗಳ ಮೇಲೆ ತಿಕ್ಕಿ ಹೆಚ್ಚಾಗಿ ಮೊಂಡಗೊಳಿಸಿದುದರಿಂದ ಅವುಗಳಿಂದ ಯಾರಿಗೂ ಗಾಯಾಪಾಯ[illegible]ಳಾಗದಂತಾಯಿತು. ಬಳಿಕ ಆತನು ಆ ಆಯುಧಗಳನ್ನು ಎಲ್ಲಿದ್ದವೋ ಅಲ್ಲಿ ಮತ್ತೆ ಹಾಗೆಯೇ ಇರಿಸಿದನು. ಗಿಂಡಿಗಳ ಬಾಯಿಗಳನ್ನು ಕಟ್ಟಿದನು. ಕಾವಡಿಗಳ ಮೇಲೆ ಹೊದಿಕೆಗಳನ್ನು ಹೊದಿಸಿದನು; ಮತ್ತು ಆ ತ್ರಿವರ್ಗರೂ ಭೋಜನ ಶಾಲೆಗೆ ಹಿಂದಿರುಗಿದರು. "ನಿದಾನವಾಗಿ ಊಟವಾಗಲಿ" ಎಂದು ಸಹಜವಾಗಿ ಹೇಳಿ, ಬನ್ಸೀಧರನು ಅವರಿಬ್ಬರನ್ನು ಕರೆಕೊಂಡು ಮಾಸಾಹೇಬರ ಕೋಣೆಗೆ ಹೋ[illegible]:—"ಇಂದು ರಾತ್ರಿಯಲ್ಲಿ ನೀವು ನಿಮ್ಮ ನಿಮ್ಮ ಸ್ಥಳಗಳಲ್ಲೇ ಸಾವಧಾನದಿಂದಿರ್ರಿ. ಅವಶ್ಯವೆನಿಸಿದರೇ ನಾನು ನಿಮ್ಮನ್ನು ಕರೆಯುತ್ತೇನೆ" ಎಂದನು. ನಡೆದ ಪ್ರಕಾರವನ್ನೆಲ್ಲ ತಿಳಿಸಿ, ರಾತ್ರಿಯಲ್ಲಿ ಹುಷಾರಾಗಿರಬೇಕೆಂಬ ನಿರೂಪವನ್ನು ಸರ ಸಾಹೇಬರಿಗಾದರೂ ತಿಳಿಸಲೇಬೇಕಿತ್ತು; ಆದರೆ ಆ ಕೆಲಸವನ್ನು ಆತನು ಮಾಸಾಹೇಬರಿಗೇ ಒಪ್ಪಿಸಿವನು. ಬಳಿಕ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಮಲಗಿದರು.

———

ಬನ್ಸೀಧರನೂ ತನ್ನ ಕೋಣೆಗೆ ಮಲಗಲಿಕ್ಕೆಂದು ಹೋದನು; ಆದರೆ ಅಷ್ಟರಲ್ಲಿ ಅವನಿಗೇನೋ ಕಲ್ಪನೆಯು ಸೂಚಿಸಲು, ಆತನು ಮೆಲ್ಲನೆ ಎದ್ದು ಆ ಕೋಣೆಯ ಬಾಗಿಲವಿಕ್ಕಿ, ಆ ನಂದಭುವನದೊಳಗಿಂದ ಹೊರಬಿದ್ದನು. ಆತನು ಕೊತವಾಲನಿಗೆ ಭೆಟ್ಟಿಯಾಗಿ, ಪ್ರಸಂಗಬಿದ್ದರೆ ಮೂರು-ನಾಲ್ಕು ಜನ ಪೋಲೀಸರು ನಂದಭುವನಕ್ಕೆ ತೀರ ಸಮೀಪವಾಗಿದ್ದ ಪೋಲೀಸ ಗೇಟಿನಲ್ಲಿ ತನಗೆ ದೊರೆಯುವ ಬಗ್ಗೆ ವ್ಯವಸ್ಥೆ ಮಾಡಿ ಹಿಂದಿರುಗಿದನು; ಆದರೆ ಹಾಗೆ ಮರಳಿದ ಅವನು ತನ್ನ ಕೋಣೆಯಲ್ಲಿ ಹೋಗದೆ, ಮಠದ ಕಾವಲುಗಾರನಾದ ಗಿರಿಧರ ಹಾಗು ಮೋಟರಿನ ಡ್ರೈವರ ಇವರುಗಳಿಗೆ ಆತನು ಭೆಟ್ಟಿಯಾದನು; ಮತ್ತು ಮುಂಚಿನಂತೆ ಇಂದೂ ಮಠದ ಮೇಲಿನ ಒಳಮಾಳಿಗೆಯ ಮೇಲೆ ಹೋಗಿ ಕುಳಿತನು; ಆದರೆ ಎಷ್ಟೋಹೊತ್ತಿನ ವರೆಗೆ ಇದ್ದರೂ ಅಲ್ಲಿ ಆತನಿಗೇನೂ ಚಲನವಲನ ಕೇಳಿಸಲಿಲ್ಲ.

ಇತ್ತ ಮಧ್ಯರಾತ್ರಿಯಾದರೂ ಚಂದುವು ತನ್ನ ಕೋಣೆಯೊಳಗಿನ ದೀಪದೆದುರು ಓದುತ್ತಲೇ ಕುಳಿತಿದ್ದನು. ಅಂದು ಆತನಿಗೆ ಏನಾದರೂ ನಿದ್ರೆ ಬರಲೊಲ್ಲದು. ಅವನು ಕಣ್ಣಿಗೂ ತಲೆಗೂ ತಣ್ಣೀರು ಬಡೆದು ನೋಡಿದನು; ಮತ್ತು ವಾಚನವಂತೂ ನಿದ್ದೆಬರಲಿಕ್ಕೆ ಉತ್ತಮ ಸಾಧನವೆಂದು ಅವನ ಅನುಭವವಿದ್ದುದರಿಂದ, ವಿಷಯದಲ್ಲಿ ಮನಸ್ಸು ರಮಿಸದಿದ್ದರೂ ನಿದ್ದೆಯ ಸಾಧನವೆಂದು ಆತನು ಓದಹತ್ತಿದನು; ಆದರೆ ಇಂದು ಆ ಉಪಾಯವೂ ವ್ಯರ್ಥವಾಯಿತು! ಕೊನೆಗೆ ಬೇಸತ್ತು, ದೀಪ ಆರಿಸಿ, ಅವನು ಹಾಸುಗೆಯ ಮೇಲೆ ಬಿದ್ದುಕೊಂಡನು. ನಿದ್ದೆ ಹತ್ತಿರದಿದ್ದರೂ ಕಣ್ಣು ಮುಚ್ಚಿದ ಸ್ಥಿತಿಯಲ್ಲಿ ಸ್ವಪ್ನದಂತೆಯೇ ಕಲ್ಪನೆಗಳ ಪರಿಭ್ರಮಣವು ನಡೆಯುತ್ತದೆ; ಆದರೆ ಆ ಸ್ಥಿತಿಯಲ್ಲಿ ನಿದ್ದೆಗಿಂತಲೂ ಕಿವಿಗಳು ಹೆಚ್ಚು ತೀಕ್ಷ್ಣವಿರುತ್ತವೆ. ಆ ಕಾಲಕ್ಕೆ ಆತನಿಗೆ ಅವುಗಳ ಉಪಯೋಗವಾಯಿತು. ಯಾಕಂದರೆ ಮುಂದೆ ಸರಾಸರಿ ಹದಿನೈದು ನಿಮಿಷಗಳಲ್ಲಿ ಕೆಳಗಡೆಯ ಯಾವುದೋ ಒಂದು ಕದದ ಮೇಲೆ ಟಕ್ ಟಕ್ ಎಂಬು ಬಡಿದ ಸಪ್ಪಳವು ಅವನಿಗೆ ಕೇಳಿಸಿತು.

ಮೊದಮೊದಲು ಅವನಿಗೆ ಆ ಬಗ್ಗೆ ವಿಶೇಷವೇನೂ ಅನಿಸಲಿಲ್ಲ; ಆದರೆ ಮತ್ತೆ ಮತ್ತೆ ಅದೇ ಸಪ್ಪಳವು ಬರುತ್ತಿರುವದನ್ನು ಕೇಳಿ, ಚಿಕಿತ್ಸೆಯಿಂದ ಅವನು ತನ್ನ ಕೋಣೆಯ ಕಿಟಕಿಯ ಬಾಗಿಲವನ್ನು ಒಂದಿಷ್ಟು ತೆರೆದು ಅದರೊಳಗಿಂದ ಕೆಳಗಡೆಗೆ ಇಣುಕಿ ನೋಡಿದನು. ಚಂದೂನ ಕೋಣೆಯು ಅಟ್ಟದಮೇಲಿದ್ದು, ಯಾವ ಬಾಗಿಲದ ಮೇಲೆ ಆ ಟಕ್ ಟಕ್ ಎಂಬ ಸಪ್ಪಳ

ವಾಗುತ್ತಿದ್ದಿತೋ, ಅದು ಕೆಳಗಡೆಗೆ ಸರಾಸರಿ ಹತ್ತು ಫೂಟು ಅಂತರದ ಮೇಲಿದ್ದಿತು ಆ ಕೋಣೆಯಿಂದ ಹೊರಬೀಳತಕ್ಕ ಕದವೇ ಅದಾಗಿದ್ದಿತು.

ಕೆಲ ಕ್ಷಣಗಳಲ್ಲಿ ಕೋಣೆಯ ಕದವು ತೆರೆಯಲ್ಪಟ್ಟಿತು. ಆದರೂ ಕೋಣೆಯಿಂದ ಹೊರಗೆ ಯಾರೂ ಬರಲಿಲ್ಲ; ಇಲ್ಲವೆ ಒಳಗೆ ಯಾರೂ ಹೋಗಲಿಲ್ಲ. ಕೋಣೆಯೊಳಗಿನ ವ್ಯಕ್ತಿಯು ಹೊಸ್ತಿಲದೊಳಗೆ ಮತ್ತು ಹೊರಗಡೆಯ ವ್ಯಕ್ತಿಯು ಹೊಸ್ತಿಲದ ಹೊರಗೆ ಹೀಗೆ ನಿಂತುಕೊಂಡೇ ತೀರ ಮೆಲ್ಲಗೆ ಗುಣುಗುಟ್ಟ ಹತ್ತಿದ್ದರು. ಒಂದಿಷ್ಟು ಅಡ್ಡ ಮುಗ್ಗಲಿನಿಂದ ಚಂದ್ರಪ್ರಕಾಶವು ಆ ಭಾಗದ ಮೇಲೆ ಬೀಳಹತ್ತಿದ್ದರಿಂದ, ಹೊಸ್ತಿಲದ ಹೊರಗಿನ ವ್ಯಕ್ತಿಯು ಇನ್ನಾರೂ ಆಗಿರದೆ. ಜಂಬುವೇ ಆಗಿರುವನೆಂದು ಆವನಿಗೆ ಖಾತ್ರಿಯಾಯಿತು; ಯಾಕಂದರೆ ಅದು ಬಿಂಬೆಯ ಕೋಣೆಯಾಗಿತ್ತು ಕೆಳಗಿನ ಹಾಗು ಗುಣಗುಟ್ಟಿದ ಶಬ್ದಗಳು ಮೇಲೆ ಹೇಗೆ ಸ್ಪಷ್ಟವಾಗಿ ಕೇಳಬರಬೇಕು? ಆದರೆ ಜಂಬುವು ಬಲಪೂರ್ವಕ ಆಗ್ರಹ ಪೂರ್ವಕ ಬಿಂಬೆಗೆ ಕೋಣೆಯಿಂದ ಹೊರಬೀಳಲಿಕ್ಕೆ ಕರೆಯುತ್ತಿದ್ದನು; ಹಾಗು ಬಿಂಬೆಯು ಒಳಗಿನಿಂದಲೇ ಕೋಣೆಯಿಂದ ಹೊರಬೀಳಲಿಕ್ಕೆ ಅಸಮ್ಮತಿ ತೋರಿಸುತ್ತಿದ್ದಳು, ಎಂದು ಚಂದುವಿಗೆ ಭಾಸವಾಯಿತು.

ಮತ್ತೆ ಕೆಲ ಹೊತ್ತಿಗೆ ಆ ಇಬ್ಬರೂ ಮಾತಾಡುವವರ ಧ್ವನಿಯೂ ತುಸ ಗಟ್ಟಿಯಾಯಿತು. ಅವರು ತಿಳಿದೂ ತಿಳಿದು ನಿರ್ಭೀತಿಯಿಂದ ಹಾಗೆ ಗಟ್ಟಿಯಾಗಿ ಮಾತಾಡಹತ್ತಿದ್ದರೆಂತಲ್ಲ; ಆದರೆ ಮಾತಿಗೆ ಮಾತು ಬೆಳೆದು, ವಾದಿಸ್ವಾಟದ ಸ್ವರೂಪವು ಪ್ರಾಪ್ತವಾದ ಕೂಡಲೆ ಅವನಿಗೆ ಗೊತ್ತಾಗದ ಹಾಗೆಯೇ ಮನುಷ್ಯನ ಧ್ವನಿಯು ಏರುತ್ತವೆ. ಹೀಗೆಯೇ ನಾಲ್ಕಾರು ನಿಮಿಷ ಕಳೆಯಲು, ನಕಾರ ಇಲ್ಲವೆ ನಿಷೇಧಪ್ರದರ್ಶಿಸುತ್ತಿರಲು ಬಿಂಬೆಯ ಕೈಯು ಹೊರಬಿದ್ದ ಕೂಡಲೆ ಜಂಬುವು ಅದನ್ನು ಗಟ್ಟಿಯಾಗಿ ಹಿಡಿದು:—'ಮೋಟರ ಮನೆಯೊಳಗಿನ ಮೋಟರನ್ನು ಯಾರಿಗೂ ಗೊತ್ತಾಗದಂತೆ ಹೊರದೆಗೆದಿರುತ್ತೇನೆ; ಮತ್ತು ಹಾಗೆಯೇ ಇಳುಕಲಿನಲ್ಲಿ ದೂಡಿಕೊಂಡೊಯ್ದು ತುಸ ದೂರ ನಂದಭುವನದ ಮಹಾದ್ವಾರದ ಬಳಿಗೆ ನಿಲ್ಲಿಸಿರುತ್ತೇನೆ. ನೀನು ಹೋಗಿ ಅದರಲ್ಲಿ ಕೂಡ್ರು; ಅಂದರೆ ನಾನು ಇಂಜಿನ್ನು ಸುರುವು ಮಾಡದೆ, ಆ ಮೋಟರನ್ನು ಹಾಗೆಯೆ ಇನ್ನಷ್ಟು ದೂರ ದೂಡುತ್ತೇನೆ. ಬಳಿಕ ಆವರಿಬ್ಬರೂ ಬರುವರು. ಕೂಡಲೆ ನಾವೆಲ್ಲರೂ ಕೂಡಿ ಇನ್ನೂ ಬೆಳಗಾಗಲು ಅವಕಾಶವಿರುವ ಐದು ತಾಸಿನಲ್ಲಿ ನೂರು ಮೈಲಾದರೂ ಅಂತರವನ್ನು ಕ್ರಮಿಸಿ, ಪರಕೀಯ ಸಂಸ್ಥಾನದ ಸೀಮೆಯಲ್ಲಿ ಹೋಗೋಣ ನೀನು ಯಾವ ಬಗ್ಗೆಯೂ ಚಿಂತಿಸಬೇಡ. ನಿನ್ನ ಜೊತೆಗೆ ಹೆಚ್ಚಾಗಿ ಸಾಮಾನು ತಕ್ಕೊಳ್ಳಬೇಡ. ನಿನ್ನ ಕಪಾಟನೊಳಗಿನ

ಅಮೂಲ್ಯ ವಸ್ತ್ರ ಒಡವೆಗಳ ಸ್ತ್ರೀ ಸಂದುಕವನ್ನೆಷ್ಟು ತೆಗೆದುಕೊಂಡರೂ ಸಾಕು; ಆದರೆ ಬೇಗನೆ ಹೊರಡು; ತಡಮಾಡಬೇಡ. ನಾವು ಇದೆಲ್ಲ ಕೆಲಸವನ್ನು ಯಾರಿಗೂ ಗೊತ್ತಾಗದ ಹಾಗೆ ಮಾಡಬೇಕಾಗಿದೆ.”

ಆದರೆ ಬಿಂಬೆಯು ಜಂಬೂನ ಪಾಶದಲ್ಲಿ ಎಷ್ಟೋ ಸಿಕ್ಕಿದ್ದರೂ, ಮನೆಯೊಳಗಿಂದ ಹೊರಬಿದ್ದು ಆತನೊಡನೆ ಹೊರಟುಹೋಗುವ ಕಲ್ಪನೆಯು ಆವಳಿಗೆ ರುಚಿಸಿರಲಿಕ್ಕಿಲ್ಲ; ಇಲ್ಲವೆ ಭಯಪ್ರದವೆನಿಸಿರಬಹುದು. ಅವಳು ಬಗೆಬಗೆಯಿಂದ ನಕಾರ ತೋರಿಸಿದಳು. ಮೊದಲು ಕಕ್ಕುಲಾತಿಯಿಂದ, ಬಳಿಕ ಸವಿಮಾತಿನಿಂದ ಹಾಗು ಕೊನೆಗೆ ನಿಶ್ಚಯಪೂರ್ವಕವಾಗಿ ಅವಳು ನಕಾರ ತೋರಿ: “ಜಂಬೂ, ನನ್ನ ಮಾತು ಕೇಳು. ಈ ಸಾಹಸಕ್ಕೆ ನೀನೂ ಬೀಳಬೇಡ; ನನ್ನನ್ನು ಕೆಡಹಬೇಡ” ಎಂದು ಹೇಳಿದಳು. ಜಂಬುವು ಏನಾದರೂ ಆಕೆಯ ಕೈ ಹಿಡಿದು ಜಗ್ಗುವದನ್ನು ಬಿಡಲಿಲ್ಲ.

ಇದನ್ನೆಲ್ಲ ಕಂಡ-ಕೇಳಿಕೊಂಡ ಕೂಡಲೆ ಚಂದುವು ದೇಹಸ್ಮೃತಿವಿರಹಿತನಾದನು. ಆತನು ತನ್ನ ಕಪಾಟಿನ ಬಾಗಿಲು ತೆರೆದು ಅದರೊಳಗಿನದೊಂದು ಚಿಕ್ಕಖಾನೆಯಲ್ಲಿ ಕೈನೀಡಿ ಪಿಸ್ತೂಲ ಹೊರತೆಗೆದನು. ಅದರಲ್ಲಿ ಕಾಡತೂಸುಗಳನ್ನು ತುಂಬಿದನು; ಮತ್ತು ಅದರ ಕುದುರೆಯನ್ನು ಚೆನ್ನಾಗಿ ಕೂಡ್ರಿಸಿ ಆ ಪಿಸ್ತೂಲನ್ನು ತನ್ನ ಜೇಬಿನೊಳಗಿಟ್ಟುಕೊಂಡು ಆತನು ಹಾಗೆಯೇ ಬರಿಗಾಲಿನಿಂದ ಕೋಣೆಯೊಳಗಿಂದ ಹೊರಬಿದ್ದನು. ಮೆಟ್ಟಿಲುಗಳನ್ನಿಳಿದು ಬಂದು ಜಂಬೂನ ಹಿಂದಿನಿಂದ ಸುಮ್ಮನೆ ಅಲ್ಲಾಡುತ್ತಿದ್ದ ಜಂಬೂನ ಎಡಗೈಯನ್ನು ಹಿಡಿದನು. ಆ ಕೂಡಲೆ ಜಂಬುವು ತಾನು ಹಿಡಿದಿದ್ದ ಬಿಂಬೆಯ ಕೈಬಿಟ್ಟು ಒಮ್ಮೆಲೆ ಹಿಂದಿರುಗಿದನು. ಕೂಡಲೆ ಬಿಂಬೆಯು ಸಂಧಿಸಾಧಿಸಿ ಒಳಗಿನಿಂದ ಕದವನ್ನಿಕ್ಕಿ ಚಿಲಕಹಾಕಿಕೊಂಡಳು. ತಾನು ಕದತೆಗೆದು ಯಾರೊಡನೆಯಾದರೂ ಮಾತಾಡುತ್ತಿದ್ದೆನೆಂಬ ಕಲ್ಪನೆಯು ಅತ್ತಣಿಂದ ಬಂದಿದ್ದ ಆ ಮನುಷ್ಯನಿಗೆ ಬಂದಿತ್ತೋ ಇಲ್ಲವೋ ಎಂಬದು ಆಕೆಗೆ ಹೇಗೆ ಗೊತ್ತಾಗಬೇಕು? ಆದರೆ ತರುವಾಯ ಏನು ನಡೆದೀತೋ, ಅದರಲ್ಲಾದರೂ ತನ್ನ ಸಂಬಂಧ ವುಂಟಾಗಬಾರದೆಂಬ ನಿಶ್ಚಯದಿಂದ ಅವಳು ಕದವನ್ನಿಕ್ಕಿಕೊಂಡಳು.

ಚಂದುವು ಜಂಬೂನ ಕೈಜಗ್ಗಿ ಆತನನ್ನು ಮೆಟ್ಟಿಲದ ಮೇಲಿಂದ ಕೆಳಗೆ ಎಳೆದು:-“ಬದ್‌ಮಾಷ! ಇದೇ ಏನು ನಿನ್ನ ಬೈರಾಗಿತನವು! ಇದೆಯೋ ನಿನ್ನ ವೈರಾಗ್ಯವು! ಇದೇ ನಿನ್ನ ಶಿಷ್ಯತ್ವವೇನು? ನಿನ್ನನ್ನು ಕಂಡಾಗಿನಿಂದ ನಿನ್ನ ನಿಜಸ್ವರೂಪವು ನನಗೆ ಗೊತ್ತಾಗದಿದ್ದರೂ, ನೀನು ಕಾಣುವಂತೆ ಇರುವದಿಲ್ಲೆಂಬದು ಮಾತ್ರ ನನ್ನ ಖಾತ್ರಿಯಾಗಿಹೋಗಿತ್ತು. ನೀನು ನನ್ನ ಅಪ್ಪಣೆಯ

ಹೊರತು ನನ್ನ ಮೊಟರನ್ನೊಯ್ದು ಬಿಂಬೆಯೊಡನೆ ತಿರುಗಾಡಲಿಕ್ಕೆ ಹೋಗುತ್ತೀ ಏಕೆಂದು ನಾನು ನಿನಗೆ ಬಜಾಯಿಸಿ ಕೇಳಿದಾಗ, ನೀನು ನಾಚಿಕೆಗೇಡಿಯಾಗಿ ನಿನ್ನ ವರ್ತನವನ್ನು ಸಮರ್ಥಿಸಿದ್ದೆ; ಆದರೆ ಆ ನನ್ನ ಕಟ್ಟೆಚ್ಚರಿಕೆಯ ಮೂಲಕ ನೀನು ನಿನ್ನೀ ಹುಡುಗಾಟವನ್ನು ಬಿಟ್ಟು ಬಿಟ್ಟೀಯೆಂಬ ಆಶೆಯಿಂದ ನಾನು ನಿನ್ನೀ ವರ್ತನದ ದೂರನ್ನು ಆ ಎರಡನೇ ಬೈರಾಗಿಯ ಎದುರು ಇದುವರೆಗೂ ಹೆಚ್ಚಾಗಿ ಹೇಳಲು ಹೋಗಲಿಲ್ಲ; ಆದರೆ ಇಂದೇ ಸಂಜೆಯ ಮುಂದೆ ಆ ಇ-ನ್ನೊಬ್ಬ ಬೈರಾಗಿಯ ನಿಜಸ್ವರೂಪವೂ ಮುದ್ದೆ-ನಾಲಿನೊಡನೆ ನನಗೆ ತಿಳಿದು ಬಂದಿತು. ಇದು ಮಠವಾಗಿರದೆ, ನಾನು ನನ್ನ ಕೈಯಿಂದಲೇ ನಿಮ್ಮಂಥ ದುಷ್ಟ ಸರ್ಪಗಳಿಗೆ ಇದೊಂದು ಹೋರನ್ನೇ ಸಿದ್ಧಪಡಿಸಿಕೊಟ್ಟಿದ್ದೇನೆ. ಒಳ್ಳೇದು. ಈಗಿಂದೀಗಲೆ ನಿನ್ನನ್ನು ಹೀಗೆಯೇ ಆತನ ಕಡೆಗೆಳೆದೊಯ್ಯುತ್ತೇನೆ; ಹಾಗು ಅವನೆದುರಿಗೆ ಈ ಬಗ್ಗೆ ಜಬಾಬು ಕೇಳುತ್ತೇನೆ. ಬನ್ನೀಧರನು ಸಂಜೆಯ ಮುಂದೆ ನಿಮ್ಮಗಳ ಮಾಹಿತಿ ತಿಳಿಸಿದಾಗಿನಿಂದ ನಾನು ಪಶ್ಚಾತ್ತಾಪದಿಂದ ಹುಚ್ಚನಾಗಿದ್ದೇನೆ. ನಿಮ್ಮಗಳಂತೆಯೇ ನನಗೆ ನನ್ನ ಮೇಲೆ ಕೋಪವುಂಟಾಗಿದೆ; ಆದರೆ ನಡೆ. ಕೊನೆಗೆ ಏನು ಮಾಡುವದೋ ಅದನ್ನು ಮಠದಲ್ಲೇ ಮಾಡುವೆನು.''

ಎಂದೆಂದು, ಚಂದುವು ಜಂಬುವನ್ನು ಜಗ್ಗಿಕೊಂಡು ಮಠದ ಕಡೆಗೆ ನಡೆದನು. ಜಂಬುವು ಬಲಿಷ್ಠನಿದ್ದರೂ ಅವನಿಂದ ಚಂದುವಿನ ಕೈಯೊಳಗಿನ ತನ್ನ ಮುಂಗೈಯನ್ನು ಬಿಡಿಸಿಕೊಳ್ಳಲಾಗಲಿಲ್ಲ; ಅಲ್ಲದೆ ಮೇಲಿನಂತೆ ಮಾತಾಡುವಾಗ ಚಂದುವು ಜೇಬಿನೊಳಗಿಂದ ತನ್ನ ಪಿಸ್ತೂಲು ತೆಗೆದುದನ್ನು ಅವನು ಕಂಡಿದ್ದನು. ಆದರಿಂದ 'ಶಸ್ತ್ರಾಸ್ತ್ರಗಳಿಲ್ಲದ ಸ್ಥಿತಿಯಲ್ಲಿ ಚಂದುವಿನೊಡನೆ ಒಗಳ ಕಾದಿ, ಅಕ್ಕಪಕ್ಕದ ಜನರನ್ನು ಎಚ್ಚರಗೊಳಿಸುವದರ ಬದಲು ಇವನೊಡನೆ ಸುಮ್ಮನೆ ಮಠಕ್ಕೆ ಹೋಗಬೇಕು; ಅಂದರೆ ಅಲ್ಲಿ ತನಗೆ ಆ ಇನ್ನಿಬ್ಬರ ಸಹಾಯವಾದರೂ ದೊರೆಕೀತು, ಕದಾಚಿತ್ ಕಾವಡಿಯವನ ಕಾವಡಿಯೊಳಗೆ ಬಚ್ಚಿಟ್ಟಿದ್ದ ಯಾವುದೊಂದು' ಶಸ್ತ್ರವಾದರೂ ಪ್ರಸಂಗದಲ್ಲಿ ಕೈಗೆ ಬಿದ್ದೀತು' ಎಂದು ಜಂಬುವು ಯೋಚಿಸಿರಬಹುದು.

ಅವರಿಬ್ಬರೂ ಮಠದಲ್ಲಿ ಹೊಕ್ಕರು. ಚಂದುವು ಇಲೆಕ್ಟ್ರಿಕ್ ಸ್ವಿಚ್ ಒತ್ತಿ, ದೀಪ ಹಚ್ಚಿದನು; ಅಲ್ಲಿ ನೋಡುತ್ತಲೆ, ಗುರುಮಹಾರಾಜರೂ ಕಾವಡಿಯವನೂ ತಮ್ಮ ಎಲ್ಲ ಬಟ್ಟೆ ಬರೆ ಸಾಮಾನುಗಳ ಗಂಟು ಮೊಟ್ಟೆ ಕಟ್ಟಿಕೊಂಡು, ಓಡಿ ಹೋಗಲಿಕ್ಕೆ ಸಜ್ಜಾಗಿ ಕುಳಿತು, ಯಾರದೋ ದಾರಿ ಕಾಯುತ್ತಿರುವ ಹಾಗೆ ತೋರಿತು. ವಿದ್ಯುದ್ದೀಪವು ಆಕಸ್ಮಿಕವಾಗಿ ಹತ್ತಲು, ಅವರಿ

ಬ್ಬರೂ ಮೆಟ್ಟಿಬಿದ್ದರು; ಆದರೆ ಚಂದುವು ಜಂಬುವನ್ನು ಒಂದು ಕೈಯಿಂದ ಜಗ್ಗುತ್ತ ಇನ್ನೊಂದು ಕೈಯಲ್ಲಿ ಪಿಸ್ತೂಲು ಹಿಡಿದುಕೊಂಡು ಬರುತ್ತಿರುವದನ್ನು ಕಂಡ ಬಳಿಕಂತೂ ಅವರು ಗಾಬರಿಗೊಂಡೇಬಿಟ್ಟರು!

ಬೈರಾಗಿಯನ್ನು ಕಂಡು ಗರ್ಜಿಸಿ ಹಾಗು ಹುಲ್ಲು ತುಂಬಿಟ್ಟಿದ್ದ ಸತ್ತ ಪಕ್ಷಿಯ ಕಡೆಗೆ ಬೊಟ್ಟುದೋರಿ ಚಂದುವು:—"ಈ ಪಕ್ಷಿಯ ಹಿಂಸೆ ಮಾಡಿದ ಬಗ್ಗೆ ನನಗೆ ದೇವರು ಯಾವ ಶಿಕ್ಷೆವಿಧಿಸಿದನೋ ನಾನದನ್ನು ಸಹಿಸಿದೆನು; ಆದರೆ ಬೈರಾಗಿಮಹಾರಾಜರೇ, ಶಿಷ್ಯರುಗಳ ಶಿಕ್ಷೆಯು ಸರತಿ ಮಾತ್ರ ಇನ್ನೂ ಉಳಿದಿರುವಂತೆ ತೋರುತ್ತದೆ. ಮಹಾರಾಜಾ! ನಿನ್ನನ್ನು ನಾನು ಗುರುವಾಗಿ ಮಾಡಿ ಮನೆಗೆ ಕರೆತಂದೆನು; ಆದರೆ ನೀನು ಒಂದದ್ದರಲ್ಲಿ ನಿನ್ನ ಅಪರಾಧವಿರದೆ, ನನ್ನವೇ ಮೂರ್ಖತನವಿದ್ದಿತು ಮಠದಲ್ಲಿ ಬಂದಿರಹತ್ತಿದ ಬಳಿಕ ನೀನು ನನ್ನದೇನೂ ಪ್ರತ್ಯಕ್ಷವಾಗಿ ಯಾವ ಅಪರಾಧವನ್ನೂ ಮಾಡಿರುವದಿಲ್ಲ; ಆದರೆ ಇತ್ತ ನೋಡು, ನಿನ್ನ ಪಟ್ಟಶಿಷ್ಯನೆಂದು ಮೆರೆಯುವ ಈ ಜಂಬ್ಯಾನ ಕಡೆಗೆ! ಇವನು ಶಿಷ್ಯನೆಂಥವನು! ಬದ್ಮಾಷರ ಸಾಥಿದಾರನು! ನಿನಗೆ ಈತನು ಸಾಥಿದಾರ, ಇವನಿಗೆ ನೀನು ಸಾಥಿದಾರ! ಈ ದುಷ್ಟನು ಆ ಅಜ್ಞಬಿಂಬೆಯನ್ನು ತನ್ನ ಬಲೆಗೆ ಕೆಡಹಿ, ನಮ್ಮ ಮನೆಯ ಮಾನವನ್ನು ಕಳೆಯುವ ಕೆಲಸ ನಡೆಸಿರುವನೆಂಬ ಸಂಗತಿಯು ನಿನಗೆ ಗೊತ್ತಿತ್ತು. ಹೀಗಿದ್ದೂ, ನೀನು ಇವನನ್ನು ಪರಾವೃತ್ತಗೊಳಿಸದಿದ್ದ ಮೂಲಕ ಈ ಸ್ಥಿತಿಯು ಪ್ರಾಪ್ತವಾಯಿತು. ನಾನು ನಿದ್ದೆಹತ್ತದೆ ಎಚ್ಚತ್ತಿದ್ದ ಮೂಲಕವೇ ನನಗೆ ಅಲ್ಲಿಗೆ ಹೊತ್ತಿಗೆ ಸರಿಯಾಗಿ ಹೋಗಲಿಕ್ಕೆ ಆಯಿತು; ಆದರೆ ಇಂದು ನನಗೆ ನಿದ್ದೆಹತ್ತಿಬಿಟ್ಟಿದ್ದರೆ, ಈಗೇನಾಗುತ್ತಿತ್ತೆಂಬದರ ಕಲ್ಪನೆ ಮಾಡಲು ಶಕ್ಯವಿಲ್ಲ. ನಾನು ಇಷ್ಟು ದಿನ ಈ ಜಂಬೂನ ಮೇಲಿನ ಸಿಟ್ಟನ್ನು ನನ್ನ ಮನಸ್ಸಿನಲ್ಲೇ ತಡೆದಿರಿಸಿದ್ದೆನು; ಆದರೆ ಇಂದು ಈತನ ಈ ಅಧಮ ವರ್ತನವನ್ನು ಕಣ್ಣಿಂದ ನೋಡಿದ ಬಳಿಕ ನನ್ನಿಂದ ಆ ಸಿಟ್ಟು ತಡೆಯದಾಗುವದಿಲ್ಲ. ನಾನು ಇವನಿಗೆ ನಿನ್ನ ಸಮಕ್ಷದಲ್ಲಿ ದೇಹಾಂತ ಪ್ರಾಯಶ್ಚಿತ್ತ ಕೊಟ್ಟರೂ ಯೋಗ್ಯವೇ ಆದೀತು." ಎಂದೆಂದು ಚಂದುವು ಜಂಬೂನ ಮೇಲೆ ಪಿಸ್ತೂಲಿನ ಗುರಿಯಿಟ್ಟನು.

ಆಗ ಗುರುಮಹಾರಾಜರಾದರೂ ಕೂಗಿ:—"ಹಾ, ಹಾ! ಇದೇನು ವಿಪರೀತವನ್ನಾಚರಿಸುತ್ತೀ? ನೀನು ಅಹಿಂಸೆಯ ಶಪಥ ಮಾಡಿ ಅದಕ್ಕೆ ಜಾಮೀನೆಂದು ಕೊರಳಲ್ಲಿ ತುಳಸೀಮಣಿಗಳ ಮಾಲೆ ಧರಿಸಿರುವಿಯಲ್ಲವೇ? ಆ ಆಣೆಯನ್ನೂ ಆ ಮಾಲೆಯನ್ನೂ ಒಂದಿಷ್ಟು ಸ್ಮರಿಸು. ಒಂದು ಹಿಂಸೆಯ ಬಗ್ಗೆ ದೇವರು ನಿನ್ನನ್ನು ದಂಡಿಸಿದುದು ಸಾಕಾಗಲಿಲ್ಲವೆ? ಆದರೆ ಬಹಳವಾದರೆ

ಅದು ಪಕ್ಷಿಗಳ ಹಿಂಸೆಯಾಗಿತ್ತು; ಮತ್ತು ಈಗ ನೀನು ಮನುಷ್ಯವಧೆ ಮಾಡಲಿಕ್ಕೇ ಸಿದ್ಧನಾಗುವೆಯಲ್ಲ, ಇದಕ್ಕೇನೆನಬೇಕು?"

ಚಂದುವು ಆ ಬೈರಾಗಿಯ ಮೇಲೆ ಏರಿ ಹೋಗಿ, ... "ಮೋಸಗಾರ ಬೈರಾಗಿ! ನನ್ನಲ್ಲಿಯ ಶಿಷ್ಯತ್ವ ಬುದ್ಧಿಯು ನಷ್ಟವಾದದ್ದು ನಿನಗೆ ಪ್ರತ್ಯಕ್ಷ ಕಾಣುತ್ತಿದ್ದರೂ ನೀನು ನಿನ್ನ ಗುರುಬುದ್ಧಿಯನ್ನು ಬಿಟ್ಟು ಬಿಡಲು ಸಿದ್ಧನಿಲ್ಲವೆ? ಒಳ್ಳೇದು. ಏಕತರ್ಫಿಯ ಭಾವನೆಯಿಂದ ಗುರು-ಶಿಷ್ಯತ್ವಗಳು ಉಳಿಯುತ್ತಿರುವದಿಲ್ಲ. ನನಗೆ ಅಹಿಂಸೆಯ ಆಣೆಯ ನೆನಪು ಮಾಡಿಕೊಡುವ ಕಾಗೆಯೇ! ನಿನ್ನ ನಿಷೇಧನ ಶಬ್ದಗಳನ್ನು ನೀನಿನ್ನು ನಿನ್ನ ಬಾಯಲ್ಲೇ ಇರಿಸಿಕೋ. ಅವುಗಳನ್ನು ಹೊರಹೊಡಿಸಿದರೆ ಇನ್ನೇನೂ ಪ್ರಯೋಜನವಾಗಲಿಕ್ಕಿಲ್ಲ. ನನ್ನ ಮೂರ್ಖತನದ ಅಹಿಂಸೆಗೆ ಜಾಮೀನಾಗಿರುವ ಈ ಮಾಲೆಯನ್ನು ಇದೋ, ಈಗಲೇ ಹರಿಯೊಗೆಯುತ್ತೇನೆ ನೋಡು. ನಿಮ್ಮಂಥ ಕಾಲಸರ್ಪಗಳನ್ನು ಕಂಡೊಡನೆಯೇ ಅವುಗಳನ್ನು ಕಲ್ಲಿಂದಲ್ಲೇ ಜಜ್ಜಿ ಬಿಡುವುದೇ ಯೋಗ್ಯವು. ಅದರಲ್ಲಿ ಹಿಂಸೆಯೇತರದು? ಗುರುಮಹಾರಾಜ, ಈ ನಿಮ್ಮ ಮುಂಚಿನ ಶಿಷ್ಯನಿಗೂ ಇಂಥ ಕಪಟದ ಮಾತಾಡಲಿಕ್ಕೆ ಬರುದಿಲ್ಲೆಂದು ತಿಳಿಯಬೇಡಿರಿ. ನಾನು ನಿಮಗೆ ಹೇಳುತ್ತೇನೆ ಕೇಳಿಕೊಳ್ಳಿರಿ. ನಾನು ಅಹಿಂಸೆಯ ಆಣೆ ಮಾಡಿದಾಗ ಒಳದನಿಯಿಂದ ಮನದಲ್ಲಿ ಅಂದಿದ್ದೇನಂದರೆ, 'ಈ ಅಹಿಂಸೆಯ ಶಪಥವು ದೀನ ಹಾಗು ಬಲಹೀನ ನಿರಪರಾಧಿ ಪಶು ಪಕ್ಷಿಗಳ ಮಟ್ಟಿಗದೆ. ಇದು ದುಷ್ಟ ಮನುಷ್ಯರಿಗಾಗಿ ಇಲ್ಲ.' ಇನ್ನು ನಾನು ಈ ದುಷ್ಟನ ಪ್ರಾಣವನ್ನೇ ತಕ್ಕೊಂಡರೆ ನನಗದರ ಬಗ್ಗೆ ಯಾವ ಪರಿಣಾಮ ಭೋಗಿಸಬೇಕಾದೀತೋ, ಅದು ಇಂದಿಗೆ ಇಷ್ಟವಿಲ್ಲವೆಂದೇ ನಾನು ಇವನನ್ನು ಗಾಯಗೊಳಿಸಿ, ಈತನ ನೆತ್ತರವನ್ನು ಭೂಮಿಗ ಸಿಂಪಡಿಸಿದ ಹೊರತು ನನ್ನ ಸಿಟ್ಟು ಶಾಂತವಾಗಲಿಕ್ಕಿಲ್ಲ; ಅಲ್ಲದೆ ಪ್ರಾಣಿಯು ಪಂಚಪ್ರಾಣಗಳನ್ನು ನಾಶ ಮಾಡಿದರೇ ಅದು ಹಿಂಸೆಯಾಗುತ್ತದ; ಇಲ್ಲದಿದ್ದರೆ ಇಲ್ಲ, ಎಂಬ ಕಾಲುದಾರಿಯನ್ನೂ ನಾನು ತೆಗೆಯಬಲ್ಲೆನು" ಎಂದಂದು, ಆತನು ಚಂದೂನ ಕಾಲ ಮೇಲೆ ಪಿಸ್ತೂಲನ್ನು ಹಾರಿಸಿದನು. ಆ ಕೂಡಲೆ ಅದರ ಗುಂಡು ಪಾದದೊಳಗಿಂದ ಪಾರಾಗಿ ಹೋಗಿ ಇತ್ತ ದೂರಲ್ಲಿ ಬಿದ್ದಿತು. ಚಂಬೂನ ಕಾಲು ರಕ್ತದಿಂದ ಮುಳುಗಿತು. ಅವನು ಆ ವೇದನೆಯನ್ನು ಸಹಿಸಲಾರದೆ ನೆಲ್ಲಕ್ಕೆ ಬಿದ್ದನು. ಚಂದುವು ಹೀಗೆ ತಮ್ಮನ್ನು ಅವಮಾನಗೊಳಿಸಿ, ತನ್ನ ಕೈಯೊಳಗಿನ ಪಿಸ್ತೂಲಿನ ಕುದುರೆ ಹತ್ತಿಕ್ಕಿದ್ದನ್ನು ಕಂಡ ಕೂಡಲೆ ಗುರುಮಹಾರಾಜರು ತಮ್ಮ ಸಂಗಾತಿದಾರನಾದ ಕಾವಡಿಯವನನ್ನು

ಕುರಿತು:—“ಎಲೋ, ಇನ್ನೂ ಏನು ನೋಡುವೆ? ಆ ಕಾವಡಿಯೊಳಗಿನ ಶಸ್ತ್ರಗಳನ್ನು ಹೊರಗೆ ತೆಗೆ. ಈಗ ಜೀವದ ಮೇಲೆಯೇ ಬಂದಂತಾಗಿದೆ”

ಹೀಗೆ ಹೇಳುತ್ತಲೆ ಕಾವಡಿಯುವನು ಅವಸರದಿಂದ ಕಾವಡಿಯ ಮೇಲಿನ ಹೊದಿಕೆಯನ್ನು ತೆಗೆದು, ಗಿಂಡಿಗಳ ಮುಚ್ಚಳ ತೆರೆದನು. ಒಳಗಿನ ಶಸ್ತ್ರಗಳನ್ನು ಇನ್ನು ಹೊರಗೆ ತೆಗೆಯುತ್ತಾನೆಂಬದನ್ನು ಕಂಡು ಚಂದುವು ನಕ್ಕು:“ಗುರುಮಹಾರಾಜ, ನಿಮ್ಮಂತೆ ನನಗೂ ದೇವರು ಕೆಲ ಅಂತರ್ಜ್ಞಾನವಿತ್ತಿರುತ್ತಾನೆ. ಅದರ ಸಹಾಯದಿಂದ ಇಂದು ರಾತ್ರಿ ಅಡಿಗೆ ಮನೆಯೊಳಗೆ ನಿಮ್ಮ ಸುಗ್ರಾಸ ಭೋಜನ ನಡೆದಾಗ ನಾವು ನಿಮ್ಮ ಶಸ್ತ್ರಾಸ್ತ್ರಗಳನ್ನು ಮೊದಲೇ ಕೈಯಾಡಿಸಿರುತ್ತೇವೆ. ನಿಮ್ಮ ಪಿಸ್ತೂಲುಗಳೊಳಗಿನ ಗುಂಡುಗಳನ್ನು ತಕ್ಕೊಂಡು ನಾವು ಅವುಗಳ ಕೊಳವೆಗಳನ್ನು ಊದುಗೊಳವೆಗಳನ್ನಾಗಿ ಮಾಡಿರುತ್ತೇವೆ. ನಿಮ್ಮ ಜಂಬಿಯಾಗಳನ್ನು ಬೆಣ್ಣೆಕೊಯ್ಯಲಿಕ್ಕೂ ಬಾರದಾಗಿವೆ!”

ಕಾವಡಿಯುವನು ಅವುಗಳನ್ನು ತೆಗೆದು ನೋಡುತ್ತಾನೆ, ಪಿಸ್ತೂಲುಗಳಲ್ಲಿ ಒಂದೂ ಗುಂಡಿದ್ದಿಲ್ಲ; ಜಂಬಿಯಾಗಳೆಲ್ಲ ಮೊಂಡಾಗಿಬಿಟ್ಟಿದ್ದವು!

ಆದರೆ ಆಗ ಅದಕ್ಕೂ ಹೆಚ್ಚು ಪೃಚ್ಛಾಪೃಚ್ಛ ಮಾಡಲಿಕ್ಕೆ ಅವಕಾಶವೇ ದೊರೆಯಲಿಲ್ಲ; ಯಾಕಂದರೆ ಜಸ್ಸೀಧರನು ಈ ಮಧ್ಯದಲ್ಲಿ ಪೋಲೀಸ ಗೇಟಿಗೆ ಹೋಗಿ ಇಬ್ಬರು ಶಸ್ತ್ರಧಾರಿಗಳಾದ ಪೋಲೀಸರೊಡನೆ ಧಾವಿಸಿ ಬಂದವನೇ ನೆಟ್ಟಗೆ ಮಠದೊಳಗೇ ಬಂದು ನಿಂತನು; ಹಾಗು ಆ ಕೂಡಲೆ ಆತನು ಆ ಪೋಲೀಸರಿಗೆ ಆ ಇಬ್ಬರು ಬೈರಾಗಿಗಳನ್ನೂ, ಆ ಕಾವಡಿಯ ಯಾತ್ರಿಕನನ್ನೂ ಪ್ರತಿಬಂಧಿಸಿ ಅವರ ಕೈಕಾಲುಗಳಿಗೆ ಬೇಡಿ ಹಾಕಲು ಹೇಳಿದನು.

ಇಷ್ಟರೊಳಗೆ ಇತ್ತ ಮಠದಲ್ಲಾದ ಪಿಸ್ತೂಲಿನ ಸಪ್ಪಳ ಹಾಗು ಅಲ್ಲಿಯ ಗದ್ದಲ ಕೇಳಿ ನಂದಭುವನದೊಳಗಿನ ಜನರೆಲ್ಲ ಎಚ್ಚೆತ್ತರು. ಎಲ್ಲೆಲ್ಲೂ ವಿದ್ಯುದ್ದೀಪಗಳು ಝಗಝಗಿಸಹತ್ತಿದವು. ಸರ[illegible]ಂಗಾರಾಮರು ತಮ್ಮ ಶಿಪಾಯಿಯೊಡನೆ ತಮ್ಮ ಕೈಯೊಳಗಿನ ವಿದ್ಯುಚ್ಛಕ್ತಿನ ದೊಡ್ಡ ಟ[illegible]ನ್ನು ಬೆಳಗಿಸುತ್ತ ಮಠದ ಹತ್ತರ ಬಂದರು. ಕೂಡಲೆ ಅಲ್ಲಿಯ ಪ್ರಕಾರವೆಲ್ಲ ಅವರಿಗೆ ಕಂಡಿತು. ಅವರನ್ನು ಕಂಡಕೂಡಲೆ ಚಂದವು “[illegible]! [illegible] ಮಾ[illegible] [illegible] ಮಿತಿಯುರಿತು! ಮತ್ತು ಅದರೊಡನೆ ಇಂದಿನಿಂದ ನಮ್ಮ ಗುರು-ಶಿಷ್ಯತ್ವದ್ದೂ ಪರಿಸಮಾಪ್ತಿಹೊಂದಿ ಹೋಯಿತು!!”



## ಪುನರ್ಭೆಟ್ಟಿಯು ಯೋಗಾಯೋಗವು

ಬೈರಾಗಿಗಳು ನಂದಭವನದಿಂದ ಹೊರಟು ಹೋದ ಕೆಲ ದಿನಗಳ ಮೇಲೆ ವಿಲಾಯತಿಯಿಂದ ಸರಕಾರೀಛಾಪಿನ ಒಂದು ರೆಜಿಸ್ಟರ್ಡ ಲಕ್ಕೋಟೆಯು ಚಂದೂಲಾಲನ ಹೆಸರಿಗೆ ಬಂದಿತು. ಗುರುಮಹಾರಾಜರು ಹೊರಟು ಹೋದರು; ಬೇಟೆಯು ಮುಗಿಯಿತು; ಆದರಿಂದ ಈಗ ಚಂದೂನ ಹೆಚ್ಚು ಕಾಲವು ದೊಡ್ಡ ಪಡಸಾಲೆಯೊಳಗಿನ ಆ ಬಹುದೊಡ್ಡ ತೂಗುಮಣೆಯ ಮೇಲೆಯೇ ಕಳೆಯುತ್ತಿತ್ತು. ಆತನಿಗೀಗ ಆ ತೂಗುಮಣೆಯ ಮೇಲೆ ಕೂಡ್ರುವದು ರುಚಿಸಹತ್ತಿತ್ತು; ಹಾಗು ಅವನು 'ಪಪಾ!' ಎಂದು ಸರ ಗಂಗಾರಾಮರನ್ನು ಕುರಿತು ಕರೆದನು. ಅವರು ಬಂದ ಕೂಡಲೆ ಚಂದುವು:—"ಪಪಾ, ಇದನ್ನು ನೋಡಿದಿರಾ? ಅಂದು ಸ್ಟೇಟ ಸೆಕ್ರೆಟರಿಯ ಕಡೆಗೆ ಕಳಿಸುವ ರಾಜಿನಾಮೆಯನ್ನು ಪಾಕೀಟಿನಲ್ಲಿಟ್ಟು ಆ ಪಾಕೀಟು ನನ್ನ ಟಪಾಲಿನಲ್ಲಿ ಚೆಲ್ಲುವಸಲುವಾಗಿ ನಾನು ನಿಮ್ಮ ಕಡೆಗೆ ಕೊಟ್ಟಿದ್ದೆನಷ್ಟೆ. ನೀವು ಟಪಾಲಿಗೆ ಹಾಕಿದ್ದಿರಷ್ಟೇ?"

ಸರ ಗಂಗಾರಾಮರು ಚಂದೂನ ಈ ಪ್ರಶ್ನೆಗೆ ಉತ್ತರ ಕೊಡದೆ, ಆತನ ಕೈಯೊಳಗಿನ ಆ ರೆಜಿಸ್ಟರ್ಡ ಕಾಗದವನ್ನು ಎರಡೆರಡು ಸಾರೆ ಓದಿ ನೋಡಿದರು. ಆಗ ಅವರಿಗೆ ಮನಸ್ಸಿನಲ್ಲಿ ಎಷ್ಟು ಆನಂದವಾಯಿತೆಂಬದನ್ನು ಹೇಳಲಾಗದು. ಆ ಆನಂದದ ಭರದಲ್ಲಿ ಅವರು ಮಾಸಾಹೇಬರನ್ನು ತಾವೇ ಹೆಸರುಗೊಂಡು ಕೂಗಿ ಕರೆದು:—"ಚಂದುವಿಗೆ ನೌಕರಿಹತ್ತಿತೆಂದರೆ ನೀವು ಪ್ರಾರಂಭದಲ್ಲಿ ಈತನೊಡನೆ ಹೋಗುವುದನ್ನು ನಿಶ್ಚಯಿಸಿರುವಿರಲ್ಲವೇ? ಹಾಗಾದರೆ ಸಿದ್ಧತೆಮಾಡಿರಿ. ಇದು ನೋಡಿರಿ, ಚಂದೂನ ನೌಕರಿಯ ಹುಕುಮು!" ಎಂದು ಹೇಳಿದರು.

"ಶಾಬಾಸ! ಈತನು ತನ್ನ ಹೆಂಡತಿಯೊಡನೆಯೇ ಹೋಗುವದಾದರೆ, ಮೊದಲನೇ ಸಲದ ಸಂಸಾರಹೂಡಿಕೊಡಲಿಕ್ಕೆಂದು ನಾನು ಹೋಗುವವಳು. ಅದಿರಲಿ. ನೌಕರಿಯ ಹುಕುಮೇ? ಅದೆಂತಾಯಿ ತಪ್ಪಾ! ಚಂದುವು ಅಂದು ತನ್ನ ಐ. ಸಿ. ಎಸ್. ನೌಕರಿಗೆ ರಾಜಿನಾಮೆ ಕಳಿಸಿರಲಿಲ್ಲವೆ?"

"ಹೌದು, ಕಳಿಸಿದ್ದನು; ಆದರೆ ಆ ರಾಜಿನಾಮೆಯೊಳಗಿನ ಕಾರಣವು ಸ್ಟೇಟ ಸೆಕ್ರೆಟರಿಗೆ ಸಮ್ಮತವಾಗಿರಲಿಕ್ಕಿಲ್ಲ, ಆದರಿಂದಲೇ ಅವನು ಅದನ್ನು ಮನ್ನಿಸಿರಲಿಕ್ಕಿಲ್ಲ." ಸರ ಸಾಹೇಬರು ಒಳ್ಳೇ ಆಢ್ಯತೆಯಿಂದ ಹೇಳಿದರು.

"ಆದರೆ ಪಪಾ! ನನ್ನ ಕಾರಣವೆಂದು ನಾನು ಏನನ್ನೂ ತಿಳಿಸಿರಲಿಲ್ಲವಲ್ಲ ಆ ರಾಜಿನಾಮೆಯಲ್ಲಿ! ಅಂದಬಳಿಕ ಅದು ಅವರಿಗೆ ಮಾನ್ಯವಾಗಿರಲಿಕ್ಕಿಲ್ಲವೆಂದು ಹೇಗೆ ತಿಳಿಯಬೇಕು?" ಚಂದುವು ನಕ್ಕು ಕೇಳದನು.

“ಅದೂ ಸರಿಯೇ. ನಿಷ್ಕಾರಣ ಅಂದರೆ ಕಾರಣವನ್ನು ತೋರಿಸದೆ ಕಳಿಸಿದ ರಾಜಿನಾಮೆಯನ್ನು ಸ್ಟೇಟ ಸೆಕ್ರೆಟರಿಯು ಏಕೆಂದು ಮನ್ನಿಸುವನು? ತರುಣ ಆಯ್. ಸಿ. ಎಸ್ ಉಮೇದವಾರನಿಗಿಂತ ಸ್ಟೇಟ ಸೆಕ್ರೆಟರಿಯು ಹೆಚ್ಚು ಪ್ರೌಢಬುದ್ಧಿವಂತನೂ ನಾಲ್ಕು ಮಳೆಗಾಲಗಳನ್ನು ಹೆಚ್ಚು ಕಂಡಂಥವನೂ ಇರತಕ್ಕವನೇ. ಈ ಉಮೇದವಾರನಿಗಿಂತ ಸ್ಟೇ. ಸೆ. ಗೇ ಈತನ ಹಿತಾಹಿತಗಳು ಹೆಚ್ಚು ತಿಳಿಯುತ್ತಿರಬೇಕು. ಅದಿರಲಿ. ನೀನು ನೌಕರಿಗೆ ಹಾಜರಾಗಲಿಕ್ಕೆಂದು ಯಾವಾಗ ಹೊರಡುವವನು? ಮೊದಲು ನಿನಗೆ ಲ್ಯಾಸಬೋರ್ನ ಸಾಹೇಬನ ಕೈಕೆಳಗೇ ಕೆಲಸ ಮಾಡಬೇಕಾಯಿತೆಂಬದೊಂದು ವಿಹಿತವೇ ಆಯಿತು. ಯಾಕಂದರೆ ಲ್ಯಾಸಬೋರ್ನ ಸಾಹೇಬನು ನನ್ನ ಪರಮ ಸ್ನೇಹಿತನು. ನೀನು ಇನ್ನೂ ಇಲ್ಲಿರುವಾಗಲೇ ಆತನನ್ನೊಮ್ಮೆ ಖಾಸಗೀ ಔತಣಕ್ಕೆಂದು ಇಲ್ಲಿಗೆ ಬರಮಾಡಿಕೊಳ್ಳುವೆನೆಂದರಾಯಿತು.”

ಅದಕ್ಕೆ ಚಂದುವು “ಒಳ್ಳೇದು. ಆ ಮಾತಿನ ಬಗ್ಗೆ ಬೇಗನೆ ಯೋಚಿಸುತ್ತೇನೆ.” ಎಂದಿಷ್ಟೇ ಉತ್ತರಕೊಟ್ಟನು.

ಈ ಉತ್ತರವು ಮಾಸಾಹೇಬರಿಗೆ ಒಂದಿಷ್ಟು ಸಂದಿಗ್ಧವಾಗಿಯೇ ತೋರಿತು. ಆದರಿಂದ ಅವರು ಪ್ರೀತಿಯಿಂದ ಮಗನ ಕೈಹಿಡಿದು, ಅವನೊಡನೆ ಮಾತಾಡಲಿಕ್ಕೆಂದು ಅವನನ್ನು ತಮ್ಮ ಕೋಣೆಗೆ ಕರೆದೊಯ್ದರು. ಅವರಿಬ್ಬರೂ ಅಲ್ಲಿ ಖುರ್ಚಿಗಳ ಮೇಲೆ ಎದುರುಬದುರಾಗಿ ಕುಳಿತ ಬಳಿಕ ಮಾಸಾಹೇಬರು: “ಚಂದೂ, ಆದದ್ದಾಗಿಹೋಯಿತು. ಆ ಬಗ್ಗೆ ಸುಮ್ಮನೆ ಕೆಡಕೆನಿಸಿಕೊಳ್ಳಬೇಡ. ಆ ಆಪತ್ತಿಯೊದಗಿದ್ದು ನಿನ್ನೊಬ್ಬನ ಮೇಲಲ್ಲ; ನಮ್ಮೆಲ್ಲರ ಮೇಲೆಯೂ ಬಂದಿತ್ತು; ಆದರೆ ದೇವರ ದಯೆಯಿಂದ ಅದೆಲ್ಲವೂ ನಿವಾರಣವಾಯಿತು. ಮೋಸಗೊಂಡಿದ್ದರೆ, ನೀನೊಬ್ಬನೇ! ನೀನು ಬೇರೆ ಯಾರನ್ನೂ ಮೋಸಗೊಳಿಸಿರುವದಿಲ್ಲ; ಆದರೆ ಮೋಸ ಹೋಗುವದರಲ್ಲಿಯೂ ಭೇದವಿರುತ್ತದೆ; ಮತ್ತು ನೀನು ಮೋಸಗೊಂಡದ್ದರ ಕಾರಣವು ನಿನಗೆ ಲೋಕದ ಅನುಭವದ ಕೊರತೆಯೇ ಮುಖ್ಯವಾಗಿದೆ. ಆದರೆ ನಿನ್ನಂತಹ ತರುಣ ಹುಡುಗರು ಈ ಕಾಲದಲ್ಲಿ ಹೀಗೆ ತಪ್ಪಿಯಾದರೂ ದೇವರ ಮೇಲೆ ನಿಷ್ಠೆಯಿಡುವವರು ಎಷ್ಟು ಜನರು ದೊರೆಯುವರು? ಆ ದೇವರು ನಿನಗೆ ಇನ್ನೊಂದು ಸಂಧಿಯನ್ನು ನಿನ್ನ ತಂದೆ-ತಾಯಿಗಳನ್ನು ಸಂತೋಷಪಡಿಸುವದಕ್ಕಾಗಿ ಕೊಟ್ಟಿರುತ್ತಾನೆ. ನೀನು ಅದನ್ನು ಆ ದೇವರನ್ನು ಸ್ಮರಿಸಿಯೇ ಸಾಧಿಸಿಕೋ; ಮತ್ತು ಮನಸ್ಸಿನಲ್ಲಿ ಏನೂ ಸಂದೇಹವಿಟ್ಟುಕೊಳ್ಳದೆ, ನಿರ್ಮಲ ಮನಸ್ಸಿನಿಂದಿನ್ನು ಮುಂದಿನ ಮಾರ್ಗವನ್ನು ಹಿಡಿ.”

ಚಂದು: "ಮಾಸಾಹೇಬ, ನನ್ನಿಂದ ಯಾವ ತಪ್ಪುಗಳಾದವು, ನನ್ನ ಕರ್ತವ್ಯವೇನು ಎಂಬುದು ನನಗೆ ತಿಳಿಯುವದಿಲ್ಲವೆ? ಆದರೆ ಇನ್ನು ಮುಂದೆ ಪ್ರತಿಯೊಂದು ಹೆಜ್ಜೆ ಇರಿಸುವಾಗ, ನಿಮ್ಮನ್ನು ಕೇಳದೆ ಇಡಲಿಕ್ಕಿಲ್ಲೆಂಬ ವಚನ ವನ್ನೇ ನಿಮಗೀಗ ಕೊಡುತ್ತೇನೆ; ಅಂದರಾಯಿತಲ್ಲವೆ?"

ಆ ಉತ್ತರದಿಂದ ಮಾಸಾಹೇಬರಿಗೆ ಅತ್ಯಂತ ಆನಂದವಾಗಲು, ಅವರು ಚಂದೂನ ಗದ್ದವನ್ನು ಹಿಡಿದು, ಪ್ರೇಮದಿಂದ ಅಲ್ಲಾಡಿಸದಿರಲಿಲ್ಲ.

ಚಂದುವು ಅಲ್ಲಿಂದ ಹೊರಟು ಹೋದ ಬಳಿಕ ಸರ ಗಂಗಾರಾಮರು ಬಂದು ಮಾಸಾಹೇಬರ ಕೋಣೆಯನ್ನು ಪ್ರವೇಶಿಸಿದರು; ಮತ್ತು ನಗೆಮೊಗದಿಂದ ಹೆಂಡತಿಯ ಮುಖದ ಕಡೆಗೆ ನೋಡುತ್ತ:'ಏನು? ಚಂದುವೇನೆಂದನು?'

"ಅವನೇನನ್ನುವನು?—ಹೌದ್ಹೌದು ಅವನು ಈಗ ಅನ್ನುತ್ತಿದ್ದನೇನಂದರೆ—" ಮಾಸಾಹೇಬರು ಗಂಡನ ಚೆಷ್ಟೆ ಮಾಡುವದಕ್ಕೆಂದು:—ಆತನು ಹೇಳಿದನೇನಂದರೆ:-"ನಾನು ಆ ಬೈರಾಗಿಗಳನ್ನು ಮನೆಯಲ್ಲಿ ತಂದಿರಿಸಿ ಅವರ ಭಜನೆಗೆ ತೊಡಗುವಾಗ ನನ್ನ ಬುದ್ಧಿಯೊಂದು ಮುಸಣಿಸಿ ಬಿಟ್ಟಿತ್ತು; ಆದರೆ ಹಿರಿಯರಾದರೂ ತಮ್ಮ ತಲೆಯನ್ನು ಸ್ಥಿರವಾಗಿರಿಸಬೇಕಿದ್ದಿತೋ-ಬೇಡವೋ? ಅವರೂ ನನ್ನ ಗುರುಭಜನೆಯಲ್ಲಿ ಹಿಮ್ಮೇಳವಾದರು! ಅಂದ ಬಳಿಕ ನಾನು ತಪ್ಪುತ್ತಿರುವೆನೆಂಬದು ನನಗೆ ಹೇಗೆ ತಿಳಿಯಬೇಕು?" ಎಂದು ಹೇಳಿ; ನಾನು ಆ ಗೊಂದಲದಲ್ಲಿ ಬೀಳದೆ ಸುಮ್ಮನಿರಲಿಲ್ಲವೆ? ಸುದೈವದಿಂದ ಬನ್ಸೀಧರನು ಬಂದನು ಆತನು ಆ ಗೊಂಡಲವನ್ನೆಲ್ಲ ನಿವಾರಿಸಿದುದು ವಿಹಿತವಾಯಿತು ಇಲ್ಲದಿದ್ದರೆ ಈ ಗೊಂದಲವು ಯಾವ ಮಜಲಿಗೆ ಮುಟ್ಟುತ್ತಿತ್ತೆಂಬದನ್ನು ಆದಾರು ಹೇಳಬೇಕು?"

"ಮಾಸಾಹೇಬ, ನೀವನ್ನುವುದು ನಿಜವಿದೆ. ಚಂದೂನ ತಂತ್ರದಂತೆಯೇ ಮೊದಲು ನಡೆಯುವದು ವಿಹಿತವೆಂದು ನಾನು ಯೋಜಿಸಿದ್ದೆನು. ನಮ್ಮ ಬೇಕು ಸಾಧಿಸಿಕೊಳ್ಳಬೇಕಾದರೆ ಇನ್ನೊಬ್ಬರ ಒಲವಿನಂತೆಯೇ ಒಂದಿಷ್ಟು ನಡೆಯುವುದು ಎಲ್ಲರಿಗೂ ಶ್ರೇಯಸ್ಕರವು; ಆದರೆ ಮಾಸಾಹೇಬ, ನಾನೊಂದು ಅಪೂರ್ವ ಕೆಲಸ ಮಾಡಿದೆನಲ್ಲ, ಅದೆಲ್ಲಿ ಗೊತ್ತಿದೆ ನಿಮಗೆ ಅಥವಾ ಚಂದುವಿಗೆ?"

"ಅದಾವುದು?"

"ಇತ್ತ ಕಿವಿಮಾಡಿರಿ; ಅಂದರೆ ಹೇಳುವೆನು."

"ಇಶ್ಶ!" ಎಂದೆಂದು ಮಾಸಾಹೇಬರು ಕಿವಿ ಹೊರಳಿಸಿದ ಬಳಿಕ ಸರ ಸಾಹೇಬರು:—' ಅವನನ್ನು ಅಸಿಸ್ಟಂಟ ಕಲೆಕ್ಟರನೆಂದು ನೇಮಿಸಿದ ಹುಕುಮು

ಇಂದು ಬಂದಿದೆಯಲ್ಲ, ಅದು ಚಂದೂನ ರಾಜಿನಾಮೆಯು ಸ್ಟೇಟ ಸೆಕ್ರೇಟರಿಯ ಕೈಗೆ ಹೋಗಿ ತಲುಪಿದ್ದರೆ ಬರುತ್ತಿತ್ತೇ ಮಾಸಾಹೇಬ?"

"ಅದೇಕಿಲ್ಲ? ತನ್ನ ರಾಜೀನಾಮೆಯು ಟಪಾಲಿಗೆ ಹಾಕಲ್ಪಟ್ಟಿತೆಂದೇ ಚಂದುವಂತೂ ತಿಳಿಯುತ್ತಾನೆ. ಅಂದಬಳಿಕ ನಿಜಸಂಗತಿಯೇನು?"

'ಅದೇ ಮೋಜಿನದಾಗಿದೆ! ಆ ರಾಜೀನಾಮೆಯನ್ನು ಟಪಾಲಿಗೆ ಹಾಕಲಿಕ್ಕೆಂದು ನಾನು ಅವನಿಂದ ಇಸಕೊಂಡೆನು; ಆದರೆ ಆದರೆ—"

"ಅಂದರೆ ನೀವದನ್ನು ಟಪಾಲಿಗೆ ಹಾಕಲೇ ಇಲ್ಲವೇನು?"

ಸರ ಗಂಗಾರಾಮರು:—"ಮಾಸಾಹೇಬ, 'ಕಾಗೆಗಿಂತಲೂ ಕಾಗೆಯ ಮರಿಯು ಬುದ್ಧಿಶಾಲಿ!' ಎಂಬದೊಂದು ನಾಣ್ಣುಡಿಯು ರೂಢಿಯಲ್ಲಿದೆ. ಆದರೆ ನಾನಂತೂ ಈ ಪ್ರಕರಣದಲ್ಲಿ ಆ ನಾಣ್ಣುಡಿಯನ್ನು ಸುಳ್ಳುಮಾಡಿದೆನು. ಇದು ನೋಡಿರಿ, ಚಂದೂನ ರಾಜಿನಾಮೆಯ ಲಕ್ಕೋಟಿಯನ್ನು! ಇದನ್ನು ಟಪಾಲಿಗೆ ಹಾಕಲಿಕ್ಕೆಂದು ಅವನಿಂದ ಇಸಕೊಂಡೆನು; ಆದರೆ ನಾನು ಆಗ ಟಪಾಲಿಗೆ ಹಾಕದಿದ್ದ ಲಕ್ಕೋಟಿಯೇ ಇದು! ಇದುವರೆಗೆ ನಾನು ಇದಕ್ಕೆ ನನ್ನ ತಿಜೋರಿಯೊಳಗಿನ ಸ್ಥಳವಿತ್ತಿದ್ದೆನು; ಮತ್ತು ಇಂದಿಗೆ ಇದರ ಅವತಾರ ತೀರಿದ್ದರಿಂದ ಇಗೋ, ನಾನಿದನ್ನು ನಾಶಪಡಿಸುತ್ತೇನೆ." ಎಂದಂದು, ಅವರು ಆ ಕಾಗದಗಳನ್ನು ತೀರ ಸಣ್ಣ ಚೂರು ಮಾಡಿ, ಸಮೀಪದಲ್ಲಿಯ ಅಗ್ಗಿಷ್ಟಿಗೆಯಲ್ಲಿ ಚಲ್ಲಿಕೊಟ್ಟರು.

ಮಾಸಾಹೇಬ:—"ನಿಮ್ಮ ಮೋಸಕ್ಕೆ ದೇವರಾದರೂ ಹೇಗೆ ಹೆಸರಿಟ್ಟಾನು? ಪ್ರೇಮವು ಮನುಷ್ಯನ ಬುದ್ಧಿಯನ್ನು ನಷ್ಟಗೊಳಿಸುತ್ತದೆನ್ನುತ್ತಾರೆ; ಆದರೆ ಅದೇ ಪ್ರೇಮವೇ ಎಷ್ಟೋ ಮಂದಿಯ ಬುದ್ಧಿಯನ್ನು ತೀಕ್ಷ್ಣಗೊಳಿಸುತ್ತದೆಂಬದು ಸುಳ್ಳಲ್ಲ?"

  

ವೈದ್ಯಕೀಯ ಶಾಸ್ತ್ರದಲ್ಲಿ ರೋಗವು ಪ್ರತಿಕ್ಷೋಭನದಿಂದ ಗುಣವಾಗುತ್ತದೆಂದು ಹೇಳಿದ ಉದಾಹರಣೆಗಾಗಿ ಅಫೂವ ವಿಷಕ್ಕೆ ಧತ್ತೂರಿ ಕೊಟ್ಟರೆ ಆ ವಿಷವಿಳಿಯುತ್ತದೆ. ಜ್ವರದ್ದಾದರೂ ಒಂದು ಬಗೆಯ ವಿಷವೇ ಇರುತ್ತದೆ. ಅದಕ್ಕೆ ಪ್ರತಿಕ್ಷೋಭನ ವಿಷವೆಂದು ಬಚನಾಗವನ್ನು ಪಯೋಗಿಸುವರು. ಹೀಗೆ ಕ್ಷೋಭಕ್ಕೆ ಪ್ರತಿಕ್ಷೋಭ, ದಾಹಕ್ಕೆ ಪ್ರತಿದಾಹವನ್ನುಂಟು ಮಾಡುತ್ತಾವೆ; ಅಥವಾ ಬಾಹ್ಯ ಉಪಾಯಗಳನ್ನು ವೈದ್ಯನು ಮಾಡದಿದ್ದರೂ ಯಾವ ಕಾರಣದಿಂದ ಶರೀರದಲ್ಲಿ ರೋಗ ಉಂಟಾಗುವದೋ, ಅದಕ್ಕೆ ವಿರುದ್ಧವಾಗಿರುವ ಕಾರಣಗಳು ತಮ್ಮಷ್ಟಕ್ಕೆ ತಾವೇ ಶರೀರದಲ್ಲಿ ಉಂಟಾಗುವುದು ಶಕ್ಯವಿದೆ. ಋತು ಬದಲಾ

ಗುವದೊಂದು ಪ್ರತಿಕ್ಷೋಭನವೇ ಇದೆ. ಹೆಚ್ಚಾಗಿ ಸೆರೆ ಕುಡಿದು ಮೂರ್ಛೆ ಬಂದವನಿಗೆ ದುಃಖದ ವಾರ್ತೆ ತಿಳಿದರೆ ಆ ಮದ್ಯನಿಶೆಯು ಒಮ್ಮೆಲೆ ಇಳಿಯು ತ್ತದೆ. ಇಂಥವೇ ಪ್ರತಿಕ್ಷೋಭನದ ಹಲವು ಉದಾಹರಣೆಗಳಿವೆ.

ಗುರುಮಹಾರಾಜರ ನೀರಸ ಸಂಗತಿಯು ಬೇಸರಿಕೆ, ಹಾಸ್ಯಾಸ್ಪದವಾದ ಅವರ ಅಜ್ಞಾನ, ಅವರಲ್ಲಿದೆ ಎಂದು ತಿಳಿದಿದ್ದ ದೈವೀ ಅಂತರ್ಜ್ಞಾನದ ಅಭಾವ ಗಳಲ್ಲದೆ ಇದೀಗಿನ ಅವರ ನೈತಿಕ ಅಧಮತನದ ಪುರಾವೆ ಹಾಗು ಅವರ ಪ್ರೋತ್ಸಾಹನದಿಂದ ಜಂಬುವು ಬೀಬೆಯ ಮೇಲೆ ಮಾಡಿದ್ದ ಅತಿಪ್ರಸಂಗ ಇವೆಲ್ಲ ಪ್ರತಿಕ್ಷೋಭನಗಳು ಲಭಿಸಿದ ಬಳಿಕ ಚಂದೂನ ಗುರುಭಕ್ತಿಯೂ ಶ್ರದ್ಧೆಯೂ ಕಳಚಿಬಿದ್ದಿದ್ದರಲ್ಲೇನಾಶ್ಚರ್ಯ? ಅವು ಕಳಚಿ ಬೀಳದಿದ್ದರೇ ಆಶ್ಚರ್ಯವಾಗುತ್ತಿತ್ತು.

ಮನುಷ್ಯಮಾತ್ರರು ದೈವೀಸಾಮರ್ಥ್ಯ ಇಲ್ಲವೆ ಗುಣ ಇವುಗಳನ್ನು ಮಾನವೀ ಗುಣಗಳೊಡನೆ ಹೋಲಿಸಿ ನೋಡುತ್ತಿರುವುದೇನೂ ಅವರ ತಪ್ಪಲ್ಲ. ಮನುಷ್ಯನು ದೇವರನ್ನು ತನ್ನಂತೆಯೇ ಕಾಣುತ್ತಾನೆ; ಮತ್ತು ನೀತಿ, ಸೌಂದರ್ಯ, ಕಲ್ಯಾಣ, ಮಂಗಳ ಇವೆಲ್ಲ ಶ್ರೇಷ್ಠ ಸಂಗತಿಗಳಲ್ಲಿ ಆತನು ಅಖಂಡ ನಿಧಿಯಾಗಿರುತ್ತಾನೆ, ಎಂದು ಮನುಷ್ಯನು ತಿಳಿಯುತ್ತಾನೆ ತನಗೆ ಎಷ್ಟು ಒಳ್ಳೇ ಕಲ್ಪನೆ ಮಾಡಬರುತ್ತದೆಯೋ, ಅಷ್ಟು ಮನುಷ್ಯನು ದೇವರಲ್ಲಿ ಮಾಡುತ್ತಿರುವನಲ್ಲವೆ? ಆದರೆ ಆ ಶ್ರೇಷ್ಠ ಸಾವಿನಿಂದ ಅಳೆಯುತ್ತಿರು ವಾಗ ಯಾವನ ಸ್ವಭಾವಗುಣದಲ್ಲಾದರೂ ಒಂದಿಷ್ಟು ಹೀನತ್ವವು ಕಂಡು ಬಂದರೆ, ಆತನಲ್ಲಿಯ ದೈವೀ ಕಲ್ಪನೆಯು ಅದೆಂತು ಸ್ಥಿರವುಳಿದೀತು? ಅನೀತಿ ಮಂತ ಹಾಗು ದುಷ್ಟನಾದಂಥ ಗುರುವಿನ ಸಂಬಂಧದಲ್ಲಿ ಭಕ್ತಿಯಿರಿಸುವ ತಜ್ಞ ಶಿಷ್ಯನು ಈ ಪ್ರಮಾಣದಿಂದ ಸ್ವಂತವೇ ಅಷ್ಟು ಅನೀತಿಮಂತ-ದುಷ್ಟ ನಿರಲಿಕ್ಕೆ ಬೇಕು; ಆದರೆ ಚಂದುವು ಭೋಳೇ ಸ್ವಭಾವದವನಾಗಿದ್ದರೂ ಆತನು ಅನೀತಿಮಂತ ಅಥವಾ ದುಷ್ಟನು ಖಂಡಿತವಾಗಿಯೂ ಆಗಿರಲಿಲ್ಲ; ಅದರಿಂದ ಅಂಥ ಅಧಮ ಗುರುವಿನ ಮೇಲಿನ ಆತನ ಶ್ರದ್ಧೆಯು ಕಡಿಮೆಯಾಗುವುದು ಸ್ವಾಭಾವಿಕವೇ ಸರಿ.

ಆದರೆ ಶ್ರದ್ಧೆಯು ಸಲಟಿ ಹೊಡೆದದ್ದರಿಂದ ಮನುಷ್ಯನು ಪುನಃ ಬುದ್ಧಿ ಪ್ರಮಾಣದ ದಾರಿಗೆ ಬರಲಿಕ್ಕೆ ಮನಸ್ಸಿನಿಂದ ಸಿದ್ಧನಾದರೂ, ವಿರುದ್ಧವಾಗಿ ನಡೆಯುವಾಗ ಆತನಿಗೆ ತುಸ ಲಜ್ಜೆಯೇ ಎನಿಸುವದು. ಪ್ರಾಂಜಲತನದಿಂದ ತನ್ನ ತಪ್ಪನ್ನೊಪ್ಪಿಕೊಳ್ಳುವುದು ಆತನಿಂದಾಗುವದಿಲ್ಲ; ಅಂತೆಯೇ ಮುಂಚಿ ಶ್ರದೆಯ ಮಾರ್ಗ ಹಿಡಿಯಲಿಕ್ಕೆ ಯಾರಾದರೂ ಹೇಗೆ ನೆವವಾಗುವರೋ,

ಹಾಗೆಯೇ ಆ ಮಾರ್ಗದಿಂದ ಹಿಂದಿರುಗಿ ಸಾರಾಸಾರದ ಯೋಗ್ಯ ಮಾರ್ಗವನ್ನು ಹಿಡಿಯುವದಕ್ಕೂ ಯಾರಾದರೂ ನೆವಮಾತ್ರವಾದರೆ ಅದು ಮನುಷ್ಯನಿಗೆ ಬೇಕೇ ಆಗಿರುತ್ತದೆ. ಮುಂಚೆ ಅಡ್ಡ ದಾರಿ ಹಿಡಿಯಲಿಕ್ಕೆ ಆ ಬೈರಾಗಿಯ "ಅದ್ಭುತ"ವು ಕಾರಣವಾಗಿದ್ದಂತೆ ಈಗ ಸರಳ ಮಾರ್ಗ ಹಿಡಿಯಲಿಕ್ಕೆ ಚಂದೂನ ತಂದೆ-ತಾಯಿಗಳ ಬಹು ಇಷ್ಟವಾದ, ಸ್ವಾಭಾವಿಕವಾದ ಹಾಗು ಅನುಕೂಲವಾದ ಕಾರಣವಿದ್ದಿತು; ಮತ್ತು ಆ ಕಾರಣವು ಯಾವಾಗಲಾದರೂ ಸಿದ್ಧವೇ ಇತ್ತು. ಅದರಿಂದ ಹಿಂದೆ ಹೆಜ್ಜೆ ಇಕ್ಕುತ್ತ ನಡೆಯುವಾಗ ಚಂದುವು ತಂದೆ-ತಾಯಿಗಳ ಭಿಡೆ-ಮುರುವತ್ತಿಗೆ ಬಲಿಬಿದ್ದ ನೆವ ಮಾಡಿದನು. ಬ್ರಹ್ಮಚರ್ಯದ ಆಣೆ ಹಾಗು ಆಯ್. ಸಿ. ಎಸ್ಸಿನ ರಾಜೀನಾಮೆ ಇವೆರಡು ಗುದುಕಲಗಳೊಳಗಿಂದ ಚಂದುವು ಹೊರಹೊರಡಬೇಕಾಗಿದ್ದಿತು. ಅವುಗಳಲ್ಲಿಯ ರಾಜಿನಾಮೆಯನ್ನು ಟಪಾಲಿಗೆ ಹಾಕದೆ ಸರ ಗಂಗಾರಾಮರು ಒಂದು ಗುದುಕಲವನ್ನು ತಪ್ಪಿಸಿದ್ದರು ಮತ್ತು ಬ್ರಹ್ಮಚರ್ಯದ ಶಫಥ ಮುರಿಯುವ ಬಾಬಿನಲ್ಲಿ ಆತನು ತನ್ನ ತಾಯಿಯ ಮೇಲೆ ಉಪಕಾರ ಮಾಡಲಿಕ್ಕೆ ಮನಸ್ಸಿನಿಂದ ಸಿದ್ಧನಾದನು. ಮಗನ ಹಿತದ್ದೇ. ಹಾಗು ಅದಾದರೂ ಸ್ವಾರ್ಥ ತ್ಯಾಗಪೂರ್ವಕವಾದಂತಹದನ್ನು ತಂದೆ-ತಾಯಿಗಳು ಮಾಡಿದರೂ ಅವರ ಉಪಕಾರವು ತಂದೆತಾಯಿಗಳ ಮೇಲೆಯೇ ಎಂಬುದೊಂದು ಈ ಲೋಕದ ರೀತಿಯೇ ಆಗಿಬಿಟ್ಟಿದೆ! ಆದರೆ ಈ ರೀತಿಯನ್ನು ಮನ್ನಿಸದಂತಹ ಹಾಗು ತಂದೆ-ತಾಯಿಗಳನ್ನು ನೊರಜಿಗಿಂತಲೂ ತುಚ್ಛರೆಂದೆಣಿಸಿ ಅವರಿಗೆ ಅಪ್ರಿಯವಾದುದನ್ನೇ ಮಾಡುವಂತಹ ಕುಪುತ್ರರೇನು ಜಗತ್ತಿನಲ್ಲಿ ಸ್ವಲ್ಪ ಜನರಿರುವರೇ? ತಮ್ಮ ತಂದೆ-ತಾಯಿಗಳ ಮಾತು ಕೇಳಿ, ಅವರಿಚ್ಛೆಯಂತೆ ನಡೆಯುವ 'ಉಪಕಾರ'ಗಳನ್ನು ಅವರ ಮೇಲೆ ಮಾಡಲಿಕ್ಕೆ ಚಂದುವು ಸಿದ್ಧನಾದುದೇನು ಕಡಿಮೆಯಾಯಿತೇ? ಇಷ್ಟಕ್ಕಾಗಿ ಆತನ ಗಣನೆಯು ಸುಪುತ್ರರಲ್ಲೇ ಆಗುವದು! ಇರಲಿ.

ಚಂದುವು ನೌಕರಿಗೆ ಬೇಗನೆ ಹಾಜರಾಗತಕ್ಕವನಿದ್ದನು. ಆ ಸಂಗತಿಯು ಘಟಿಸಿ ಚಂದೂನ ನವಜೀವನದ ರಾಹುಟಿಯ ಮೊದಲನೇ ಗೂಟವು ಹೂತು ಗಟ್ಟಿಯಾಯಿತೆಂದರೆ, ಬಳಿಕ ಆತನ ಲಗ್ನದ ಎರಡನೇ ಗೂಟವನ್ನು ಹೂಳುವವೆಂದು ಮಾಸಾಹೇಬರು ತಮ್ಮ ಮನದಲ್ಲೇ ಗೊತ್ತುಮಾಡಿಕೊಂಡರು.

ವಿಲಾಯತಿಯಿಂದ ಸ್ಟೇಟ ಸೆಕ್ರೆಟರಿಯ ಪತ್ರ ಬಂದ ಬಳಿಕ ಮುಂದೆರಡು ದಿನಗಳಿಗೆ ಪ್ರಾಂತದ ಗವರ್ನರನಿಂದ ಚಂದೂನಿಗೆ ಕರೆಬಂದಿತು. ತಮ್ಮ ಪ್ರಾಂತದಲ್ಲಿ ಹೊಸದಾಗಿ ನೇಮಿಸಿದ್ದ ಹಿಂದೂ ಸಿವ್ಹಿಲಿಯನ್ನನನ್ನು ಭೆಟ್ಟಿಗೆ

ಕರೆಯುವದೊಂದು ಸನ್ಮಾನ್ಯ ಶಿಷ್ಟಾಚಾರವೇ ಆಗಿದ್ದು, ಅದನ್ನು ಪ್ರತಿಯೊಬ್ಬ ಗವರ್ನರನೂ ಪ್ರಾಯಶಃ ಪಾಲಿಸುತ್ತಿರುತ್ತಾನೆ.

ಚಂದೂನ ವೈರಾಗ್ಯದ ವಿರುದ್ಧ ಬಂಡನ್ನೆಬ್ಬಿಸಿದ ಸಂಗತಿಗಳು ಇಳಿಕಲಿನಲ್ಲಿಯು ಯಾವುದೊಂದು ತುಂಬಿದ ಬಂಡಿಯಂತೆ ಆತನ ಮೈಮೇಲೆಯೇ ಬರಹತ್ತಿದವು. ಆದರಿಂದ ಆತನ ಆಯ್. ಸಿ. ಎಸ್ಸಿನ ನೌಕರಿಯು ಹುಕುಂ ಸ್ಟೇಟಸೆಕ್ರೆಟರಿಯಿಂದ ಬಂದು, ಪ್ರಾಂತದ ಗವರ್ನರನಿಂದ ಆತನಿಗೆ ಕರೆಬರಲು ಈಗ ಮತ್ತೆ ಒಲ್ಲೆನೆನ್ನುವ ಶಕ್ತಿಯು ಆತನ ಮನಸ್ಸಿನಲ್ಲಿ ಉಳಿಯಲಿಲ್ಲ. ತಮ್ಮ ಹುಕುಮಿನಂತೆ ನೌಕರಿಗೆ ಹಾಜರಾಗುವೆನೆಂದು ಆತನು ಸ್ಟೇಟ ಸೆಕ್ರೆಟರಿಗೆ ಉತ್ತರ ಬರೆದನಲ್ಲದೆ, ತಮ್ಮ ಕರೆಯ ಮೇರೆಗೆ ತಮ್ಮ ಭೆಟ್ಟಿಗಾಗಿ ಇಂಥ ದಿವಸ ಬರುತ್ತೇನೆಂದು ಪ್ರಾಂತದ ಗವರ್ನರನಿಗೂ ಬರೆದನು; ಮತ್ತು ಅದರಂತೆ ಆತನು ನಾಳೆಯ ದಿನ ಅತ್ತ ಹೊರಡುವವನು. ಅಷ್ಟರೊಳಗೇ ಅವನಿಗೆ ವಿಲಾಯತಿಯಿಂದ ಬೇರೊಂದು ಪತ್ರವು ಆಕಸ್ಮಿಕವಾಗಿ ಬಂತು. ಅದು ಆಕ್ಸಫರ್ಡಿನೊಳಗಿನ ಆತನ ಮೆಚ್ಚಿನ ಪ್ರೊಫೆಸರ ಜೀವ್ಹಾನ್ಸರಿಂದ ಬಂದಿದ್ದು, ಆದರ ಸಂಗತಿಯು ಹೀಗಿದ್ದಿತು:---

'ನೀನು ಇಲ್ಲಿಂದ ಹೊರಟುಹೋದ ಬಳಿಕ ನಿನಗೂ ನನಗೂ ಇಷ್ಟು ಬೇಗನೆ ಮತ್ತೆ ಭೆಟ್ಟಿಯಾದೀತೆಂದು ನನಗನಿಸಿರಲಿಲ್ಲ; ಆದರೆ ಎಲ್ಲ ಸಂಗತಿಗಳು ಯೋಗಾಯೋಗದಿಂದಲೇ ಘಟಿಸುತ್ತಿರುತ್ತವೆ ಪ್ರಸ್ತುತದ ಯೋಗವೆಂದರೆ, ಸಿಮ್ಲಾದಲ್ಲಿ ವ್ಹಾಯಿಸರಾಯರ ಸೆಕ್ರೆಟೆರಿಏಟಿನಲ್ಲಿ ಎರಡು ವರ್ಷಗಳ ಮಟ್ಟಿಗೆ ನನ್ನನ್ನು ಸ್ಪೆಶಲ್ಲಾಗಿ ನೇಮಿಸಿರುತ್ತಾರೆ. ಆ ಸ್ಥಳದ ಮೇಲೆ ಹಾಜರಾಗಲಿಕ್ಕೆಂದು ನಾನು ಹೊರಡಲಿದ್ದೇನೆ; ಮೇಲ ಹಡಗಿನಿಂದಲೇ ಹೊರಡುತ್ತಿರುವದರಿಂದ, ನಾನು ಮುಂಬಯಿಗೆ ಯಾವ ದಿವಸ ಬಂದು ತಲುಪುವೆನೆಂಬದು ನಿನಗೆ ತಿಳಿದೇ ತಿಳಿದೀತು. ನಾನು ಮುಂಬಯಿಗೆ ಬಂದಿಳಿದ ಕೂಡಲೆ ಸಿಮ್ಲಾಕ್ಕೆ ಹೊರಡುವವನಿದ್ದೇನೆ. ಆದರಿಂದ ಆ ಕಾಲಕ್ಕೆ ನೀನು ಮುಂಬೈಗೆ ಬಂದು ನನಗೆ ಭೆಟ್ಟಿಯಾಗುವೆಯಾ? ಹಿಂದುಸ್ತಾನದೊಳಗಿನ ದೊಡ್ಡ ದೊಡ್ಡ ಊರುಗಳ ನಡುವಿನ ಅಂತರವು ನನಗೆ ಗೊತ್ತಿರದ್ದರಿಂದ, ಸಹಜವಾಗಿ 'ಮುಂಬೈಗೆ ಬಂದು ಭೆಟ್ಟಿಯಾಗು' ಎಂದು ಬರೆಯುತ್ತಿರುವೆನು; ಆದರೆ ಈ ಪ್ರವಾಸವು ನಿನಗೆ ತೊಂದರೆಯದಾಗುವದೋ ಹೇಗೆಂಬದನ್ನು ನೀನೇ ಯೋಚಿಸು. ನೀನು ಅಲ್ಲಿಗೆ ಬಾರದಿದ್ದರೂ ನನಗಾವ ಬಗೆಯಿಂದಲೂ ಅಡ್ಡಿಯಾಗಲಿಕ್ಕಿಲ್ಲ; ಆದರೆ ನೀನು ಬಂದರೆ ಮಾತ್ರ ಭೆಟ್ಟಿಯು ಸಂತೋಷವಾದೀತೆಂಬದನ್ನ ತಿಳಿಸುವ ಕಾರಣವಿಲ್ಲ."

ಈ ಕಾಗದವನ್ನೋದಿ ಚಂದೂನಿಗೆ ಸಂತೋಷವಾಯಿತು. ಯಾಕಂದರೆ ಆ ಪ್ರೊಫೆಸರರ ಪ್ರೇಮವು ಈತನಲ್ಲಿ ಹೆಚ್ಚಾಗಿದ್ದಿತು; ಮತ್ತು ಗುರುವೆಂದ ಕೂಡಲೆ ಅವನನ್ನು ಆದರದಿಂದ ನೋಡಿಕೊಳ್ಳುವ ಹುಟ್ಟುಬುದ್ಧಿಯು ಚಂದುವಿನಲ್ಲಿದ್ದಿತೆಂಬದನ್ನು ನಮ್ಮ ವಾಚಕರಿಗೆ ಹೊಸದಾಗಿ ತಿಳಿಸುವ ಕಾರಣವಿರುವದಿಲ್ಲ. ಇರಲಿ.

ಚಂದುವು ಗವರ್ನರರ ಭೆಟ್ಟಿಗೆ ಹೊರಡಲು ಸರ ಗಂಗಾರಾಮರೂ ಅವನೊಡನೆ ರಾಜಧಾನಿಗೆ ತೆರಳಿದರು. ಗವರ್ನರರ ಭೆಟ್ಟಿಯಲ್ಲಿ ಚಂದುವು ರಾಜಿನಾಮೆ ಕೊಡಲಿಕ್ಕಿಲ್ಲೆಂದು ಈಗ ಅವರ ಖಾತ್ರಿಯಾಗಿ ಹೋಗಿತ್ತು. ಆ ವೈರಾಗ್ಯದ, ಆ ಕೈಗಡದ ಹುಚ್ಚು ಚೆಲ್ಲಿಕೊಟ್ಟು ಪ್ರವೃತ್ತಿ ಮಾರ್ಗಿಯಾದುದರಲ್ಲಿ ಅವರಿಗೆ ಸಂದೇಹ ಉಳಿದಿರಲಿಲ್ಲ; ಆದರೆ ರಾಜಧಾನಿಗೆ ಹೋಗಿ, ಅಲ್ಲಿಯ ಕೆಲ ಜನ ಪ್ರತಿಷ್ಠಿತರೆದುರಿಗೆ "ಇದುಕೋ, ಆಯ್. ಸಿ. ಎಸ್ಸಿನ ತಂದೆ!" ಎಂದು ಮೆರೆಯುವ ವೈಭವವನ್ನು ಅವರು ಉಪಭೋಗಿಸಬೇಕಾಗಿದ್ದಿತು. ಹೊಸ ಮದುವಣಗಿತ್ತಿಯ ಜೀವನದಲ್ಲೊಂದು ವಿಶೇಷ ಪ್ರಸಂಗವು ಬರುವುದೇನಂದರೆ, ಅದು ಘಟಿಸಿದ ನಂತರ ಅವಳ ಗೆಳತಿಯರು ಅವಳ ಸುತ್ತಲೂ ಕೂಡಿ ಅವಳಿಗೆ ಕೇಳಬಾರದಂತಹ ಪ್ರಶ್ನೆಗಳನ್ನು ಕೇಳಹತ್ತುತ್ತಾರೆ. ಗವರ್ನರನಿಗೆ ಭೆಟ್ಟಿಯಾಗಿ ಹೊರಬಿದ್ದ ಮೇಲೆ ಮೊಟರಿನಲ್ಲಿ ಕುಳಿತಾಗ ಸರ ಗಂಗಾರಾಮರಾದರೂ ಚಂದುವಿಗೆ ಅಂಥ ಹಲವು ಪ್ರಶ್ನಗಳನ್ನು ಕೇಳಿ ಗುಲ್ಲನ್ನೆಬ್ಬಿಸಿದರು! ಆದರೆ ಇಂಥ ಭೆಟ್ಟಿಯು ಸರ್ವಸಾಧಾರಣ ಔಪಚಾರಿಕದ್ದಾಗಿರುತ್ತದೆ. ಆದರಿಂದ ಸರ ಸಾಹೇಬರಿಗೆ ಉತ್ತರ ಕೊಡುವಾಗ ಅದ್ಭುತವನ್ನೇನೂ ಅವನಿಂದ ಹೇಳಲಾಗಲಿಲ್ಲ; ಆದರೂ ತನ್ನ ತಂದೆಯ ಪ್ರಶ್ನೆಗಳ ಇಂಗಿತವನ್ನನುಲಕ್ಷಿಸಿ ಚಂದುವು ಸುಳ್ಳು ಸುಳ್ಳೇ ಒಂದು ಉತ್ತರವನ್ನು ಹೇಳಿಬಿಟ್ಟನು. ಅದೇನಂದರೆ:—"ಸರ ಗಂಗಾರಾಮರಿಗೆ ನಮಸ್ಕಾರ ತಿಳಿಸಿರೆಂದು ಗವ್ಹರ್ನರ ಸಾಹೇಬರು ಕೊನೆಗೆ ನನಗೆ ಹೇಳಿದರು" ಗವರ್ನರ ಸಾಹೇಬರು ಸ್ವಂತ ತಮ್ಮನ್ನೇ ಭೆಟ್ಟಿಗಾಗಿ ಕರೆದು, ತಮ್ಮ ಅಭಿನಂದನ ಮಾಡಬಹುದೆಂದು ಸರ ಸಾಹೇಬರಿಗನಿಸುತ್ತಿತ್ತು; ಆದರೆ ಅದರಲ್ಲಿ ಮಾತ್ರ ಅವರಿಗೆ ನಿರಾಶೆಯುಂಟಾಯಿತು.

ಚಂದುವು ಗವರ್ನರ ಸಾಹೇಬನ ಭೆಟ್ಟಿಯಾದ ಬಳಿಕ ಸರ ಗಂಗಾರಾಮರು ಚೋದ್ಯಪುರಕ್ಕೆ ಹಿಂದಿರುಗಿದರು. ಚಂದುವು ಒಬ್ಬ ಸೇವಕನೊಡನೆ ಅಲ್ಲಿಂದ ನೆಟ್ಟಗೆ ಮುಂಬೈಗೆ ಪ್ರೊಫೆಸರರಿಗೆ ಭೆಟ್ಟಿಯಾಗಲಿಕ್ಕೆಂದು ಹೊರಟನು. ಮಧ್ಯಾಹ್ನದಲ್ಲಿ ಅವನು ಅಲ್ಲಿಯ ತನ್ನ ಗೆಳೆಯರಿಗೆ ಭೆಟ್ಟ

ಯಾದನು. ಆದರಿಂದ ಆತನ ಮನಸ್ಸು ಪ್ರಸನ್ನವಾಗಹತ್ತಿತು. ಕೆಲ ಜನ ಮಿತ್ರರಿಗೆ ಮಧ್ಯಂತರದಲ್ಲಿಯು ಈತನ ಸ್ಥಿತ್ಯಂತರದ ಹಾರಿಕೆಯ ಸುದ್ದಿ ಹತ್ತಿ, ಈತನ ವಿಷಯವಾಗಿ ಯೋಚನೆಯುಂಟಾಗಿತ್ತು. ಆದರಿಂದ ಅವನು ಸ್ವತಃ ಮತ್ತೆ ಮುಂಚಿನ ಉಡುಪಿನಲ್ಲೇ ಬಂದು ಭೆಟ್ಟಿಯಾಗಿ ಮಾತಾಡಿದುದನ್ನು ಕಂಡು ಅವರ ಚಿಂತೆಯು ಪರಿಹಾರವಾಯಿತು. ಪೇಟೆಯೊಳಗೆ ಹೋಗಿ ಕೆಲ ಜೀನಸುಗಳನ್ನು ಕೊಂಡನು. ಅವುಗಳಲ್ಲಿಯು ಕೆಲವು ಸರ ಸಾಹೇಬರಿಗೂ ಮಾ-ಸಾಹೇಬರಿಗೂ ರುಚಿಸುವಂತಹವಾಗಿದ್ದವು. ಅವುಗಳೊಡನೆ ಒಂದು ದೊಡ್ಡ ಹಿತ್ತಾಳಿಯ ಪಂಜರವನ್ನೂ ಅವನು ಕೊಂಡುಕೊಂಡನು. ಅದರ ಮೇಲೆ ವಿಚಿತ್ರ ಬಣ್ಣಗಳಿಂದ ಸುಂದರವಾಗಿ ಬಣ್ಣಕೊಟ್ಟಿದ್ದರಲ್ಲದೆ, ಅದರೊಳಗೊಂದು ಬಹು ಮಂಜುಳವಾದ ಗಂಟೆಯೂ ಕಟ್ಟಲ್ಪಟ್ಟಿದ್ದಿತು. ಅದರೊಳಗಿನ ಹಕ್ಕಿಗಳು ಅತ್ತಿತ್ತ ಚಲಿಸ ಹತ್ತಿದ ಕೂಡಲೆ ಅದರ ನಾದವು ಇಂಪಾಗಿ ಕೇಳ ಹತ್ತು ವಂತಿತ್ತು.

ಅಂದು ಸಂಜೆಯ ಮುಂದೆ ನಾಲ್ಕು ಗಂಟೆಗೆ ಅವನು ತಾಜಮಹಾಲ ಹೋಟೆಲ್ಲಿಗೆ ಹೋದನು. ಅಲ್ಲಿ ಪ್ರೊ. ಜೀವ್ಹಾನ್ಸರ ಪತ್ತೆ ಹಚ್ಚಿ ಅವನು ಅವರ ಕೋಣೆಗೆ ಹೋದನು. ಅವರಿಬ್ಬರಿಗೂ ಹೊಸ ಹೊಸ ಬಹು ದೊಡ್ಡ ಸಂಬಳದ ನೌಕರಿಗಳು ದೊರೆತದ್ದರಿಂದ, ಅವರು ಪರಸ್ಪರರನ್ನು ಅಭಿನಂದಿಸಿದರು. ಆಗ ಪ್ರೊಫೆಸರನು:—"ಮಿ. ಚಂದೂಲಾಲ, ಇಲ್ಲಿಗೆ ಬಂದ ಮೇಲೆ ನಾನು ನಿಮ್ಮನ್ನೇ ಮೊಟ್ಟ ಮೊದಲು ಸಂದರ್ಶಿಸಿರುತ್ತೇನೆ! ಆದರೆ ಇನ್ನು ಈಗಲೆ ಹೊರಗೆ ಹೋಗಿ, ಊಟದ ವೇಳೆಯೊಳಗಾಗಿ ತಿರುಗಿ ಬಂದು, ರಾತ್ರಿಯು ಪಂಜಾಬ ಮೇಲನ್ನು ಹಿಡಿಯಬೇಕಾಗಿದೆ."

ಚಂದು:—"ಹಾಗಾದರಿಂದು ಹಡಗವು ಬಂದರಕ್ಕೆ ಬಹು ತಂಡವಾಗಿ ಬಂದಿತೆನಬೇಕು."

"ಅಹುದು. ಮುಂಬಯಿಯಿಂದ ೧೦೦ ಮೈಲಿನ ಮೇಲೆ ಹಡಗದ ಎಂಜಿನ್ನಿನಲ್ಲಿ ಏನೋ ಸ್ವಲ್ಪ ಕೆಟ್ಟಿತ್ತು. ಈ ಹಡಗವು ಮುಂದೆ ಆಸ್ಟ್ರೇಲಿಯಕ್ಕೆ ಹೋಗತಕ್ಕದ್ದಿದೆ. ಅದರಿಂದ ಬಂದರದ ಅಧಿಕಾರಿಗಳು ಅವಸರದಿಂದ ಬಂದರದಲ್ಲಿ ಸೇರಿಸಿಕೊಂಡರು. ಇಲ್ಲದಿದ್ದರೆ ಇನ್ನೂ ತಡವಾಗುತ್ತಿತ್ತು."

ಕೆಲ ಹೊತ್ತು ಉಭಯತರಲ್ಲಿ ಮಾತು ಕಥೆಗಳಾದ ಬಳಿಕ:—"ಒಳ್ಳೇದು. ಮತ್ತೆ ಮತ್ತೆ ಭೆಟ್ಟಿಯಾಗುವ ಪ್ರಸಂಗಗಳು ಇನ್ನು ಮೇಲೆ ಉಂಟಾಗುವವೇ." ಎಂದಂದು, ಪ್ರೊಫೆಸರರು ಚಂದುವಿಗೆ ಹೊರಡಲಪ್ಪಣೆಯಿತ್ತರು. ಚಂದುವು ತಾಜದಿಂದ ಹೊರಬಿದ್ದನು. ಆಗ ಐದು ಗಂಟೆಯ

ಸಮಯ. ತಾನು ಮಾಡತಕ್ಕ ಕೆಲಸಗಳೇನೂ ಉಳಿದಿರಲಿಲ್ಲ. ಅದರಿಂದ ಸಹಜವಾಗಿ ಕಾಲಿನಿಂದ ನಡೆದು ಸಮುದ್ರದ ಹಾಗು ಬಂದರದ ನೋಟ ವನ್ನು ನೋಡುವ ಉದ್ದೇಶದಿಂದ ಅವನು ಬಂದರದ ಕಡೆಗೆ ನಡೆದನು.

ಆ ಬಂದರದ ಮೇಲಿನ ಕಲ್ಲು ಕಟಾಂಜನಕ್ಕೆ ಹೊಂದಿ ನಿಂತವರಿಗೆ ಬೇಕಾದರೆ ಸಮುದ್ರದ ಹಾಗು ಅದು ಬೇಡಾದರೆ ಬಂದರದ ಕಡೆಯ ಪಟ್ಟ ಣದ ಭಾಗದ ಮೋಜನ್ನು ನೋಡಲು ದೊರೆಯುತ್ತದೆ. ಚಂದುವು ವಿಲಾ ಯುತಿಯಲ್ಲಿ ಸಮುದ್ರದ ಸೊಬಗನ್ನ ದೆಷ್ಟೋ ನೋಡಿದ್ದನು; ಆದರೆ ಸ್ಥಳಭೇದ ದಿಂದ ಪ್ರತಿಯೊಂದು ಬಂದರದ ಶೋಭೆಯು ಭಿನ್ನ ಭಿನ್ನ ವಾಗಿಯೇ ಇರುತ್ತದೆ. ಬಂದರದ ಮೆಟ್ಟಿಲುಗಳನ್ನು ಹತ್ತಿ ಬಂದ ಬಳಿಕ ಯಾವ ಒಂದು ನಾಲ್ಕು ಮುಖದ ಅಭಿನವ ಶೋಭೆಯುಳ್ಳ ಅಗಸಿಯು ಕೊತ್ತಳವು ಹತ್ತುವದೋ, ಅದನ್ನು ಚಂದುವು ಈ ಮೊದಲು ನೋಡಿರಲಿಲ್ಲ. ಅದಕ್ಕೆ 'ಗೇಟ-ವೇ ಆಫ್ ಇಂಡಿಯಾ' ಎಂದೆನ್ನುತ್ತಾರೆ. ಅರ್ಥಾತ್ ಹಿಂದೂ ಮತ್ತು ಇಂಗ್ಲಿಷರ ಭೆಟ್ಟಿ ಯ ಯೋಗಾಯೋಗದ ಸ್ಥಳವೇ ಅದ! ಅಗಸಿಯೊಳಗಿಂದ ಹೊರಗೆ ಇಲ್ಲವೆ ಒಳಗೆ ಹೋದರೆ ಯಾರಿಂದು ಹೇಗೆ ಭೆಟ್ಟಿಯಾದೀತೆಂಬದನ್ನು ಹೇಗೆ ಹೇಳ ಬೇಕು?

ಮತ್ತು ನಿಜವಾಗಿಯೂ ಇಂದು ಚಂದುವಿಗೆ ಆ ಅನುಭವವು ಬಂತು ಬಂದರದ ಮೆಟ್ಟಿಲುಗಳು ಮುಗಿದ ಕೂಡಲೆ ನಿಂತುಕೊಳ್ಳತಕ್ಕಂಥದೊಂದು ಸಮನೆಲದ ಫರಸುಗಲ್ಲಿನ ಪ್ರದೇಶವಿದೆ. ಅದರ ಮೇಲೆ ಚಂದುವು ನಿಂತು ಕೊಂಡಿದ್ದನು. ಅದರ ಮೇಲಿಂದ ಕೆಲವರು ಮೇಲಕ್ಕೆ ಹೋಗುತ್ತಿದ್ದರು; ಕೆಲವರು ಕೆಳಗಿಳಿಯುತ್ತಿದ್ದರು. ಕೆಳಗಿಳಿದು ಹೋಗುವವರು ಬಹುಶಃ 'ಹೋಡಿ' 'ನಾವು'ಗಳಲ್ಲಿ ಕುಳಿತು ಬಂದರದಲ್ಲಿ ಸಂಚರಿಸಲಿಕ್ಕೆಂದು ಹೋಗು ವವರಿರುತ್ತಾರೆ. ಅವರಿಗಾಗಿಯೇ ಹಲವು ಸಣ್ಣದೊಡ್ಡ ಹೋಡಿ-ನಾವುಗಳನ್ನು ಲಂಗರ ಹಾಕಿ ನಿಲ್ಲಿಸಿಕೊಂಡು ಬಂದರದ ಅಂಬಿಗರು ಹುಮ್ಮಸದ ಪ್ರವಾಸಿಗರ ದಾರಿ ಕಾಯುತ್ತಿರುತ್ತಾರೆ ಕೆಲಸವಿಲ್ಲದಾಗ ಇಂಥ ಯಾವುದೊಂದು ನಾವಿ ನಲ್ಲಿ ಕುಳಿತು ಬಂದರದಲ್ಲಿ ಸಂಚರಿಸಿ ಬರುವಂತಹ ಬೇರೆ ಮೋಜು ಇನ್ನಾವು ದಿರಬೇಕು? ಚಂದುವು ತನ್ನ ಮನಸ್ಸಿನಲ್ಲೂ ಅವನ್ನೇ ಕಲ್ಪಿಸಿ ಮುಂದಾಗಿ ಒಂದೆರಡು ಮೆಟ್ಟಿಲುಗಳನ್ನಿಳಿದು ಹೋಗುತ್ತಿರುವಷ್ಟರಲ್ಲಿ ಕೆಳಗಿದ್ದ ಅಂಬಿಗರು "ನನ್ನ ನಾವಿಗೆ ಬರ್ರಿ" "ನನ್ನ ನಾವಿಗೆ ಬರ್ರಿ" ಎಂದು ಕೂಗಾಟವನ್ನೇ ನಡೆ ಸಿದರು. ವಿಲಾಯುತಿಯೊಳಗಿನ ಅಂಬಿಗರು ಹೀಗೆಂದೂ ಮಾಡುವದಿಲ್ಲ. ಈ ಕೊಂದಲದೊಳಗಿಂದ ಹೇಗೆ ಪಾರಾಗುವದಪ್ಪಾ! ಎಂದು ಚಂದುವಿಗನಿಸಿತು.

ಕಡೆಗೆ ಒಬ್ಬ ಅಂಬಿಗನ ಕೈ ಹಿಡಿದು ಅವನು ಒಂದು ನಾವಿನೊಳಗೆ ಹೋಗಿ ಕುಳಿತನು. ಈ ನಾವು ಶೀಡಿನದೂ ಹುಟ್ಟಿನದೂ ಆಗಿತ್ತು. ಅದೇ ಅವನಿಗೆ ವಿಹಿತವೆನಿಸಿತು. ಆತನು ಮೋಟರ ಲಾಂಚನ್ನು ಆರಿಸಿಕೊಳ್ಳಲಿಲ್ಲ.

ಚಂದುವು ನಾವಿನಲ್ಲಿ ಕುಳಿತನು; ಆದರೆ ಅದರಲ್ಲಿದ್ದ ಇಬ್ಬರೊಳಗಿನ ಒಬ್ಬ ಅಂಬಿಗನಿಗೆ ತನ್ನ ಹುಟ್ಟು ಕೆಟ್ಟಿದೆಯೆಂಬದು ಕಂಡು ಬರಲು, ಬೇರೊಂದನ್ನು ತರಲಿಕ್ಕೆಂದು ಅವನು ಅವಸರದಿಂದ ನಾವಿನಿಂದಿಳಿದು ಮೆಟ್ಟಿಲುಗಳನ್ನು ಹತ್ತಿಹೋದನು. ಉಳಿದಿದ್ದ ಅಂಬಿಗನು ಚುಕ್ಕಾಣಿಯ ಮೇಲೆ ಕೈಯಿರಿಸಿ ಸುಮ್ಮನೆ ಕುಳಿತನು. ಆ ನಾವೆಯು ನಿಂತಲ್ಲಿಯೇ ಸ್ತಬ್ಧವಾಗಿ, ಆದರೆ ಅಲ್ಲಾಡುತ್ತ ನಿಂತಿತ್ತು. ಮುಂದೆ ಸರಾಸರಿ ಆರೇಳು ನಿಮಿಷಗಳ ನಂತರ ಹುಟ್ಟು ತರಲಿಕ್ಕೆಂದು ಹೋಗಿದ್ದ ಆ ಅಂಬಿಗನು ಕೈಯಲ್ಲಿ ಬೇರೊಂದು ಹುಟ್ಟು ಹಿಡಿದುಕೊಂಡು ಮೆಟ್ಟಿಲುಗಳನ್ನಿಳಿಯ ಹತ್ತಿದನು; ಆದರೆ ಅವನೀಗ ಒಬ್ಬನೇ ಬರದೆ, ಅವನೊಡನೆ ಒಬ್ಬ ನವತರುಣ ಆಂಗ್ಲ ಯುವತಿಯೂ ಕೆಳಗಿಳಿದು ಬರುತ್ತಿದ್ದಳು. ಅಂಬಿಗನು ಅವಳ ಮುಂದೆ ಮುಂದೆ ಅವಳಿಗೆ ದಾರೀ ತೋರಿಸುವವನಂತೆ ಇಳಿಯುತ್ತಿದ್ದನು; ಹಾಗು ಆ ಸ್ತ್ರೀಯು ತನ್ನ 'ಝಗಾ' ಮೇಲಕ್ಕೆತ್ತಿ, ಎತ್ತರದ ಹಿಂಬಡದ ಬೂಟುಗಳನ್ನು ಮೆಲ್ಲಮೆಲ್ಲನೆ ಊರುತ್ತ ಒಂದೊಂದೇ ಮೆಟ್ಟಿಲನ್ನು ಸಾವಧತೆಯಿಂದಿಳಿಯುತ್ತಿದ್ದಳು.

ನಾವಿನ ಬಳಿಗೆ ಬಂದ ಕೂಡಲೆ ಅಂಬಿಗನು ಒಂದು ಕೈಯಿಂದ ನಾವಿನ ಕಂಟವನ್ನು ಹಿಡಿದು ಅದನ್ನು ಸ್ಥಿರಗೊಳಿಸಲು ಪ್ರಯತ್ನಿಸಿದನು; ಹಾಗು ಇನ್ನೊಂದು ಕೈಯಿಂದ ನಾವಿನಲ್ಲಿಳಿಯುವ ಸ್ಥಳವನ್ನು ಆ ಸ್ತ್ರೀಗೆ ತೋರಿಸುತ್ತಿದ್ದನು. ಅವಳನ್ನು ಕಂಡ ಕೂಡಲೆ ಚಂದುವು ಎದ್ದು ನಿಂತನು. ಅವನು ಅವಳ ಮೋರೆಯನ್ನು ಮಿಕಿಮಿಕಿ ಎಂದು ನೋಡಿದನು; ಹಾಗು ಸ್ತಂಭಿತನಾದನು! ಆದರೆ ಆ ಸ್ತ್ರೀಯು ನಗುತ್ತ:—“ಭಲೆ! ಇದೇ ಏನು ನಿಮ್ಮ ಹಿಂದೂ ತರುಣರ ಸ್ತ್ರೀದಾಕ್ಷಿಣ್ಯ? ಈ ಅಲ್ಲಾಡುತ್ತಿರುವ ನಾವಿನಲ್ಲಿಳಿಯುವಾಗ ನಾನು ಝೋಲಿ ಹೋಗಿ ಸಮುದ್ರದಲ್ಲಿ ಬಿದ್ದರೆ ಸತ್ತೇನಲ್ಲ! ಹೀಗೆ ಸುಮ್ಮನೆ ನೋಡುವಿರೇನು? ಕೈಕೊಡಿರಿ, ನಾವಿನಲ್ಲಿಳಿಯಲಿಕ್ಕೆ!”

ಮನಸ್ಸಿರದಿದ್ದರೂ ಚಂದೂನ ಕೈಗಳು ಅವನಿಗೆ ತಿಳಿಯದ ಹಾಗೆ ಮುಂದಾದವು. ಅವುಗಳನ್ನು ಹಿಡಿದು ಆ ರಮಣಿಯು ನಾವಿನಲ್ಲಿಳಿದಳು; ಮತ್ತು ಚಂದುವನ್ನು ಬಾಕಿನ ಮೇಲೆ ಕೂಡ್ರಿಸಿ, ತಾನೂ ಅದೇ ಬಾಕಿನ ಮೇಲೆ ಆತನಿಗೆ ಹೊಂದಿಕೊಂಡೇ ಕುಳಿತಳು!

ಚುಕ್ಕಾಣಿಯನ್ನು ಹಿಡಿದಿದ್ದ ಅಂಬಿಗನು ತನ್ನ ಸಂಗಡಿಗನನ್ನು ಕುರಿತು ಅನ್ನುತ್ತಾನೆ:--"ಎಲೋ, ನೀನೊಳ್ಳೇ ಎದೆಗಾರನಾಗಿ ತೋರುತ್ತೀ. ಈ ನಾವಿನಲ್ಲಿ ಕರೀ ಮನುಷ್ಯನನ್ನು ಮೊದಲು ಕುಳ್ಳಿರಿಸಿರುವುದು ನಿನಗೆ ಗೊತ್ತಿದ್ದೂ ಈ ಬಿಳೀ ಆಂಗ್ಲ ಯುವತಿಯನ್ನು ಇದೇ ನಾವಿಗೆ ಕರೆತರುವ ಧೈರ್ಯವು ನಿನಗೆಂತಾಯಿತೊ? ದುಡ್ಡು ಉಚ್ಚುವ ಲೋಭವಾದರೂ ನಿನಗೆಷ್ಟಾಗಬೇಕು? ಸಾಗಿತೆಂದು ಸಾಗಿತು. ಇಲ್ಲದಿದ್ದರೆ ಮಗನೇ, ತನ್ನ ಅವಮಾನವಾಯಿತೆಂದು ಇವಳು ನಿನ್ನ ಕುಂಡಿಯ ಮೇಲೆ ಬೂಟಿನಿಂದ ಒದ್ದು ಮೆಟ್ಟಿಲುಗಳ ಮೇಲೆ ಕೆಡಹಿದ್ದರೆ? ಇನ್ನೂ ಏಹಿತವು. ಇವಳ ಬಿಳಿ ಮರ್ದನು ಇವಳ ಜೊತೆಯಲ್ಲಿರದಿದ್ದದ್ದು. ಇಲ್ಲದಿದ್ದರೆ ಅವನು ನಿನ್ನ ಚರ್ಮವನ್ನೇ ಸುಲಿಸುತ್ತಿದ್ದನು."

ಆ ಇನ್ನೊಬ್ಬ ಅಂಬಿಗನು:--"ಭಲೇ! ನೀನು ನನ್ನನ್ನೇನು ಬುದ್ಧಿಗೇಡಿಯೆಂದು ತಿಳಿಯುತ್ತಿರುವೆಯಾ? ಈ ಕರೀ ಮನುಷ್ಯನ ಬಾಡಿಗೆ ಮೊದಲು ತಕ್ಕೊಂಡದ್ದೇನು ನನಗೆ ಗೊತ್ತಿರಲಿಲ್ಲವೇ? ಆದರೆ ನಿಜ ಸಂಗತಿಯು ಹೀಗಾಯಿತು ನೋಡು: ಅಂಬಿಗರ ಗುಂಪಿನಲ್ಲಿ ಈ ರಮಣಿಯು ನಾಲ್ಕು ಮೆಟ್ಟಿಲು ಕೆಳಗಿಳಿದು ಬಂದ ಬಳಿಕ ಇವಳಿಗೆ ನಮ್ಮಿ ನಾವು ಕಾಣಿಸಿತು. ಇದರಲ್ಲಿ ಯಾರು ಕುಳಿತಿರುವರೆಂಬದನ್ನು ಇವಳು ಚೆನ್ನಾಗಿ ದಿಟ್ಟಿಸಿ ನೋಡಿದಳು. ಬಳಿಕ ಇವಳು ತಾನೇ ತನ್ನ ಕೈಗಳಿಂದ ಆ ಅಂಬಿಗರ ಗುಂಪನ್ನು ದೂರ ಸರಿಸಿ, ನಮ್ಮ ನಾವಿನ ಕಡೆಗೇ ನಡೆದಳೆಂಬುದನ್ನು ನಾನು ನೋಡಿದೆನು. ಆಗ ನಾನಿವಳಿಗೆ ದಾರಿ ತೋರುತ್ತ ಇಲ್ಲಿಗೆ ಕರೆತಂದೆನು. ಇಲ್ಲದಿದ್ದರೆ ಓಣಿಯೊಳಗಿನ ಕಚ್ಚುವ ಹೆಣ್ಣಾಯಿಯಂತೆ ಈ ಬಿಳೀ ಮಡಮ್ಮಳು ನನ್ನ ಮೇಲೆ ಏರಿ ಬರುತ್ತಿದ್ದಳು; ಹಾಗು ಬೂಟುಗಾಲಿನಿಂದ ಒದೆಯದೆ ಬಿಡುತ್ತಿರಲಿಲ್ಲೆಂಬದು ನನಗೇನು ತಿಳಿಯುವದಿಲ್ಲವೋ? ಈ ಹೆಂಗಸಿಗೂ ಈ ಗಂಡಸಿಗೂ ಮುಂಚಿನದೆಲ್ಲಿಯದಾದರೂ ಗುರ್ತಿರಬೇಕೆಂದು ನನಗನಿಸುತ್ತದೆ. ಎಲೋ, ಬಿಳಿದು ಹಾಗು ಕರಿದು ಇವೆಲ್ಲ ಮದನನಾಟದ ರಂಗಿನಲ್ಲಿ ಒಂದೇ. ಹೇಗೆ ಹೆಗಲಿಗೆ ಹೆಗಲು ಹತ್ತಿಕ್ಕಿಕೊಂಡು ಕುಳಿತಿದ್ದಾಳೆ ನೋಡಿದೆಯಾ?"

ಆ ಇಬ್ಬರು ಅಂಬಿಗರ ಸಂಭಾಷಣವನ್ನು ಕೇಳಿಕೊಳ್ಳುವ ನೆವದಿಂದ ಚಂದೂ ಹಾಗು ಆ ಆಂಗ್ಲ ಸ್ತ್ರೀ ಇವರಿಬ್ಬರೂ ಸ್ತಬ್ಧರಾಗಿ ಕುಳಿತಿದ್ದರು. ಬಳಿಕ ಆ ಹೆಂಗಸು ತಾನಾಗಿಯೇ ಮಾತಾಡಹತ್ತಿದಳು:--'ಮಿಷ್ಟರ ಚಂದೂ, ನಿನಗೆ ಸ್ಮರಿಸುತ್ತದೇನು? ಹ್ಯಾಂಪಸ್ಟೆಡ್ ಹೀಥದ ಜಾತ್ರೆಯಲ್ಲಿ ಒಂದು ತೊಟ್ಟಿಲಲ್ಲಿ ನಾನು ಮೊದಲು ಸ್ಥಳ ಹಿಡಿದು ಕುಳಿತಿದ್ದೆನು. ಬಳಿಕ ದೈವಯೋಗದಿಂದ

ನೀನೂ ಅಲ್ಲಿಗೆ ಬಂದೆ; ಹಾಗು ಹಾಗೆ ಬಂದವನೇ ಆ ನನ್ನ ತೊಟ್ಟಿಲೊಳಗಿನ ತೆರವಿದ್ದ ಆ ಎರಡನೇ ಸ್ಥಳದಲ್ಲೇ ಬಂದು ಕುಳಿತೆ! ಆದರೆ ಇಂದು ಅದಕ್ಕೆ ತೀರ ವಿಪರೀತವಾಗಿಯೇ ಘಟಿಸಿತು! ಅದು ಹೇಗೆಂದರೆ, ನೀನು ಈ ನಾವಿನಲ್ಲಿ ಮೊದಲು ಸ್ಥಳ ಹಿಡಿದು ಕುಳಿತುಕೊಂಡೆ; ಬಳಿಕ ಇದರೊಳಗಿನ ತೆರವಿದ್ದ ಈ ಎರಡನೇ ಸ್ಥಳವು ನನಗೆ ದೊರೆಕಿತು! ನೀನು ಅಂದಿನ ನನ್ನ ಸಾಲವನ್ನು ಇಂದು ತೀರಿಸಿದೆಯೆನಬೇಕು!"

"ಮೇ-ರೀ" ಚಂದುವು ಅವಳ ಕಡೆಗೆ ನೋಡುತ್ತ ತಡವರಿಸುತ್ತಲೇ ನುಡಿದನು:—"ಮೇರೀ! ಆದರೆ ನಾನು ಈ ಹೆಸರಿನಿಂದ ಬೇರೊಬ್ಬ ಸ್ತ್ರೀಯಳನ್ನು ಕರೆದು, ಅವಳ ಅವಮಾನ ಮತ್ತು ನನ್ನ ಫಜೀತಿಯನ್ನು ಮಾಡಿಕೊಳ್ಳುವದಿಲ್ಲವಷ್ಟೇ? ಬಾಈ, ನೀವು ಮೇರೀ ವೊಡಹಾಊಸರೇ ಹೌದೇನು? ನಾನೇನೂ ತಪ್ಪುತ್ತಿರುವದಿಲ್ಲವಷ್ಟೇ?"

"ಎಲೋ ಹುಚ್ಚಾ, ಚಂದೂ! ನಾನು ಮೇರೀ ವೊಡಹಾವೂಸಳಾಗಿರದಿದ್ದರೆ ಹೀಗೆ ನಾನಾಗಿ ಒಬ್ಬ ನೆಟಿವ್ನನ ಜೊತೆಗೆ ಈ ನಾವಿನಲ್ಲಿ ಬಂದು ಕುಳಿತುಕೊಳ್ಳುತ್ತಿದ್ದೆನೇ? ಚಂದೂ, ನಿನ್ನ ಭ್ರಮನಿರಸನಗೊಳಿಸಲಿಕ್ಕೆ ನಾನು ಇನ್ನಾವ ಗುರ್ತನ್ನು ನಿನಗೆ ಮನಗಾಣಿಸಲಿ? ಈ ಅಂಬಿಗರು ಹತ್ತಿರಿರುವರೆಂದು ಸುಮ್ಮನಿರಬೇಕಾಗಿದೆ; ಇಲ್ಲದಿದ್ದರೆ ಅಂಥ ಯಾವುದೊಂದು ಗುರ್ತನ್ನೇ ಮೇರೀ ವೊಡಹಾಊಸಳದೆಂದು ನಿನಗೆ ಮನಗಾಣಿಸಿ ಕೊಡದಿರುತ್ತಿರಲಿಲ್ಲ!" ಎಂದಂದು, ಅವಳು ಇನ್ನಿಷ್ಟು ಚಂದುವಿನೆಡೆಗೆ ಸರಿದು ಕುಳಿತಳು. ಇದನ್ನು ಕಂಡು ಆ ಅಂಬಿಗನು ಮತ್ತೆ:—"ಎಲಾ ಇವಳ! ಇವಳು ಈತನ ಮಗ್ಗುಲಲ್ಲೇ ಹೆಗ್ಗಣವು ಹೋರಿನಲ್ಲಿ ಸೇರುವಂತೆ ಹೋಗಹತ್ತಿದಳಲ್ಲ!" ಆ ಅಂಬಿಗರು ಕೊಂಕಣಿಗರಾದ್ದರಿಂದ ಅವರ ಭಾಷೆಯು ಚಂದೂ-ಮೇರಿಯರಿಗೆಂತು ಅವಗತವಾದೀತು?

ಆ ಸ್ತ್ರೀಯು:—"ಚಂದೂ, ಇಂದು ನೀನು ನನ್ನನ್ನು ಆಶ್ಚರ್ಯದಿಂದ ಥಕ್ಕಗೊಳಿಸಬೇಕೆಂದೇ ನಿನ್ನ ಮನಸ್ಸಿನಲ್ಲಿ ಯೋಚಿಸಿರುವಹಾಗೆ ಕಾಣುತ್ತದೆ."

"ಅದು ಹೇಗೆ?"

"ನನ್ನನ್ನು ಗುರ್ತಿಸದ ವೇಷವನ್ನು ಬಹು ಚನ್ನಾಗಿ ನಟಿಸುತ್ತಿರುವೆಯೆನಬೇಕು! ನೀನು ಮಾತಾಡುವಾಗ ಇಷ್ಟು ಅಂಜುವುದೇಕೆ? ತಡವರಿಸುತ್ತಿರುವುದೇಕೆ?"

"ಏನು? ಭೂತ-ಪಿಶಾಚಿಗಳೊಡನೆ ಮಾತನಾಡುವಾಗಲೂ ಹೆದರಬಾರದೇನು? ನೀನು ಮೇರೀ ವೊಡಹಾಊಸ ಆಗಿರದೆ, ಆಕೆಯ ಹೆಸರಿನ ಭೂತ

ವಾಗಿರಬೇಕು; ಯಾಕಂದರೆ, ಮೇರೀ ಪೊಡಹಾಊಸಳು ಸತ್ತ ಬಗ್ಗೆ ನನಗೆ ವಿಲಾಯತಿಯಿಂದ ಪ್ರತ್ಯೇಕ ತಂತಿಯೇ ಬಂದಿತ್ತು!''

"ಹೌದು; ಹಾಗಾದರೂ ಏನಾಯಿತೋ? ನಿಮ್ಮ ಹಿಂದುಗಳಿಗೆ ಪುನರ್ಜನ್ಮದಲ್ಲಿ ನಂಬುಗೆಯಿರುತ್ತದಷ್ಟೇ?"

"ಹೌದು; ಆದರೆ ಪುನರ್ಜನ್ಮ ಪಡೆದ ಆತ್ಮವು ಈ ಲೋಕದಲ್ಲಿ ಭೆಟ್ಟಿಯಾಗುವದಿಲ್ಲ; ಒಂದು ವೇಳೆ ಭೆಟ್ಟಿಯಾದರೂ ಹಳೇ ದೇಹದಿಂದ ಹಾಗು ವೇಷದಿಂದ ಭೆಟ್ಟಿಯಾಗದೆ. ಅದು ಬೇರೆ ರೂಪಧರಿಸಿರುತ್ತವೆ. ಮೇರಿಯು ಪುನರ್ಜನ್ಮವಾಗಿದ್ದರೆ ಅವಳು ನನಗೆ ಭೆಟ್ಟಿಯಾದಾಳು; ಆದರೆ ಕದಾಚಿತ್ ಯಾವುದೊಂದು ನಾಯಿಯ ಇಲ್ಲವೆ ಹಂದಿಯ ದೇಹದಿಂದ ಭೆಟ್ಟಿಯಾದಾಳು! ಮತ್ತು ತನಗೆ ಅಂಥ ಹೀನ ಅಪವಿತ್ರ ದೇಹ ದೊರೆತ ಬಗ್ಗೆ ಲಜ್ಜೆ ಮತ್ತು ಹೇಸಿಗೊಂಡು, ಅವಳು ನನ್ನ ಕಣ್ಣಿಗೆ ಬೀಳಲಿಕ್ಕೆ ಸಹ ತಪ್ಪಿಸಿಕೊಂಡಾಳು. ನಿನ್ನಂತೆ ಹೀಗೆ ನಾಚಿಕೆಗೇಡಾಗ ನನ್ನ ಮೈಗೆ ಮೈ ತಿಕ್ಕುತ್ತ ಎಂದಿಗೂ ಕೂಡ್ರಲಿಕ್ಕಿಲ್ಲ! ನಾನು ಕುಳಿತಿದ್ದ ನಾವೆಯಲ್ಲೇ ಬೇಕಂತ ಬಂದು ಹೀಗೆ ಅತಿ ಪ್ರಸಂಗವೆಸಗಲಿಕ್ಕಿಲ್ಲ."

ಹೀಗೆ ಮಾತನಾಡುವಾಗ ಚಂದೂನ ದನಿಯು ಸಿಟ್ಟಿನಿಂದ ಏರಹತ್ತಿತ್ತು. ಕೂಡಲೆ ಆತನು ಮೇರಿಯಿಂದ ಸರಿದು ಒಂದು ಫೂಟಿನ ಅಂತರದ ಮೇಲೆ ಹೋಗಿ ಕುಳಿತನು

ಅಂಬಿಗರು ಈ ಮೊದಲೇ ಸೀಡುಬಿಚ್ಚಿ ನಾವನ್ನು ಚಲಿಸಹತ್ತಿದ್ದರು; ಹಾಗು ಚುಕ್ಕಾಣಿಯನ್ನು ಹಿಡಿದಿದ್ದ ಅಂಬಿಗನು ಬಂದರವೊಳಗಿನ ಗೋಲಾಕಾರ ಮಾರ್ಗದಲ್ಲಿ ಅದನ್ನು ತಿರುಗಿಸುತ್ತಿದ್ದನು. ಸಂಜೆಯ ಗಾಳಿಯು ಬಿಟ್ಟದ್ದರಿಂದ ನೀರಲ್ಲಿ ತೆರೆಗಳೆದ್ದು ನಾವೆಯು ಹೆಚ್ಚು ಅಲ್ಲಾಡಹತ್ತಿತು. ಆದರಿಂದ ಒಳಗೆ ಕುಳಿತಿದ್ದ ಚಂದೂ ಹಾಗು ಮೇರಿಯರು ತಮ್ಮ ಸ್ಥಳಗಳಲ್ಲೇ ತೂಗಾಡಹತ್ತಿದರು ಆ ಒತ್ತರದ ತೂಗಾಟವೇ ನಾವುಗಳಲ್ಲಿ ಕೂಡ್ರುವ ಮುಖ್ಯ ಮೋಜು. ಅದನ್ನು ಪಡೆಯುವದಕ್ಕೆಂದೇ ಹುಮ್ಮಸದ ಸ್ತ್ರೀ-ಪುರುಷರು ಅಂಥ ನಾವುಗಳಲ್ಲಿ ಕುಳಿತು ಸಂಚರಿಸುತ್ತಾರೆ.

ಮೇರಿಗೆ ವಿಲಾಯತಿಯಲ್ಲಿ ಸಮುದ್ರದ ನೀರಿನ ಇಂಥ ತೂಗಾಟದ ರೂಢಿಯು ಇದ್ದೇ ಇತ್ತು. ಆದರಿಂದ ಅವಳು ಹೆದರಲಿಕ್ಕೆ ಕಾರಣವಿರಲಿಲ್ಲ. ಆದರೂ ಅವಳು ಅಂಜಿದ ಮಿಷಮಾಡಿ ಚಂದೂನ ಕಡೆಗೆ ಸರಿದು:-'ಚಂದೂ, ಡಾರ್ಲಿಂಗ, ಅಂದು ಆ ಜಾತ್ರೆಯೊಳಗೆ ತೊಟ್ಟಿಲದಲ್ಲಿ ಬವಳ ಬಂದಾಗ ನಿನ್ನೀ ಕೈಗಳ ಆಶ್ರಯವು ನನಗೆಷ್ಟು ಸುಖಕರವಾಗಿತ್ತಲ್ಲ! ಇಂದಾ

ದರೂ ನನಗೆ ಅದೇ ನಿನ್ನ ಆಶ್ರಯಬೇಕಾಗಿದೆ. ನನಗೀಗ ಬವಳಿ ಬಂದಿದೆ" ಎಂದೆಂದು, ಅವನ ಕೈಯನ್ನು ಗಟ್ಟಿಯಾಗಿ ಹಿಡಿದು ಆತನ ಹೆಗಲ ಮೇಲೆ ಗೋಣಿಟ್ಟಳು.

ಚಂದುವಿಗೆ ಆಕೆಯ ಆ ಅಪ್ರಿಯ ವರ್ತನವು ರುಚಿಸಲಿಲ್ಲ. ಅವಳನ್ನು ಆ ಅಂಬಿಗರೆದುರಿಗೆ ದೂರ ದೂಡುವುದೂ ವಿಹಿತವೆನಿಸುತ್ತಿರಲಿಲ್ಲ. ಅದರಿಂದ ಅವನು:—"ಇನ್ನು ಮುಂದೆ ಈ ಲೋಕದಲ್ಲಿ ಯಾವನ ಕೈಯು ಹಾಗು ಹೆಗಲ ಆಶ್ರಯ ಪಡೆಯುವ ಹಕ್ಕನ್ನು ನೀನು ಸಂಪಾದಿಸಿರುವೆಯೊ ಆ ನಿನ್ನ ಸಂಗಡಿಗನೆಲ್ಲಿದ್ದಾನೆ?"

ಚಂದುವು ಹೀಗೆ ಮೇರಿಯ ಮನಸ್ಸಿಗೆ ನಡಬೇಕೆಂದೇನೋ ಅಂದನು; ಆದರೆ ತನ್ನ ಸ್ಥಳದಲ್ಲಿ ಇನ್ನೊಬ್ಬನು ಆದೇಶನಾದನು; ಮೇರಿಯು ತನ್ನನ್ನು ಮೋಸಪಡಿಸಿದಳು, ನಗೆಗೇಡು ಮಾಡಿದಳು. ಇವುಗಳ ಬಗ್ಗೆ ಚಂದೂನ ಮನಸ್ಸಿನಲ್ಲಿ ಹೆಚ್ಚಾಗಿ ವೇದನೆಗಳಾದವು. ನಿಜವಾಗಿ ಹೇಳುವುದಾದರೆ, ಆತನು ವಿಲಾಯತಿಯಲ್ಲಿ ಪ್ರತಿಯೊಬ್ಬ ಸ್ತ್ರೀಯೊಡನೆ ವರ್ತಿಸುವಾಗ ಅತ್ಯಂತ ಸಂಭಾವಿತ ಹಾಗು ಗಂಭೀರ ವೃತ್ತಿಯನ್ನಿಟ್ಟಿದ್ದನು. ಆತನು ಅಲ್ಲಿಯ ಮಿಶ್ರ ಸಮಾಜದಲ್ಲಿ ಸೇರುತ್ತಿದ್ದನು. ಪಾರ್ಟಿ--ಸಮಾರಂಭಗಳಿಗೆ ಹೋಗುತ್ತಿದ್ದನು. ನಾಚಿನ ಮೋಜು ನೋಡಲಿಕ್ಕೆ ತಿಕೀಟು ಕೊಂಡುಕೊಳ್ಳುತ್ತಿದ್ದನು ಸಹ; ಆದರೆ ಪಾರ್ಶ್ವದಲ್ಲಿ ಕುಳಿತು ನಾಚು ನೋಡುವನೇ ಹೊರತು, ತಾನು ಸ್ವತಃ ಅದರಲ್ಲೊಂದೂ ಭಾಗವಹಿಸುತ್ತಿರಲಿಲ್ಲ; ಮತ್ತು ಮೇರೀವೊಡಹಾಲೂಸಳಿಗೂ ಅವನಿಗೂ ದೈವವು ಗಂಟು ಹಾಕದಿದ್ದರೆ, ವಿಲಾಯತಿಯಿಂದ ಆತನು ಕೇವಲ ನಿಷ್ಕಲಂಕನಾಗಿ ಹಿಂದಿರುಗುತ್ತಿದ್ದನು; ಆದರೆ ಮೇರಿಯಲ್ಲಿ ಬಹು ಮೋಹಕವಾದ ಮೋಹಿನಿಯಿದ್ದುದರಿಂದ ಅವಳು ಅವನಿಗೆ ಶರಯೂಳ ವಿಸ್ಮರಣವನ್ನುಂಟು ಮಾಡಿದಳು; ಹಾಗು ತನ್ನನ್ನು ಲಗ್ನವಾಗಲಿಕ್ಕೆ ಒಡಂಬಡಿಸಿದಳು. ತಾತ್ವಿಕ ದೃಷ್ಟಿಯಿಂದ ಮಿಶ್ರವಿವಾಹಕ್ಕೆ ಸಿದ್ಧವಾಗದಂತಹ ಮನಃಪ್ರವೃತ್ತಿಯು ಚಂದೂನದಿರಲಿಲ್ಲ. ಶರಯೂಳ ಸಂಬಂಧದ ವಾಙ್ನಿಶ್ಚಯವಾದದ್ದನ್ನು ಅವನ ತಂದೆ-ತಾಯಿಗಳೇ ಮಾಡಿದ್ದರು. ಶರಯೂಳ ಶರೀರಕ್ಕೆ ಇದುವರೆಗೆ ತನ್ನದೊಂದು ಬೊಟ್ಟಿನಿಂದ ಕೂಡ ಆತನು ಮುಟ್ಟಿರಲಿಲ್ಲ. ಅದಿರಲಿ. ವಿಲಾಯತಿಯಲ್ಲಿ ಮೇರಿಯೊಡನೆ ಆತನ ವಾಙ್ನಿಶ್ಚಯವಾಗಿದ್ದರೂ ಸಂಭಾವಿತ ವಧು-ವರರು ಸಾಮಾನ್ಯ ಪ್ರಕಾರದ ಯಾವ ಪ್ರಣಯಲೀಲೆಗಳನ್ನೆಸಗುವರೋ, ಅದಕ್ಕೂ ಮುಂದಿನ ಮೆಟ್ಟಿಲಿಗೆ ಚಂದುವು ಹೋಗಿರಲಿಲ್ಲ! ಆತನು ಮುಂದುವರಿಯಬೇಕೆಂದಿದ್ದರೆ ಅವನಿಗೆ ಬೇಡವೆನ್ನು

ವವರಾರಿದ್ದರು? ಮೇರಿಯಂತೂ ಸ್ವೈರವೃತ್ತಿಯವಳೂ ಎಲ್ಲ ಬಗೆಯಿಂದ ಸ್ವತಂತ್ರಳೂ ಆಗಿದ್ದಳು; ಆದರೆ ಆ ಉಭಯತರ ಪ್ರಣಯ ಲೀಲೆಗಳು ಮೇರಿದಷ್ಟು ದಂತೆ ವರ್ತಿಸುವ ಶ್ರೇಯಸ್ಸೆಲ್ಲ ಚಂಪೂವಿಗೇ ಇತ್ತು. ಆತನ ವಿಷಯದ ಹೆಚ್ಚಿಯು ಮುಂದಕ್ಕೆ ಬಿದ್ದದ್ದೇ ಆದರೆ, ಅದು ತಾನು ಅವಳೊಡನೆ ಲಗ್ನವಾಗುವ ವಚನ ಕೊಡುವಲ್ಲಿ; ಹಾಗು ಅವಳಿಂದ ಆ ವಚನ ಪಡೆಯುವಲ್ಲಿ ಆಗಿತ್ತು. ಆ ಎಲ್ಲ ಸಂಗತಿಗಳ ಮೂಲಕ ಮೇರಿಯು ತನಗೆ ಅತ್ಯಂತ ಅನ್ಯಾಯ ಮಾಡಿದಳು, ಮೂರ್ಖರಲ್ಲಿ ಗಣಿಸಿದಳು ಎಂದು ತಿಳಿದು ಚಂಪೂವಿಗೆ ದುಃಖವಾಯಿತು; ಆದರೆ ಆ ದುಃಖಕ್ಕಿಂತಲೂ ಆತನಿಗೆ ಸಿಟ್ಟು ಹೆಚ್ಚಿಗೆ ಬಂದು ಅದರಿಂದ ಅವನು:—"ಮೇರೀ, ನೀನು ಸ್ತ್ರೀಯಿದ್ದು, ಒಂದು ಕಾಲಕ್ಕೆ ನನ್ನ ಪ್ರೇಯಸಿಯಾಗಿದ್ದೆ. ಅದರಿಂದ ನಿನ್ನೊಡನೆ ಇದಕ್ಕೂ ಹೆಚ್ಚು ಕಠೋರತನದಿಂದ ವರ್ತಿಸಲಾರೆನು ನೀನು ಈಗ ನನ್ನ ಮೇಲೆ ಇಷ್ಟೇ ಉಪಕಾರ ಮಾಡು; ನಿನ್ನ ಮೃತ್ಯು ಸಂಬಂಧದ ತಂತಿಯನ್ನು ನನಗೆ ನೀನೇ ಕಳಿಸಿದ್ದೆಯೋ ಅಥವಾ ಇನ್ನಾರಾದರೂ ಕಳಿಸಿದ್ದರೋ? ಇದನ್ನು ಮನಬಿಚ್ಚಿ ಹೇಳು ನೋಡೋಣ"

ಮೇರಿ:—ನಿನ್ನ ಪ್ರೇಮುಲತನವನ್ನು ಕಂಡು ನಿನ್ನ ಮೇಲೆ ದೇಹವನ್ನೇ ನಿವಾಳಿಸಿ ಬಿಡಬೇಕೆಂದು ನನಗನಿಸುತ್ತದೆ; ಆದರೆ ದೈವದುರ್ವಿಪಾಕಕ್ಕೆ ಹೊಣೆಯಾರು? ನಿನ್ನ ಕೊನೆಯ ಭೆಟ್ಟಿಯಾದ ಮೇಲೆ ನಾನು ಸಹಜವಾಗಿ ಒಂದು ಬುಕ್ಕಿನ ಅಂಗಡಿಗೆ ಹೋದೆನು. ಅಲ್ಲಿ ಹಿಂದುಸ್ಥಾನ ಸಂಬಂಧದ ಕೆಲ ಪುಸ್ತಕ ಕೊಳ್ಳುವದನ್ನು ನಿರ್ಧರಿಸಿ, ಅಲ್ಲಿಯ ಬೀರುಗಳಲ್ಲೆಲ್ಲ ನೋಡಿದೆನು ಅವುಗಳಲ್ಲಿ ದೊರೆತ ಪುಸ್ತಕಗಳಲ್ಲಿ ಹಿಂದುಸ್ಥಾನದೊಳಗಿನ ಕೊಳಚಿ ನೀರಿನ ಪ್ರವಾಹಗಳು, ಹಾವು ಚೇಳುಗಳ ವಾಸ್ತವ್ಯ, ಹುಲಿ-ಸಿಂಹಗಳ ನಿವಾಸ ಮುಂತಾದ ಭೀಷಣ ವರ್ಣನಗಳಿದ್ದವು. ಅವುಗಳನ್ನೋದಿ ನನ್ನ ಮೈ ಮೇಲೆ ಮುಳ್ಳುಗಳೇ ಎದ್ದವು. ಹಿಂದುಸ್ಥಾನದೊಳಗಿನ ಮಾಟಗಾರ್ತಿಯರು ಮನುಷ್ಯರಿಗೆ ಹುಚ್ಚು ಹಿಡಿಯುವಂತೆ ಮಾಡುತ್ತಾರೆಂದೂ, ಯೋಗಿಗಳು ತಮ್ಮ ಸಾಮರ್ಥ್ಯದಿಂದ ಭೂತ-ಪಿಶಾಚಿಗಳು ಹಗಲು ಹಾಡಿನಲ್ಲೇ ಗೊಂದಲವೆಬ್ಬಿಸುವಂತೆ ಮಾಡುವರೆಂದೂ ಆ ಪುಸ್ತಕಗಳಲ್ಲಿ ಓದಿದೆನು. ಬಳಿಕ ನಿನ್ನಲ್ಲಿ ಪ್ರೇಮವಿದ್ದರೂ ಕೂಡ ಇಂಥ ಭಯಂಕರವಾದ ಹಿಂದುಸ್ಥಾನದಲ್ಲಿ ಇಡೀ ಜನ್ಮವನ್ನು ಕಳೆಯುವ ಕಲ್ಪನೆಯು ಹೇಗೆ ಹೇಗೋ ಅನಿಸಿತು. ಆ ಮೇಲೆ ನಿನ್ನ ಪ್ರೇಮಪಾಶವನ್ನು ಹೇಗೆ ಹರಿದೊಗೆಯಬೇಕೆಂದು ಆಲೋಚಿಸಿದೆನು; ಆಗ ನಾನು ನಿಶ್ಚಯಿಸಿದ್ದೇನಂದರೆ, ನಾನು ಸತ್ತ ತಂತಿಯನ್ನೇ ನಿನಗೆ ಕಳಿಸಬೇಕು; ಅಂದರೆ ನಿನಗೆ ಎಲ್ಲಕ್ಕೂ ಮಿಗಿಲಾದ ತೀಕ್ಷ್ಣ ದುಃಖವು ಒಮ್ಮೆಲೇ ಆಗಿಬಿಟ್ಟೀತು; ಹಾಗೆ ಆ

ಮೇಲೆ ನೀನು ನನ್ನನ್ನು ಮರೆತು ಬಿಡುವೆ!"

'ಹೇಗೋ?' ಚಂದುವು ಒಳ್ಳೇ ಗಟ್ಟಿಯಾಗಿ ಅಂದು:-- "ಅಂದರೆ ಆ ಮಿಗಿಲಾದ ದುಃಖದಲ್ಲಿ ನೀನು ಬೇರೆಯುವನೊಡನೆ ಲಗ್ನವಾದ ಗೌಣ ದುಃಖವು ಸಹಜವಾಗಿಯೇ ಬೆರೆತು ಹೋಗಬೇಕೆಂದಲ್ಲವೇ? ಆನೆಯ ಕಾಲೊಳಗೆ ಎಲ್ಲ ಪ್ರಾಣಿಗಳ ಕಾಲುಗಳೂ ಸಮಾವೇಶವಾಗುವಂತೆ, ಮೃತ್ಯುವಿನ ದುಃಖದಲ್ಲಿ ಪ್ರೇಮಭಂಗದ ದುಃಖವೂ ಕೂಡಿ ಹೋಗುತ್ತದಲ್ಲವೇ? ಅದಿರಲಿ. ನಿನ್ನ ಮೃತ್ಯುವಿನ ಸಂಗತಿ ಸುಳ್ಳಾದ ಬಳಿಕ ಯುನಿಯನ್ ಚರ್ಚಿನಲ್ಲಿ ನಿನ್ನ ಪ್ರೇತಸ ಸ್ಕಾರವಾದ ಸಂಗತಿಯೂ ಸುಳ್ಳೇ ಇರಬೇಕು; ಆದರೆ ಆ ಸಂಗತಿಯು ನಿನ್ನ ತಂತಿಯಲ್ಲೇಕೆ ಇತ್ತು?"

ತಾನು ನುಡಿಯುತ್ತಿರುವುದೇನೂ ವಿಶೇಷವಲ್ಲ, ಎಂಬ ನಾಚಿಕೆಗೇಡಿತನದಿಂದ ಮೇರಿಯು:--"ಒಂದು ಸುಳ್ಳಿನ ಗರ್ಭದಲ್ಲಿ ಹಲವು ಸಳ್ಳುಗಳು ಇರತಕ್ಕವೆ! ಯೂನಿಯನ್ ಚರ್ಚಿನಲ್ಲಿ ಅಂದು ಹೂಳಲ್ಪಟ್ಟದ್ದು ನನ್ನ ಪ್ರೇತವಾಗಿರದೆ, ನಿನಗೆ ಕೊಟ್ಟದ್ದ ಲಗ್ನದ ವಚನವು; ಹಾಗು ಆ ಚರ್ಚಿನಲ್ಲಿ ಅಂದು ನಿಜವಾಗಿ ಘಟಿಸಿದುದು ನನ್ನ ಮದುವೆಯು."

"ಹಾಗಾದರೆ ನಿನ್ನಂಥ ನಂಬಿಗೆಯ ರಮಣಿಯನ್ನು ತನ್ನ ಸಹಚರಿಣಿಯನ್ನಾಗ ಮಾಡಿಕೊಂಡಿರುವ ಆ ಭಾಗ್ಯವಂತ ಪುರುಷನಾರು? ಇಷ್ಟರಲ್ಲೇ ಆತನಿಗೂ ಮಂಕು-ಬೂದಿ ಹಚ್ಚಿ ನೀನು ಹಿಂದುಸ್ತಾನಕ್ಕೆ ಬಂದೆಯಾ?"

"ಇಲ್ಲೋ. ಹೀಗೆ ನಿಷ್ಠುರವಾಗಿ ಮಾತನಾಡಬೇಡ. ನಾನು ಸಿನೇಮಾ ನಟಿಯಾಗಿ ನನ್ನ ದೈವಪರೀಕ್ಷೆ ಮಾಡಿಕೊಳ್ಳುವ ಸಾಹಸವಿದ್ದಿತು; ಮತ್ತು ಅದು ಸಾಧಿಸಬೇಕೆಂದು ನಾನು ಇಂಗ್ಲಂಡದೊಳಗಿನ ಒಂದು ಸುಪ್ರಸಿದ್ಧ ಸಿನೇಮಾ ಕಂಪನಿಯ ಮ್ಯಾನೇಜರನೊಡನೆ ಲಗ್ನವಾದೆನು. ಆತನೂ ನಾನೂ ಕೂಡಿ ಆಸ್ಟ್ರೇಲಿಯಕ್ಕೆ ಹೊರಡುತ್ತೇವೆ; ಯಾಕಂದರೆ, ನಮ್ಮ ಚಿತ್ರಪಟದ ಮುಂದಿನ ಕಥಾನಕವು ಆ ದೇಶದೊಳಗಿನ ಜೀವನದೊಳಗಿಂದಲೇ ಆರಿಸಲ್ಪಟ್ಟದೆ. ಅಲ್ಲಿಯ ಕಾಡಿನಲ್ಲಿ ನಮ್ಮಗಳ ಶೂಟಿಂಗು ಹೆಚ್ಚಾಗಿ ನಡೆಯಬೇಕಾಗಿದೆ."

"ಆ ಶೂಟಿಂಗವು ಬೇಟೆಯೊಳಗಿನದೋ-ಸಿನೇಮಾದ್ದೋ?" ಎಂದು ಚಂದುವು ನಗುತ್ತ ಕೇಳಿದನು.

"ಇಬ್ಬಗೆಯದೂ ಇದೆ; ಆದರೆ ನಿನಗೇಕೆ ನಗೆ ಬಂತು?" ಮೇರಿಯು ಕೇಳಿದಳು.

"ಹಿಂದುಸ್ತಾನದೊಳಗಿನ ಕ್ರೂರ ಶ್ವಾಪದಗಳಿಂದ ಉಳುಕೊಳ್ಳಲಿಕ್ಕೆಂದು

ನೀನು ನನ್ನ ಪ್ರೇಮಭಂಗ ಮಾಡಿದಂತೆ ಅಲ್ಲಿಯ ಶ್ವಾಪದವು ನಿನ್ನ ಮೇಲೆ ಹಾರಿದರೆ? ಈ ಬಗ್ಗೆ ನೀನೇನಾದರೂ ಆಲೋಚಿಸಿರುವೆಯಾ?''

ಚಂದುವಿಗೆ ಅವಳು ಈಗ ತೀರ ಬೇಸರದ ವಿಷಯವಾದ್ದರಿಂದ ಯಾವುದೊಂದು ಶ್ವಾಪದವು ತನ್ನ ಎದುರಿನಲ್ಲೇ ನಿಜವಾಗಿಯೂ ಅವಳ ಮೇಲೆ ಹಾರಿದ್ದರೂ, ಅವಳು ಇವನನ್ನು ಸಹಾಯಕ್ಕೆ ಕರೆದಿದ್ದರೂ ಇವನು ಗುರುಪುಂಜಾರಾಜರಎದುರು ಮಾಡಿದ ಅಹಿಂಸೆಯ ಆಣೆಯ ನೆನಪನ್ನು ಆಗ ಹೇಳದಿರುತ್ತಿರಲಿಲ್ಲ! ಆದರೆ ಅವೇನನ್ನೂ ತೋರಗೊಡದೆ ಆತನು:—''ಮೇರೀ, ಇನ್ನು ಆ ತಂತಿಯೊಳಗಿನ ಕೊನೆಯ ವಾಕ್ಯದ ಅರ್ಥವನ್ನಷ್ಟೇ ತಿಳಕೊಳ್ಳುವದುಳಿದಿದೆ. ನೀನು ಸಾಯುವಾಗ ನಿನ್ನ ನಾಲಿಗೆಯ ಮೇಲೆ ನನ್ನ ಹೆಸರಿತ್ತು ಅಂದರೇನು?''

''ಇದರಲ್ಲೇನು ಗೂಢವಿದೆ? ನಮ್ಮಂಥ ವಿವಾಹೋತ್ಸುಕ ತರುಣಿಯರ ನಾಲಿಗೆಯ ಮೇಲೆ ಯಾವುದೊಂದು ಹೊಸ ಹೆಸರು ಬರುವ ವರೆಗೆ ಯಾವುದೊಂದು ಹಳೇ ಹೆಸರು ಇರಬೇಕಾಗುತ್ತಿರುವಂತೆ, ಆಗ ನಿನ್ನ ಹೆಸರಿದ್ದಿತು. ಇದರಲ್ಲಿ ಸುಳ್ಳು ಏನೂ ಇರುವುದಿಲ್ಲ.''

ಮೇರಿಯು ಆ ತಂತಿಯ ಸಂಗತಿಯನ್ನು ಅಷ್ಟು ಸಿರಾಲೋಚನೆಯಿಂದ ವಿವರಿಸಿದ್ದನ್ನು ಕೇಳಿ ಚಂದೂನ ಮನಸ್ಸಿನ ಮೇಲೆ ಘನ್ನಿನ ಪೆಟ್ಟುಗಳು ಬೀಳುತ್ತಿರುವಂತೆ ಅನಿಸಿತು. ಮನುಷ್ಯ ಜೀವನದ ಬಗ್ಗೆ ಅವನಿಗೆ ಚಮತ್ಕಾರವೆನಿಸಿತು. ತನ್ನ ಸರಳ ಹಾಗು ಒಮ್ಮುಖ ಮನಸ್ಸಿನ ಬಗ್ಗೆ ಆತನು ಹೇಯಗೊಂಡನು. ಸ್ವಪ್ನಕಂಡ ಬಳಿಕ ಎಚ್ಚರಿಕೆಯಾಗುವವರ ಹಾಗೆ ಆತನ ಮನಃಸ್ಥಿತಿಯಾಯಿತು.

''ನಿನ್ನ ಹೊಸ ಹೆಸರು ಏನೆಂದಿದೆ? ಅದು ಕೂಪರವಲ್ಲವೆ? ನಾನು ಇದುವರೆಗೆ ನಿನ್ನ ಹಳೇ ಹೆಸರಾದ ಮಿಸ್ ಮೇರೀ ವೂಡಹಾಊಸ ಎಂದೇ ಸಂಬೋಧಿಸಿದೆನು ಆ ಬಗ್ಗೆ ನನ್ನನ್ನು ಕ್ಷಮಿಸು; ಆದರೆ ನಿನಗೆ ಹೇಳತಕ್ಕದ್ದಿಷ್ಟೇ, ಹಿಂದುಸ್ತಾನದ ವಿಷಯಗಳ ಪುಸ್ತಕದಿಂದ ಎಂದು ನನ್ನ ದೇಶದ ಯಾವ ವರ್ಣನೆಯನ್ನು ನೀನು ಮಾಡಿದೆಯೋ ಅದು ನಿಜವಲ್ಲ ಅದರ ವಿರುದ್ಧವಾಗಿ ವಿಲಾಯತಿಯಲ್ಲಿ ಸರ್ಪವಿಲ್ಲೆಂದೆನ್ನುವವರ ಮಾತೂ ನಿಜವಿಲ್ಲ; ಯಾಕೆಂದರೆ, ನಿನ್ನ ಸಹವಾಸದ ನಂತರ ನನಗಾರಾದರೂ ಕೇಳಿದರೆ ನಾನು ಅವರಿಗೆ 'ಇಂಗ್ಲಂಡದಲ್ಲಿ ಸರ್ಪ ಜಾತಿಯ ಪ್ರಾಣಿಗಳಿವೆ; ಹಾಗು ಅವುಗಳಲ್ಲಿಯ ಕೆಲವು ಹೆಣ್ಣು ನಾಗರಹಾವುಗಳಿಗೆ ಮನುಷ್ಯ ವಾಣಿಯೂ ಇದೆ.' ಎಂದು ಹೇಳೇನು ಹಿಂದುಸ್ತಾನದ ಅಪೂರ್ವ ಮಾಹಿತಿ ದೊರಕಿಸುವ ಪುಸ್ತಕ ಕೊಂಡು ಕೊಳ್ಳಲಿಕ್ಕೆ ನಾನು ಕಳಿಸಿದ ಮುನ್ನೂರು ಪೌಂಡುಗಳು ಸಾಕಾಗದಿದ್ದರೆ ಹೇಳು. ನಿನಗೆ

ಮುಕ್ತಿಕೊಡುವೆನು; ಯಾಕಂದರೆ, ನಮ್ಮ ಹಿಂದೂ ಧರ್ಮಶಾಸ್ತ್ರದಲ್ಲಿ ಪ್ರಾಯಶ್ಚಿತ್ತದ ವಿಧಿಯೊಳಗೆ ದ್ರವ್ಯದಾನಕ್ಕೆ ಪ್ರಥಮಸ್ಥಾನವನ್ನು ಕೊಡಲಾಗಿದೆ.''

ಈಗ ಅವರ ಆ ಸಂಭಾಷಣಕ್ಕೆ ಅಪ್ರಿಯವಾದ ಸುತ್ತು ಸುತ್ತಹತ್ತಿದುದು ಸ್ಪಷ್ಟವಾಯಿತು; ಆದರೆ ಇಷ್ಟರೊಳಗೆ ಬಂದರದೊಳಗಿನ ಸಂಚಾರವನ್ನು ಮುಗಿಸಿ ಆ ನಾವು ದಂಡೆಗೆ ಬಂತು. ಆ ನಾವಿನೊಳಗಿಂದ ಮೇರಿಯೇ ಮೊದಲಿಳಿದಳು. ಅದರಿಂದ ಈಗ ಯಾರೂ ಯಾರಿಗೆ ಕೈಕೊಟ್ಟು ಇಳಿಸಿಕೊಳ್ಳುವ ಅವಶ್ಯಕತೆಯೇ ಉಳಿಯಲಿಲ್ಲ. ಇಬ್ಬರೂ ಮೆಟ್ಟಿಲುಗಳನ್ನು ಹತ್ತಿ ಮೇಲಕ್ಕೆ ಹೋದರು. ಅಷ್ಟರಲ್ಲಿ ಅಲ್ಲೊಬ್ಬ ಚಿಂಗಿಬಿಂಗಿ ವೇಷದ ಇಂಗ್ಲಿಷ ತರುಣನು ನಿಂತಿದ್ದನು ಅವನನ್ನು ಕಂಡೊಡನೆಯೇ ಮೇರಿಯು:—''ಟಾಮ್, ಬಂದರದೊಳಗಿನ ವಾಯುಸಂಚಾರವು ಎಷ್ಟು ಚನ್ನಾಗಾಯಿತೆನ್ನಲಿ!'' ಎಂದಂದಳು.

ಅದಕ್ಕೆ ಆ ತರುಣನು:—'ಅದನ್ನೇನು ಕೇಳಬೇಕು? ಇವನಂತಹ ಯುವಕ ಸಂಗಡಿಗನೊಡನೆ ನಿನ್ನಂತಹ ಹುಮ್ಮಸದ ತರುಣಿಯ ಸಮಯವು ಆನಂದದಲ್ಲೇ ಕಳೆಯುವುದು! ಆದರೆ ನಿಮ್ಮಿಬ್ಬರಿಗೂ ಅದೇ ನಾವಿನಲ್ಲಿ ಹೇಗೆ ಗಂಟು ಬಿತ್ತು?''

ಮೇರಿ:—''ಅಪ್ಪಾ, ಇವೆಲ್ಲ ಯೋಗಾಯೋಗಗಳಿರುತ್ತವೆ! ಈ ಯುವಕನಿಗೂ ನನಗೂ ವಿಲಾಯತಿಯಲ್ಲಿ ಗುರ್ತಾಗಿತ್ತು; ಆದರೆ ಇಷ್ಟರಲ್ಲಿ ಈ ಮುಂಬೈಯೊಳಗೆ ಆ ಗುರ್ತಿನ ಉಜಳಣಿಯಾದೀತೆಂದು ಸ್ವಪ್ನದಲ್ಲೂ ಅನಿಸಿರಲಿಲ್ಲ.''

ಚಂದುವು ಅಲ್ಲಿ ಹೆಚ್ಚು ವೇಳೆ ನಿಲ್ಲಲಿಲ್ಲ; ಅವಳಿಗೆ ಶೇಕ್‌ಹ್ಯಾಂಡ್ ಕೊಡಲು ತನ್ನ ಕೈ ಕೂಡ ಮುಂದೆ ಮಾಡಲಿಲ್ಲ; ಆದರೆ ಮೇರಿಯು ಮಾತ್ರ ಆತನ ಕಡೆಗೆ ನೋಡಿ ನಸುನಗುತ್ತ ತನ್ನ ಎರಡೂ ಬೊಟ್ಟುಗಳನ್ನು ತುಟಿಗೆ ಹಚ್ಚಿ ಅವುಗಳನ್ನು ಚುಂಬಿಸಿ ತನ್ನ ಪುರುಷದಾಕ್ಷಿಣ್ಯವನ್ನು ಪ್ರಕಟಿಸಿದಳು ಚಂದುವು ಬರಿಯ ಗೋಣು ಅಲ್ಲಾಡಿಸಿ ಅದನ್ನು ಸ್ವೀಕರಿಸಿದನು; ಹಾಗು ಹಿಂದಿರುಗಿದವನೇ ಸಮೀಪದ ಟ್ಯಾಕ್ಸಿಗಳ ನಿಲ್ದಾಣದ ಕಡೆಗೆ ತೆರಳಿದನು

ಆಗ ಆದದ್ದೆಲ್ಲವೂ ಆಕಸ್ಮಿಕವಾಗಿಯೇ ಆಗಿತ್ತು; ಆದರೆ ಅದರಿಂದ ಚಂದುವು ಮನಸ್ಸಿನಲ್ಲಿ ಹೆಚ್ಚಾಗಿ ನಾಚಿಕೊಂಡದ್ದರಿಂದ ಅವನಿಗೆ ಜ್ವರ ಬಂದವು. ಅವನು ಹೇಗಾದರೂ ಹೋಗಿ ಟ್ಯಾಕ್ಸಿಯನ್ನೊಮ್ಮೆ ಹಿಡಿದನು; ಹಾಗು ಅವನು ಸರದಾರ ಗೃಹಕ್ಕೆ ಹೋಗಿ ಹಾಸುಗೆಯ ಮೇಲೆ ಬಿದ್ದುಕೊಂಡನು. ಅಲ್ಲಿ ಅವನಿಗೆ ಹೆಚ್ಚಾಗಿ ಜ್ವರವೇರಿತು. ಪ್ರೇಮುಲ ಆದರೆ ಗಂಭೀರವೃತ್ತಿಯ ಆ ತರುಣನಿಗದೊಂದು ಧಕ್ಕೆಯೇ ತಗಲಿದಂತಾಯಿತು!

---

ಚಂದುವು ಅಂದು ರಾತ್ರಿಯಲ್ಲಿ ಜ್ವರದಿಂದ ಬಳಲಿದನು. ಆತನ ನೌಕರನು ಡಾಕ್ಟರನನ್ನು ಬರಮಾಡಬೇಕೇನೆಂದು ಕೇಳಲು-ಬೇಡ, ನಾಳೆ ನೋಡೋಣ, ಎಂದನು. ಮನಃಸಂತಾಪದಿಂದುಂಟಾದ ಆತನ ಜ್ವರವು ಮರುದಿನ ಬೆಳಗಾಗುವಷ್ಟರಲ್ಲಿ ತನ್ನಷ್ಟಕ್ಕೆ ತಾವೇ ಕಡಿಮೆಯಾದವು. ಮರುದಿನ ಮುಂಬೈಯಿಂದ ಹೊರಟು ಚೋದ್ಯಪುರಕ್ಕೆ ಹೋದನು. ಅಲ್ಲಿ ಜ್ವರ ಬಂದಿತ್ತೆಂಬದನ್ನು ಕೇಳಿ ಆತನ ತಂದೆ ತಾಯಿಗಳಿಬ್ಬರೂ ಗಾಬರಿಗೊಂಡರು ಅವರು ಡಾಕ್ಟರ ಜಾಂಲಂದರನನ್ನು ಕರೆಸಿದರು. ಚಂದುವು ಆತನ ಕಿವಿಯಲ್ಲಿ—“ಗೆಳೆಯಾ, ಇವರ ಸಮಾಧಾನಕ್ಕಾಗಿ ನನಗೆ ಏನಾದರೂ ಸಾದಾ ಔಷಧ ಕೊಡು. ನನ್ನ ಜ್ವರವು ನಿಂತಿವೆ. ಅದರ ಕಾರಣವನ್ನು ಮಾತ್ರ ನಾನು ನಿನಗೆ ಆ ಮೇಲೆ ತಿಳಿಸುವೆನು.” ಎಂದು ಹೇಳಿದನು. ಚಂದುವು ಮುಂದೆ ೨-೩ ದಿನಗಳಲ್ಲೇ ತನ್ನ ನೌಕರಿಯ ಊರಿಗೆ ಹೊರಟನು. ಅವನು ಹೊರಡುತ್ತಲೆ ಆತನ ಸಂಸಾರ ಹೂಡಿಕೊಡುವ ಪ್ರಶ್ನೆ ಹೊರಟಿತು ಆಗ ಮಾಸಾಹೇಬರಿಗೆ ಆತನ ಲಗ್ನದ ವಿಚಾರ ಉಂಟಾದದ್ದು ಸ್ವಾಭಾವಿಕವಾಗಿತ್ತು. ಆಗ ಜಾಲಂದರನು:—“ಮಾಸಾಹೇಬ, ಆ ಬಗ್ಗೆಯೂ ನಾನು ಹೇಳಿದಂತೆ ಹಂಚಿಕೆಮಾಡಿರಿ.”

ವಿಚಾರವಿನಿಮಯವಾಗಿ, ಆ ಹಂಚಿಕೆಯು ಹೀಗೆಂದು ಗೊತ್ತಾಯಿತು: ಮೊದಲು ರಾಯಬಹಾದ್ದೂರರೊಬ್ಬರೇ ಚಂದೂನ ಸಮಾಚಾರಕ್ಕಾಗಿ ಬರಬೇಕು; ಆ ಮೇಲೆ ಅವರ ಮನೆಯ ಹೆಂಡತಿ-ಮಕ್ಕಳು ಬರಬೇಕು. ಅದರಂತೆ ರಾಯಬಹಾದ್ದೂರರು ಬಂದು ಚಂದೂನನ್ನು ಕಂಡರು ಚಂದುವು ಅವರೊಡನೆ ಕೇವಲ ಹಳೇ ನೆಂಟಸ್ತರೊಡನೆ ಮಾತಾಡುವಂತೆ ಆಡಿದನು. ಆತನ ನೌಕರಿಯ ಸ್ಥಳವು ಶಾಮಪುರಜಿಲ್ಲೆಯೊಳಗಿದ್ದಿತು. ಆ ಊರು ರಾಯಬಹಾದ್ದೂರರ ಮೂಲ ನಿವಾಸಸ್ಥಳವು; ಅಲ್ಲಿ ಅವರ ಜಮೀನದಾರಿಕೆಯೂ ಊರೊಳಗಿನ ಹಳೇ ವಾಡೆಯೂ ಹಾಗು ಊರಹೊರಗೆ ಹೊಸಪದ್ಧತಿಯ ಬಂಗ್ಲೆಯೂ ಇದ್ದವು. ಆಗ ರಾಯಬಹಾದ್ದೂರರು:—“ಅಲ್ಲಿಯ ಊರಹೊರಗಿನ ನಮ್ಮ ಬಂಗ್ಲೆಯು ತೆರವಿದೆ ನಿಮ್ಮ ಅಡ್ಡಿಯಿಲ್ಲದಿದ್ದರೆ ಅದನ್ನು ನಿಮ್ಮ ನಿವಾಸಕ್ಕಾಗಿ ಸಿದ್ಧಗೊಳಿಸುತ್ತೇನೆ.” ಚಂದುವು ಅದಕ್ಕೆ ನಕಾರ ಹೇಳಲು ಕಾರಣವೇನು?

ಮರುದಿನ ಅಪರಾಹ್ಣ ಕಾಲದಲ್ಲಿ ಚಂದುವು ಮಂಚದ ಮೇಲೆ ಅಡ್ಡಾಗಿಯೇ ಅಂದಿನ ವೃತ್ತಪತ್ರಗಳನ್ನು ನೋಡುತ್ತಿದ್ದನು. ಅಷ್ಟರಲ್ಲಿ ಮಾಸಾಹೇಬರು ರಾಯಬಹಾದ್ದೂರರ ಹೆಂಡತಿ ಹಾಗು ಅವರ ಮಗಳಾದ ಶರಯೂ ಇವರೊಡನೆ ಅಲ್ಲಿಗೆ ಬಂದರು. ಅವರುಗಳಲ್ಲಿ ಪರಕೀಯರಾರೂ ಇರಲಿಲ್ಲ; ಆದರೆ ಮಧ್ಯಂ

ತರದಲ್ಲಿ ಉಂಟಾದ ವಿಚ್ಛೇದದಿಂದ ಪರಕೀಯತ್ವದ ಸಂಕೋಚವುಂಟಾದು ದೇನೋ ನಿಜ; ಅಲ್ಲದೆ ವಧುಪಕ್ಷವು ಯಾವಾಗಲೂ ನಮ್ರವಾಗಿಯೇ ಇರಬೇಕಾಗುವದು. ಇರಲಿ. ಆ ಮೂವರ ಖುರ್ಚಿಗಳೂ ಒಂದಕ್ಕೊಂದು ಸಮೀಪದಲ್ಲಿರಿಸಿದ್ದು, ಬಾಗಿಲ ಬಳಿಯ ಪರದೆಯನ್ನು ಇಳಿಸಲಾಗಿತ್ತು.

ಮಾತಾಡುವ ಕೆಲಸವನ್ನು ಮಾಸಾಹೇಬರು ತಮ್ಮ ಕಡೆಗೇ ಇಟ್ಟುಕೊಂಡಿದ್ದರು. ರಾಯಬಹಾದ್ದೂರರ ಹೆಂಡತಿಯು ನಡುನಡುವೆ ಯಾವುದೊಂದು ಶಬ್ದವನ್ನು ಮೌನದ ನಂಜು ಮುರಿಯಲಿಕ್ಕೆ ಮಾತಾಡುವಂತೆ ಆಡುತ್ತಿದ್ದರು! ಆದರೆ ಆಗ ಮೌನಗೌರೀ ವ್ರತವನ್ನು ಸ್ವೀಕರಿಸಿದವಳು ಶರಯೂಳೊಬ್ಬಳೇ. ಚಂದುವು ನಿಯೋಜಿತ ವರನು; ಅವನು ಸ್ವಂತಃ ಆಕೆಗೂ ಒಪ್ಪಿತನಾದವನೇ ಆಗಿದ್ದನು. ಇಬ್ಬರೂ ಸಮನಾದ ಅನುರೂಪರು-ತುಲ್ಯಗುಣಿಗಳು; ಆದರೆ ಚಂದುವು ಮಧ್ಯದಲ್ಲಿ ಲಗ್ನಕ್ಕೆ ಹಿಂದೆಗೆದಿದ್ದನು; ಪ್ರೇಮವನ್ನು ಕಡಿಮೆ ಮಾಡಿದ್ದನು. ಈ ಬಗ್ಗೆ ಶರಯೂಳಿಗೆ ಮನಸ್ಸಿನಲ್ಲಿ ಕೋಪ ಬಂದಿರಲಾರದೇ? ಅವಳಿಗೇನು ಸ್ವಾಭಿಮಾನವಿರಲಿಲ್ಲವೆ? ಚಂದೂನ ಬದಲು ಶರಯೂಳೇ ಗೊತ್ತಾದ ಲಗ್ನಕ್ಕೆ ಅಸಮ್ಮತಿ ತೋರಿದ್ದರೆ, ಚಂದುವಿಗೆ ಕೋಪ ಬಾರದಿರುತ್ತಿತ್ತೇ? ಅದರಂತೆಯೇ ಶರಯೂ ಸಿಟ್ಟಾಗಿದ್ದಳು! ಸ್ತ್ರೀಪುರುಷರ ಸಮಾನ ಹಕ್ಕಿನ ಯೋಗ್ಯ ವ್ಯವಹಾರದಲ್ಲಿ ದುಮುಕಲಿಕ್ಕೆ ಇನ್ನು ಅವಕಾಶವಿದ್ದರೂ ಸ್ವಾಭಿಮಾನೀ ಸ್ತ್ರೀಯರು ಭಾವನೆಯ ಬಾಬಿನಲ್ಲಿ ಈ ಹಕ್ಕನ್ನು ಆಗಲೂ ಮನಸ್ಸಿನಲ್ಲಾದರೂ ಸಂಪಾದಿಸದೆ ಬಿಡುವುದಿಲ್ಲ. ಇದರಂತೆಯೇ ಶರಯೂಳು ಆ ಹಕ್ಕನ್ನು ಪ್ರಸ್ತುತ ಪ್ರಸಂಗದಲ್ಲಿ ಸಂಪಾದಿಸಿದಳು. ಅವಳು ಚಂದೂನ ಕೋಣೆಯಲ್ಲೇ ಕುಳಿತಿದ್ದರೂ ಆಕೆ ತುಸ ಅಡ್ಡ ಕುಳಿತಿದ್ದರಿಂದ, ಚಂದುವಿಗೂ ಆಕೆಗೂ ದೃಷ್ಟಾದೃಷ್ಟವಾಗುವಂತಿರಲಿಲ್ಲ.

ಕೆಲ ಕ್ಷಣಗಳು ಹೀಗೆ ಕ್ರಮಿಸಿದ ಬಳಿಕ ಒಬ್ಬ ಚಾಕರನು ಬಂದು ಮಾಸಾಹೇಬರನ್ನು ಹೊರಗೆ ಕರೆದನು. ಅವರು ಹೋದ ಬಳಿಕ ಅವರ ಕರೆ ಬಂದಿತೆಂದು ಶರಯೂಳ ತಾಯಿಯೂ ಹೊರಗೆ ಹೋಗಬೇಕಾಯಿತು. ಅವಳು ಹೋಗುವಾಗ:—"ಶರಯೂ, ಏಳಬೇಡ. ನನಗೆ ಹೊರಗೆ ತುಸ ಕೆಲಸವಿದೆ ಅದನ್ನು ಮುಗಿಸಿ ನಾನು ೨-೩ ನಿಮಿಷಗಳಲ್ಲೇ ಬರುವೆನು. ಎಲ್ಲರೂ ಎದ್ದು ಹೋಗುವುದು ಸರಿಯಲ್ಲ" ಎಂದು ಹೇಳಿ, ಹೊರಗೆ ಹೋಗುವಾಗ ಅಲ್ಲಿಯ ಪರದೆಯನ್ನು ಪೂರಾ ಜಗ್ಗಿಕೊಂಡಳು. ಹೇಳಿಕೇಳಿ ಇದೊಂದು ನಾಟಕವೇ ಆಗಿತ್ತು!

ಶರಯೂ ಒಬ್ಬಳೇ ಉಳಿದುದರಿಂದ, ಚಂದೂನ ಸ್ತ್ರೀ ದಾಕ್ಷಿಣ್ಯವು

ಪ್ರಭಾವಿಯಾಯಿತು ಆಕೆಯು ಮೋರೆ ಕೂಡ ತನ್ನ ಕಡೆಗಿರುವುದಿಲ್ಲೆಂಬ ದನ್ನು ಕಂಡು ಅವನು ಅವಳನ್ನು ಹೆಸರುಗೊಂಡು ಕರೆದನು. ಆದರಿಂದ ಶರಯೂಳಿಗೆ ಆತನ ಕಡೆಗೆ ಹೊರಳುವ ಭಾಗವೇ ಬಿತ್ತು. ಆಗ ಹಾಗೆ ತಿರುಗಿ ದಾಗ ಆವಳ ಮುಖವು ಅಶ್ರುಗಳಿಂದ ಮಲಿನವಾಗಿತ್ತು! ಗಂಡಸರ ಕಣ್ಣೀರು ಕೇವಲ ದುಃಖದ ಚಿಹ್ನಗಳಿರುತ್ತವೆ; ಆದರೆ ಸ್ತ್ರಿಯರ ಕಂಬನಿಗಳು ದುಃಖದಂತೆ ಕೋಪದ ನಿದರ್ಶಕ ಚಿಹ್ನಗಳೂ ಆಗಿರುತ್ತವೆ. 'ರೋದನವೇ ನಮ್ಮ ಆಯುಧವು' ಎಂದು ಸಣ್ಣ ಹುಡುಗರಂತೆ ಹೆಂಗಸರೂ ತಿಳಿಯುತ್ತಾರೆ! ಆದರೆ ಅದೇ ಪ್ರಕಾರ 'ಯಶವಾಗಲೂ ವಿಜಯಿಯಾಗುವದು!' ಎಂದು ಸ್ತ್ರೀಯರ ರೋದನದ ಬಗ್ಗೆ ಒಬ್ಬ ಕವಿಯು ಬಣ್ಣಿಸಿರುವಂತೆ ಶರಯೂಳ ಅಳುವೂ ವಿಜಯಿಯಾಯಿತು.

ಮಾತನಾಡದೆ ವಾದದ ನಿರ್ಣಯವಾಗುವ ಪ್ರಸಂಗಗಳಲ್ಲಿದೊಂದಾಗಿತ್ತು. ಚಂದುವು ವಿಲಾಯತಿಯೊಳಗೆ ಮೇರಿಯ ಹತ್ತರ ಕುಳಿತಿದ್ದರೆ ಅವನು ತನ್ನ ಕುಳಿತ ಸ್ಥಳದಿಂದೆದ್ದು ಹೋಗಿ ಅವಳ ಕಂಬನಿಗಳನ್ನೊರೆಸುತ್ತಿದ್ದನು; ಆದರೆ ಆತನೀಗ ಹಿಂದೂ ಕುಮಾರಿಕೆಯೊಡನೆ ಮಾತನಾಡುತ್ತಿದ್ದನು; ಆದರೂ ಕೈಯಿಂದ ಕಂಬನಿಗಳನ್ನೊರೆಸುವದಕ್ಕಿಂತಲೂ ಹೆಚ್ಚು ನೈತಿಕ ಮೂಲ್ಯವಿದ್ದಂಥ ಕೆಲಸವನ್ನು ಆತನು ಮಾಡಿದನು. ಅವಳ ಅಶ್ರುಗಳ ಸಂಗತಿಯನ್ನೆಲ್ಲ ತಿಳಿಯಲಿಕ್ಕೆ ಅವನಿಗೇನು ಅವಕಾಶ ಹತ್ತುತ್ತಿತ್ತೇ? ಅವನು ಒಮ್ಮೆಲೆ ಕೈ ಜೋಡಿಸಿ ಶರಯೂಳಿಗೆ ನಮಸ್ಕರಿಸಿದನು; ಹಾಗು ಸದ್ಗದಿತ ಕಂಠದಿಂದ:—'ಶರಯೂ, ನಾನು ನಿಜವಾಗಿಯೂ ನಿನ್ನ ಅಪರಾಧಿಯಾಗಿದ್ದೇನೆ ನನ್ನನ್ನು ಕ್ಷಮಿಸುವೆಯಾ?' ಆದರೆ ಆತನ ಆ ಕ್ಷಮಾಯಾಚನೆಯಿಂದ ಆಕೆಯ ಅಶ್ರುಗಳು ಕಟ್ಟಾಗನೆ, ಅವು ಹೆಚ್ಚು ಒತ್ತರದಿಂದ ಪ್ರವಹಿಸತೊಡಗಿದವು!

ಇಂಥ ಭಾವನಾಕ್ಷೋಭಗಳ ಪರಿಮಾರ್ಜನವು ಬೇರೆ ರೀತಿಯಿಂದಾಗುವದೇ ವಿಹಿತವು! ಅದಕ್ಕಾಗಿ ಚಂದುವಿಗೊಂದು ಹಂಚಿಕೆ ಹೊಳೆಯಿತು ಆಗ ಅವನು: "ಶರಯೂ, ನನ್ನದೊಂದು ಕೆಲಸ ಮಾಡು ನೋಡೋಣ! ಆ ಹಿತ್ತಾಳಿಯ ಪಂಜರವನ್ನು ಕೆಳಗಿಳಿಸು; ಹಾಗು ಅದರ ಬಾಯಿ ತೆರೆ."

"ಆದರೆ ಅದರೊಳಗಿನ ಹಕ್ಕಿಯು ಹಾರಿ ಹೋದರೆ?" ಎಂಬ ಪ್ರಶ್ನೆಯು ಶರಯೂಳ ಬಾಯಿಂದ ಸಹಜವಾಗಿಯೇ ಹೊರಟಿತು; ಆದರೆ ಆ ಪ್ರಶ್ನೆಯನ್ನು ಕೇಳಿಯೂ ಅವಳು ಎದ್ದು, ತನ್ನ ಕೈಗೆ ನಿಲುಕುತ್ತಿದ್ದ ಆ ಪಂಜರವನ್ನು ಕೆಳಗಿಳಿಸಿದಳು.

ಚಂದೂ:—'ಶರಯೂ ಹೌದು, ಪಂಜರದ ಬಾಗಿಲ ತೆರೆದ ಕೂಡಲೆ ಆ

ಹಕ್ಕಿಯು ಹಾರಿ ಹೋದೀತು; ಆದರೆ ನಾನಾದರೂ ಅದನ್ನೇ ಮಾಡಬೇಕಾಗಿದೆ ಈ ಬಡ ಹಕ್ಕಿಯ ಹೆಣ್ಣನ್ನು ನಾನು ತುಬಾಕಿಯಿಂದ ಕೊಂದೆನು. ಇದಕ್ಕೆ ದುಃಖ ಕೊಟ್ಟ ಭಾವನೆಯಿಂದ ನನ್ನ ಪ್ರೇಮವು ಇದರ ಮೇಲೆ ಕುಳಿತಿತು. ಅಂತೇ ನಾನಿದನ್ನು ಪಂಜರದಲ್ಲಿರಿಸಿದ್ದೆನು; ನನ್ನ ಕೈಯಿಂದಲೇ ಇದಕ್ಕೆ ಕಾಳು-ನೀರು ಹಾಕಿದೆನು. ಇದೆಲ್ಲವೂ ನಿಜ; ಆದರೆ ನಾನು ಮೂರ್ಖನಲ್ಲವೇ?''

'ಪ್ರೇಮಲ ಮೂರ್ಖ!' ಶರಯೂಳಿಗೆ ಇದು ವಿರೋಧಾಭಾಸವೆನಿಸಲು, ಅವಳು ವಿನೋದದಿಂದ: —''ಅದು ಹೇಗೆ?''

ಚಂದೂ: 'ಯಾಕೆಂದರೆ, ಪ್ರೇಮದಿಂದ ಬೇರೆಯವರನ್ನು ಬಂಧಿಸಬೇಕೆಂಬುದೇನೋ ನಿಜ; ಆದರದು ಶಬ್ದಶಃ ಅವನನ್ನು ಕೈದಿನಲ್ಲಿ ಹಾಕಲಿಕ್ಕಿಲ್ಲ. ಸಾಕಿದ ಹಕ್ಕಿಗಳನ್ನು ಪಂಜರದಲ್ಲಿಟ್ಟು ನಾವು ಅವುಗಳ ಮೇಲೆ ತುರಂಗವಾಸವನ್ನೇ ಹೇರುತ್ತಿರುವದಿಲ್ಲವೆ? ಸ್ವಾತಂತ್ರ್ಯದ ಸಹವಾಸದೊಳಗಿನ ಪ್ರೇಮವೇ ನಿಜವಾದ ಪ್ರೇಮವು ಈ ಹಕ್ಕಿಯು ಪಂಜರದಿಂದ ಹೊರಬಿದ್ದ ಬಳಿಕ ತಾನಾಗಿ ಹಾರಿ ಬಂದು ನನ್ನ ಕೈ ಮೇಲೆ ಕುಳಿತರೆ ಅದಕ್ಕೆ ನಿಜವಾದ ಪ್ರೇಮವೆಂದೇನು; ಆದರೆ ಅದು ಎಂತಾದೀತು? ನಾನು ಇದರ ಪ್ರಿಯಕರಿಣಿಯ ಕೊಲೆಗೆಯ್ದೆನು. ಪಂಜರದಲ್ಲಿರಿಸಿ ಇದಕ್ಕೆ ಮತ್ತೆ ಯಾವುದೊಂದು ಹೊಸ ಪ್ರೇಮ ಸಂಬಂಧವನ್ನುಂಟುಮಾಡಲಿಕ್ಕೂ ಅಶಕ್ಯಗೊಳಿಸಿದೆನು. ಇದಕ್ಕೆ ಒತ್ತಾಯದ ಸಂನ್ಯಾಸ ಕೊಟ್ಟೆನು. ಅದರೊಡನೆ ತುರಂಗವಾಸವನ್ನೂ ವಿಧಿಸಿದೆನು. ಇದಕ್ಕೆ ನಾನಿಷ್ಟು ಅಪರಾಧ ಮಾಡಿದ ಬಳಿಕ ಇದಾದರೂ ನನ್ನ ಮೇಲೇಕೆ ಪ್ರೇಮ ಮಾಡಬೇಕು" ಬೇರೆ ನನ್ನ ಮೂರ್ಖತನವೇನಂದರೆ, ನಾನು ಇದರ ಹೆಣ್ಣಿನ ಚರ್ಮದಲ್ಲಿ ಹುಲ್ಲು ತುಂಬಿ, ಅದನ್ನು ಇದರ ಮುಂದಿರಿಸಿರುತ್ತೇನೆ ಅದರಿಂದ ನನಗೆ ತಾತ್ಪುರ್ತಿಕ ಸಮಾಧಾನವು ಲಭಿಸುತ್ತಿರಬಹುದು; ಆದರೆ ಇದಕ್ಕೆ ನಿತ್ಯ ದುಃಖವಾಗುವದೋ ಇಲ್ಲವೋ?"

ಚಂದೂನ ಈ ಆತ್ಮದೂಷಕ ವಿವೇಚನದಲ್ಲಿ ಶರಯೂಳಿಗೆ ಸಮ್ಮತವಾಗದಂಥದೇನಿದ್ದಿತು? ಆದರೆ ಏನನ್ನಾದರೂ ಅನ್ನಬೇಕೆಂದು ಅವಳು:— ''ಹಾಗಾದರೆ ನನಗನಿಸುವದೇನಂದರೆ, ಈ ಪಕ್ಷಿಯನ್ನು ಈ ಪಂಜರದೊಳಗಿಂದ ಹೇಗೆ ಬಿಟ್ಟುಬಿಡಬೇಕೋ, ಹಾಗೆಯೇ ಈ ಹುಲ್ಲುತುಂಬಿಟ್ಟದ್ದ ಇದರ ಸಹಚರಿಯನ್ನು ಕೂಡ ದೂರೊಯ್ದು ಬೈಲೊಳಗೆ ಬಿಚ್ಚಿಬಿಡಬೇಕು; ಅಂದರೆ ಒಂದರೊಡನೆ ಇಬ್ಬರ ಮುಕ್ತತೆಯೂ ಆದೀತು.''

ಈ ಸೂಚನೆಯು ಮಾರ್ಮಿಕತನದ್ದೆನಿಸಲು, ಚಂದುವು:—''ಯಾವ ಇಬ್ಬರ ಮುಕ್ತತೆ? ಹಾಗು ಅದೆಂತು?''

ಶರಯೂ:—“ಪಂಜರದೊಳಗಿಂದ ಹೊರಬಿದ್ದಿತೆಂದರೆ ಹೇಗೆ ಒಂದು ಹಕ್ಕಿಯು ಮುಕ್ತತೆಯಾಗುವದೋ, ಅದರಂತೆಯೇ ಆ ಹುಲ್ಲು ತುಂಬಿರಿಸಿದ್ದನ್ನು ಕಣ್ಮರೆ ಮಾಡುವದರಿಂದ ಆ ಬೇಟೆಗಾರನು ದುಃಖದಾಯಕ ಸ್ಥಿತಿಯಿಂದ ಬಿಡುಗಡೆಯಾದಂತಾದೀತು! ಅಂದರೆ ಇಬ್ಬರಿಗೂ ಹೊಳೆವಂತೆ ಮುಂದಿನ ಉದ್ಯೋಗ ಮಾಡಲಿಕ್ಕೆ ಮನಸ್ಸಿನಿಂದ ಆತಂಕವಿರಲಾರದು.”

ಈ ಮಾರ್ಮಿಕ ಉತ್ತರದಿಂದ ಚಂದುವಿಗೆ ಸಂತೋಷವಾಯಿತು. ಅದರಿಂದ ಆತನು:—“ಒಳ್ಳೇದು. ಶರಯೂ, ಆವೆರಡೂ ಕೆಲಸಗಳನ್ನು ನೀನೇ ಮಾಡು.”

ಶರಯೂ ಪಂಜರದ ಬಾಗಿಲು ತೆರೆದಳು. ಕೂಡಲೆ ಆ ಕಪೋತಪಕ್ಷಿಯು ಹಾರಿಹೋಯಿತು. ಬಳಿಕ ಒಬ್ಬ ನೌಕರನನ್ನು ಕರೆದು, ಆತನಿಗೆ ಆ ಹುಲ್ಲು ತುಂಬಿದ ಹಕ್ಕಿಯನ್ನು ದೂರ ಇಟ್ಟು ಬರಲಿಕ್ಕೆ ಹೇಳಿದಳು ಸಂದಿದ ಎರಡೂ ಸಂಗತಿಗಳ ಬಗ್ಗೆ ಸಂತೋಷಪಟ್ಟು, ಅವಳು ಚೇಷ್ಟೆಯಿಂದಲೇ:—“ಇನ್ನು ಈ ತೆರವಾದ ಪಂಜರವನ್ನು ಇನ್ನಾವೆಂದು ನಾನು ಒಯ್ಯುತ್ತೇನೆ. ಇದು ನನಗೆ ಅತ್ಯಂತ ಮೆಚ್ಚಿನದಾಗಿರುತ್ತದೆ.”

ಚಂದು:—“ಅದೇತಕ್ಕೆ?”

“ನಾನು ಇದರಲ್ಲಿ ನನ್ನದೊಂದು ಮೆಚ್ಚಿನ ಒಡವೆಯನ್ನಿಡತಕ್ಕವಳಿದ್ದೇನೆ.”

ಇಷ್ಟು ನಗೆ-ಕೆಲೆದಾಟದ ಸಂಭಾಷಣವಾದ ಬಳಿಕ ಚಂದುವು ಮಂಚದ ಮೇಲೆ ಎದ್ದು ಕುಳಿತನು. ಹೊರಗಿದ್ದ ಮಾಸಾಹೇಬರೂ ಶರಯೂಳ ತಾಯಿಯೂ ಒಳಗೆ ಬಂದರು. ಅಷ್ಟರಲ್ಲಿ ಅಲ್ಲಿಗೆ ಬಂದಿದ್ದ ಚಹ, ಹಣ್ಣು ಮುಂತಾದವುಗಳನ್ನು ಎಲ್ಲರೂ ಸ್ವೀಕರಿಸಿದರು.

ಅಲ್ಲಿಂದ ಹೊರಡುವಾಗ ಚಂದುವಿಗೆ ಕೇಳಿಸಬಹುದಾದಷ್ಟು ಗಟ್ಟಿದನಿಯಿಂದ ಶರಯೂಳ ತಾಯಿಯು ಮಾಸಾಹೇಬರನ್ನುದ್ದೇಶಿಸಿ—“ಪುನರ್ಭೆಟ್ಟಿ ಯಾವಾಗ?” ಎಂದು ಕೇಳಿದಳು.

ಮಾಸಾಹೇಬರಾದರೂ ನಕ್ಕು ಅಷ್ಟೇ ಗಟ್ಟಿಯಾಗಿ:—“ನಮ್ಮ ಜೊಯ್ಸರು ಮುಹೂರ್ತ ತೆಗೆದುಕೊಟ್ಟಾಗ.”

ಪ್ರಿಯವಾಚಕರೇ, ಇಲ್ಲಿಗೆ ನಮ್ಮ ಕಥೆಯು ಮುಗಿದಂತಾಯಿತು. ಚಂದೂ ಶರಯೂ ಇವರ ಸಂಸಾರವು ಹೇಗಾಯಿತು? ಚಂದುವು ಆಯ್. ಸಿ. ಎಸ್ಸಿನ ನೌಕರಿ ಹೇಗೆ ಮಾಡಿದನು? ಇವುಗಳ ಕಲ್ಪನೆಯನ್ನು ನಮ್ಮಷ್ಟೇ ನಿಮಗೂ ಮಾಡಬಂದೀತು; ಆದರೆ ಈಗಾದದ್ದು ಹೇಗೆ ಅದ್ಭುತವಾಯಿತೋ, ಮುಂದಾಗುವದೂ ಹಾಗೆಯೇ ಆದೀತೆಂದು ಅನಿಸುವದಿಲ್ಲ. ಇಡೀ ಜನ್ಮದಲ್ಲಿ ಅದ್ಭುತ ಮತ್ತು ಚಿರಸ್ಮರಣೀಯಗಳಾದ ಕ್ರಾಂತಿಕಾರಕ ಸಂಗತಿಗಳು ಪ್ರಾಯಶಃ ಒಮ್ಮೊಮ್ಮೆಯೇ ಘಟಿಸುತ್ತಿರುತ್ತವೆ!

---

## ಉಪಸಂಹಾರ

ಯೋಗಾಯೋಗ ಅಥವಾ ಕಾಕತಾಲೀಯ ನ್ಯಾಯ! ಎಂಬೀ ಪ್ರಸ್ತುತ ಕಾದಂಬರಿ ಬರೆಯುವ ಹೇತುವು ನನಗೆ ಮಾನಸ ಶಾಸ್ತ್ರದಲ್ಲಿ ದೊರೆತ ಒಂದು ತತ್ತ್ವ ಹಾಗು ಸಮಾಜದಲ್ಲಿ ಉಂಟಾದ ಒಂದು ಅನುಭವ ಇವೆರಡನ್ನೂ ವಿಶದವಾಗಿ ಹೇಳುವದಿತ್ತು. ನಾನು ಸ್ವತಃ ನಾಸ್ತಿಕನಾಗಿಲ್ಲ; ಆದರೆ ಕೆಲ ತತ್ತ್ವಕ್ಕನುಸರಿಸಿ ಕೆಲ ಪ್ರಮಾಣದಲ್ಲಿ ದೈವವಾದಿಯೇ ಇರುತ್ತೇನೆ; ಆದರೆ ದೈವವನ್ನು ವಿಶ್ವಕರ್ತನ ನಿಯತಿಯ ಒಂದು ಭೇದವೆಂದು ಎಣಿಸಿದರೂ, ಮನುಷ್ಯನು ಸಂಪೂರ್ಣವಾಗಿ ಆ ಕಲ್ಪನೆಯ ಅಧೀನವಾಗಬಾರದು. ದೈವಕ್ಕೆ ಹೇಗೆ ಮನ್ನಣೆ ಇದೆಯೋ ಹಾಗೆ ನಮ್ಮ ಉದ್ಯೋಗಕ್ಕೂ ಮನ್ನಣೆಯಿದ್ದು, ಕೊನೆಗುಂಟಾಗುವ ಅನುಭವವನ್ನೇ ಗ್ರಾಹ್ಯವೆನಬೇಕೆಂಬ ಮತದವನು ನಾನಿದ್ದೇನೆ.

'ಯೋಗಾಯೋಗ' ಎಂಬ ಶಬ್ದವು ಪ್ರಸಿದ್ಧವೇ ಇದೆ; ಆದರೆ ಆ ಸಮಾಸದ ವಿಗ್ರಹವು ಯೋಗ ಮತ್ತು ಅಯೋಗ ಹೀಗಿರುವದಿಲ್ಲ. ಭಾಷಾವಿಸ್ತಾರಕ್ಕಾಗಿ ದ್ವಿರುಕ್ತಿ ಮತ್ತು ದೀರ್ಘೀಕರಣ ಇಂಥ ಒಂದೆರಡು ಬಗೆಯ ತತ್ತ್ವಗಳಿರುತ್ತವೆ. ಅವುಗಳಿಗನುಸರಿಸಿ ಯೋಗಾಯೋಗ ಶಬ್ದವು ಕೇವಲ ಯೋಗ ಎಂಬರ್ಥದಿಂದಲೇ ಕೂಡಿದ್ದಿದೆ. ಇಚ್ಛಾಸ್ವಾತಂತ್ರ್ಯದ ಮರ್ಯಾದೆಯಲ್ಲಿ ತನ್ನಷ್ಟಕ್ಕೆ ತಾನೇ ಘಟಿಸಿದಂಥ ಕೆಲ ಯೋಗಗಳು ಇದ್ದೇ ಇರುತ್ತವೆ; ಆದರೆ ಹಲವು ಯೋಗಗಳಲ್ಲಿ ನಮ್ಮ ಇಚ್ಛಾಶಕ್ತಿಯು ಪ್ರಭಾವಿಯಿರುವದಿಲ್ಲ; ಬೇರೆ ಯಾವವಾದರೂ ಶಕ್ತಿಗಳು ಪ್ರಭಾವಿಗಳಾಗುತ್ತವೆ. ಯೋಗಾಯೋಗಕ್ಕೆ

'ಕಾಕತಾಲೀಯ ನ್ಯಾಯ' ಎಂದು ಸಂಸ್ಕೃತ ಶಬ್ದವಿದೆ. ನಾನು ನನ್ನೀ ಕಥೆಗೆ ಯೋಗಾಯೋಗ ಎಂಬ ಹೆಸರು ಕೊಟ್ಟಿದ್ದರಿಂದಲೇ ಇದರೊಳಗಿನ ವಿಷಯಗಳ ದಿಗ್ದರ್ಶನವು ಸಹಜವಾಗಿ ಆಗುವಂತಿದೆ.

ಯೋಗಾಯೋಗದ ಒಂದು ಪರಿಣಾಮವು ಮನುಷ್ಯನ ಬುದ್ಧಿಯನ್ನು ಮಂದ ಅಥವಾ ಭ್ರಷ್ಟವಾಗಿಯೂ ಮಾಡಲಾಗುತ್ತದೆ; ಮತ್ತು ಅದೇ ಅನುಭವವನ್ನು ನಾನೀ ಕಥೆಯ ರೂಪದಿಂದ ವರ್ಣಿಸಿರುತ್ತೇನೆ. ಒಬ್ಬನು ಇನ್ನೊಬ್ಬನನ್ನು ಗುರುವೆಂದು ಮನ್ನಿಸುವುದರಲ್ಲೇನೂ ಬಿಷ್ಣವಿಲ್ಲ; ಯಾಕಂದರೆ, 'ಗುರು' ಅಂದರೆ 'ಶಿಕ್ಷಕ'ನೇ ಸರಿ; ಮತ್ತು ಯಾವ ಮನುಷ್ಯನೂ ಸರ್ವಜ್ಞನಿರದ್ದರಿಂದ, ಅವನು ತನಗೆ ಗೊತ್ತಿರದ ವಿಷಯಗಳಲ್ಲಿ ಶಿಕ್ಷಕನೆಂದು ಗುರುವಿನ ಉಪಯೋಗಮಾಡಿಕೊಳ್ಳುವದು ಯೋಗ್ಯವೇ ಇದೆ; ಆದರೆ ಗುರುವಾದರೂ ಅವನಿಗೆ ವಿಶಿಷ್ಟ ವಿಷಯದಲ್ಲೇ ಪ್ರಾವೀಣ್ಯವಿರುತ್ತದೆ; ಮತ್ತು ಆತನ ಪ್ರಾವೀಣ್ಯವನ್ನು ಮನ್ನಿಸುವದಾದರೆ ಆ ವಿಷಯದ ಮಟ್ಟಿಗೇ ಮನ್ನಿಸಬೇಕು. ಈ ತತ್ತ್ವವು ಯಾವಾಗ ಕಳಚುವದೋ, ಅದು ಅಸಮರ್ಥನೀಯ, ಅತಿಶಯೋಕ್ತಿಯದಾಗುತ್ತಿರುವದೋ ಆವಾಗಲೇ ಆ ಕೆಲಸ ಕೆಡುತ್ತದೆ.

ಶ್ರೀಮತ್ ಭಾಗವತದಲ್ಲಿ ಜಡಭರತನು ಒಬ್ಬನಲ್ಲ, ಇಪ್ಪತ್ನಾಲ್ಕು ಗುರುಗಳನ್ನು ಮಾಡಿಕೊಂಡನೆಂಬ ಕಥೆಯಿದೆ; ಮತ್ತು ಯಾವ ಗುಣದ ಸಲುವಾಗಿ ಯಾವ ಗುರುವನ್ನು ಮಾಡಿಕೊಂಡನೆಂಬದು ಅದರಲ್ಲಿ ವಿವರಿಸಿರುವದರಿಂದ, ಗುರುಮಾಡಿಕೊಳ್ಳುವ ಮರ್ಮವು ಸಹಜವಾಗಿ ಗೊತ್ತಾಗುತ್ತದೆ. ಭಗವದ್ಗೀತೆಯೊಳಗಿನ ವಿಭೂತಿ ಸಿದ್ಧಾಂತ ಹಾಗು ಭಾಗವತದೊಳಗಿನ ಗುರು ಸಿದ್ಧಾಂತ ಇವು ಬೋಧದ ದೃಷ್ಟಿಯಿಂದ ಒಂದೇ ಆದಾವು. ಅಂದರೆ ಒಂದೊಂದರಲ್ಲಿ ಒಂದು ಗುಣವಿದೆ. ಯಾವುದೊಂದು ಗುಡ್ಡದ ಮೇಲೆ ನಾವು ಹಾಗು ಗುರುವೆಂದು ಮನ್ನಿಸಿರುವ ವ್ಯಕ್ತಿ ನಿಂತುಕೊಂಡಿದ್ದರೆ, ನಮಗಿಂತ ಎತ್ತರದ ಸ್ಥಳದಲ್ಲಿ ಗುರುವು ನಿಂತುಕೊಂಡಿರುತ್ತಾನೆಂದು ಅವನಿಗೆ ಏನು ಕಾಣಿಸುತ್ತದೆಯೋ ಅದನ್ನು ಕೇಳಿಕೊಳ್ಳುವದು ಗುರು ಮಾಡಿಕೊಳ್ಳಲಿಕ್ಕೆ ಯೋಗ್ಯ ದಾಖಲೆಯಾದೀತು; ಆದರೆ ಗುರುವಿನ ಕಾಲಿಗೆ ಕಟ್ಟಿಕೊಂಡು ಆತನೊಡನೆ ಒಮ್ಮೆಲೆ ಗುಡ್ಡದ ದರಿಯಲ್ಲಿ ಹಾರಿಕೊಳ್ಳುವದು ಇಲ್ಲವೆ ಇಳುಕಲೊಳಗೆ ಉರುಳುತ್ತ ಹೋಗುವುದು ಈ ಅರ್ಥವು ತಪ್ಪಿನದಾದೀತು.

ಅಂಪಮೇಲೆ ಬುದ್ಧಿವಂತ ಜನರಿಂದ ಈ ತಪ್ಪಿನ ಅರ್ಥದ ಗುರುಕರಣವು ಹೇಗಾಗುತ್ತದೆ? ಹಾಗು ಅದರ ಕಾರಣವೇನು? ಈ ಬಗ್ಗೆ ಯೋಚಿಸಲು, ಒಂದು ಸ್ಥೂಲ ಗಮಕವು ಕಂಡುಬರುವುದೇನಂದರೆ, ಬುದ್ಧಿವಂತ ಮನುಷ್ಯನು ಕೆಲ ದುಃಖದ ಪೇಚಿನಲ್ಲಿ ಸಿಕ್ಕನೆಂದರೆ ಆತನ ಬುದ್ಧಿಯು, ಅನುಮಾನ ಶಕ್ತಿಯು ಶುದ್ಧತೆಯು ಉಳಿಯುವುದಿಲ್ಲ. ನಿಜವಾದ ಮುಮುಕ್ಷುವು ಒಬ್ಬನು ದೊರೆತರೆ, ಅರ್ಥಾರ್ಥೀ ಹಾಗು ಆರ್ತ ಅಂದರೆ ದುಃಖಿಗಳಾದ ಹಲವರು ಗುರುಭಜಕರಲ್ಲಿ ದೊರೆಯುವರು. ಎಲ್ಲ ಗುರುಪೂಜಕರೂ ಮೋಸಗಾರರಿರುತ್ತಾರೆಂತಲ್ಲ; ಕೆಲವರಿಗೆ ಗುರುಪೂಜನದಲ್ಲಿ ನಿಜವಾದ ಆನಂದವು ಲಭಿಸುತ್ತಿರಬಹುದು; ಆದರೆ ದುಃಖದ ನಿರಾಕರಣವಾದ ಬಳಿಕ ಇಲ್ಲವೆ ಅರ್ಥವು ಲಭಿಸಿದ ನಂತರ, ಅವರ ಗುರುಭಕ್ತಿಯು ಮೊದಲಿನಷ್ಟು ಇರುವುದೋ ಇಲ್ಲವೋ ಎಂಬ ಪ್ರಶ್ನೆಯಿದೆ. ಯಾವುದೊಂದು ಆಕಸ್ಮಿಕ ಕ್ಷೋಭನದಿಂದ ಬುದ್ಧಿಯು ಚಲಿಸಿತೆಂದರೆ, ಅದು ಪ್ರತಿಕ್ಷೋಭನದಿಂದ ಮರಳಿ ದಾರಿಗೆ ಬಂದೀತೋ ಇಲ್ಲವೋ ಎಂಬ ಚಿಕಿತ್ಸೆಯೂ ಯೋಗ್ಯವಾದೀತು. ಈ ದೃಷ್ಟಿಯಿಂದ ವಾಚಕರು ಮಾನಸ ಶಾಸ್ತ್ರವನ್ನು ಕೆಲಮಟ್ಟಿಗ ನೋಡುವದೇ ಒಳ್ಳೇದು.

---



# ಶ್ರೀ ಶೇಷಾಚಲ ಗ್ರಂಥಮಾಲೆಯ ಪುಸ್ತಕಗಳು



**ಐತಿಹಾಸಿಕ ಕಾದಂಬರಿ:**—೧ ಅಲ್ಲಾಹೊ ಅಕಬರ ೧೦ಆ, ೨ ಅಡಮುಟ್ಟಸಿಪಾಯಿ ೩ ಆ, ೩ ಅಮಾತ್ಯರಾಕ್ಷಸ ೪ ಆ, ೪ ಅಮಾತ್ಯ ನಂದಿನಿ ೧||, ೧| ರೂ. ೫ ಆತ್ಮಬಲಿ ೧, ೦-೧೪-೦ ರೂ, ೬ ಈಶಸಂಕಲ್ಪ ೧೨ ಆ, ೭ ಊರ್ಮಿಳೆ ೧೨ ಆ, ೮ ಎಚ್ಚಮನಾಯಕ ೮ ಆ, ೯ ಕಂಕಣಚೋರ ೧| ರೂ, ೧೦ ಗಜಪತಿ ಸಪ್ತಾಂಗ ಹರಣ ೧|, ೧ ರೂ, ೧೧ ಗೆಲುವಿನ ಕತ್ತಿ ೧೨ ಆ, ೧೨ ಚಾಲುಕ್ಯರ ಅಭ್ಯುದಯ ೧೨ ಆ, ೧೩ ಚೋದ್ಯಪುರದ ಚೋಜಿಗರಾಯ ೨ ರೂ, ೧||| ರೂ, ೧೪ ಚದುರೆ ೧|, ೧ ರೂ, ೧೫ ಜಕಣಾಚಾರ್ಯ ೧೪ ಆ, ೧೬ ಮಹಾತ್ಮಾ ತುಲಸೀದಾಸ ೧||, ೧| ರೂ, ೧೭ ತಾಯಿನಾಡು ೧ ರೂ, ೧೮ ದೈವಸಂಕಲ್ಪ ೧೨ ಆ, ೧೯ ದಳವಾಯಿ ಸಾತನಾಮಿ ೪ ಆ, ೨೦ ನರವೀರ ಕಾಸೀಮ ೧ರೂ, ೨೧ ನೇತಾಜಿ ೮ ಆ, ೨೨ ಪತಿತೋದ್ಧರಣ ೪, ೩ ಆ, ೨೩ ಪ್ರಾರಬ್ಧ ಪ್ರಹಾರ ೪ ಆ. ೨೪ ಪರಾವರ್ತನ ೮ ಆ, ೨೫ ಪ್ರಾಣದಾನ ೩ ಆ, ೨೬ ಪ್ಲಾಸಿಯಕದನ ೩ ಆ, ೨೭ ಪರಮೇಶ್ವರ ೬ಆ, ೨೮ ಪರಿಣಾಮ ೧|, ೧-೨-೦ ರೂ, ೨೯ ಫಿರಂಗಿಗಳ ಉತ್ಪಾತ ೧ರೂ, ೩೦ ಬಲಿದಾನ ೧|, ೧-೨-೦ ರೂ, ೩೧ ಭಯಂಕರ ಸೇಡು ೧||, ೧| ರೂ, ೩೨ ಭಾಗ್ಯೋದಯ ೮ ಆ, ೩೩ ಮಾತೃಭೂಮಿಗಾಗಿ ೩ ಆ, ೩೪ ಮಂದಾಕಿನಿ ೧೨ ಆ, ೩೫ ರಕ್ತಸಿಂಚನ ೨ ಆ. ೩೬ ರಾಣೀ ಕುರಂಗಿ ೩ ಆ, ೩೭ ರಾಣೀ ಅರುಣಕುಮಾರಿ ೧ ರೂ, ೩೮ ವಡಗಾವದ ವಿಜಯ ೧|, ೧ ರೂ, ೩೯ ವಿಮಲಾ ೧೪, ೧೨ ಆ, ೪೦ ವೀರಕಾಂತಾ ೧೦ ಆ, ೪೧ ವೀರಕುಮಾರಿ ಕನಕಲತೆ ೩ ಆ, ೪೨ ಶಕ್ತಿಮಯಿ ೧, ೦-೧೪-೦ ರೂ, ೪೩ ಶೌರ್ಯಸಂಜೀವನ ೧೪ ಆ, ೪೪ ಸತ್ಯಮೇವಜಯತೆ ೧೨ ಆ, ೪೫ ಸೂರ್ಯಾಸ್ತ ೮ ಆ, ೪೬ ಸೂರ್ಯಗ್ರಹಣ ೧ ರೂ, ೪೭ ಹಂಸಾ ೧| ರೂ, ೪೮ ಹಿಂದೂ-ಮುಸಲ್ಮಾರ ಐಕ್ಯ ೩ ಆ.

**ಸಾಮಾಜಿಕ ಕಾದಂಬರಿ:**—೧ ಅಪರಾಜಿತ ೪ ಆ, ೨ ಎರಡನೇ ಹೆಂಡತಿ ೮ ಆ, ೩ ಕರಿನೀರು ೨ ರೂ, ೪ ಕಮಲಾಕಾಂತ ಸಾಧು ೧೦ ಆ, ೫ ಗೃಹಲೀಲೆ ೧೨ ಆ, ೬ ಚಂದ್ರಕಾಂತ ೧೦ ಆ, ೭ ಜಯಪರಾಜಯ ೮ ಆ, ೮ ನೀಚ ಇನಾಮ್ದಾರ ೧೦,೧೨ ಆ, ೯ ನನ್ನ ಗೃಹಿಣಿ ೧೦ ಆ, ೧೦ ನನ್ನ ಅತ್ತಿಗೆ ೬ ಆ, ೧೧ ಪರಿವರ್ತನ ೪ ಆ, ೧೨ ಬಂಧುಪ್ರೇಮ ೮ ಆ, ೧೩ ಭಾಮಿನಿ ೮ ಆ, ೧೪ ಭಾವಭಿನ್ನತೆ ೨ ಆ,

೧೫ ಮೆಣಿ ೬ ಆ, ೧೬ ಮಹಾತ್ಮಾ ೩ ಆ, ೧೭ ಯೋಗಾಯೋಗ ೧-೮-೦ ರೂ. ೧೮ ರಾಜನಂದಿನಿ ೮ ಆ, ೧೯ ರಾಕಾಚಂದ್ರ ೮ ಆ, ೨೦ ವಿಚಿತ್ರ ಸಂಸಾರ ೩ ಆ, ೨೧ ವಿಲಕ್ಷಣ ಪತಿಸೇವೆ ೪ ಆ, ೨೨ ಸುಮತಿ ೬ ಆ, ೨೩ ಸೌಭಾಗ್ಯ ತಿಲಕ ೧, ೦-೧೪-೦ ರೂ, ೨೪ ಸದ್ಗುಣಿಕಮಲಾ ೧ರೂ ೨೫ ಸತಿಸಾಹಸ ೪ ಆ, ೨೬ ಸ್ಕೂಲ ಮಿಸ್ಟ್ರೆಸ್೧। ರೂ, ೨೭ ಸಾಧನ-ಕುಟೀರ ೧।, ೧-೨-೦ ರೂ.

**ಪತ್ತೇದಾರಿ ಕಾದಂಬರಿ:**—೧ ಅಂಬಿಕೆ ೧। ರೂ, ೨ ಇಂದುಮುಖಿ ೮ಆ, ೩ ಕಳವೋ ಕೊಲೆಯೊ? ೬ ಆ, ೪ ಕಳ್ಳನಿಗೆ ಕಾಣಿಕೆ ೮ ಆ, ೫ ಕೃತಕ ಕೈಬೆರಳು ೧ ರೂ, ೬ ಘಾತುಕ ಶಿತಿಕಂಠ ೧೦ ಆ, ೭ ತುಬ್ಬುಗಾರಸುಬ್ಬಣ್ಣ ೧। ರೂ, ೮ ನಿಗೂಢ ಕೊಲೆ! ೮ ಆ, ೯ ಪತ್ತೇದಾರ ನರಸಿಂಗರಾಯ೪ ಆ, ೧೦ ನನ್ನ ಗತಿ (ಅಚ್ಚಿನಲ್ಲಿ) ೧೧ ಫಿರಂಗಿಯ ಪ್ರತಿಹಿಂಸೆ ೧ ರೂ, ೧೨ ಭಗವಾನ್‌ದಾಸ ೧ ರೂ, ೧೩ ಭಯಂಕರ ಕೊಲೆ ೧೨ ಆ, ೧೪ ಭೀಷಣ ಸಾಹಸ ೧೪ ಆ, ೧೫ ಮಗನೇ ಅಲ್ಲ ೨ ಆ, ೧೬ ಮೋಹಿನಿ ೧||, ೧। ರೂ. ೧೭ ಮೋಜಿನ ಜೀವನ ೧।, ೧ ರೂ, ೧೮ ಮಾಯಾವತಿ ೧। ರೂ, ೧೯ ರಾಜಕೀಯ ಗುಪ್ತರಹಸ್ಯ ೧||, ೧। ರೂ ೨೦ ಲಲಿತೆ ೧೦ ಆ, ೨೧ ವಿಚಿತ್ರ ಚಟ ೮ ಆ, ೨೨ ವಿಲಕ್ಷಣ ಸಾಹಸ ೮ ಆ, ೨೩ ಶ್ವೇತಾಂಬರಿ ೩ ಆ.

**ಪೌರಾಣಿಕ ಕಾದಂಬರಿ:**—೧ ದ್ರೋಣಾಚಾರ್ಯ ೩ಆ, ೨ ಸತೀ-ಸುಕನ್ಯೆ ೮ ಆ, ೩ ವೀರ ವಿದುಲೆ ೩ ಆ, ೪ ಸತೀ-ಸೀಮಂತಿನಿ ೨ ಆ.

**ಚರಿತ್ರೆಗಳು:**—೧ ಆನಂದಮೂರ್ತಿ ೩ ಆ, ೨ ಶ್ರೀ ಏಕನಾಥ ಚರಿತ್ರೆ ೧ ರೂ, ೩ ಕೇಶವ ಸ್ವಾಮಿಗಳು ೨ ಆ, ೪ ಕನಕಮಹಿಮಾದರ್ಶ ೮ ಆ, ೫ ಗಿರಿಯಮ್ಮನ ಚರಿತ್ರೆ ೮ ಆ, ೬ ಗುಜರಾಥದ ಇತಿಹಾಸ ೬ ಆ, ೭ ಶ್ರೀ ಚಿದಂಬರ ವಿಜಯ ೧||| ರೂ, ೮ ಜಯರಾಮ ಸ್ವಾಮಿಗಳು ೩ ಆ, ೯ ಟೆಂಬೇಮಹಾರಾಜರು ೧೦ ಆ, ೧೦ ನಾರಾಯಣ ಭಗವಾನರು ೮ ಆ; ೧೧ ನಾರಾಯಣ ಮಹಾರಾಜ ೪ ಆ, ೧೨ ನಾಗಲಿಂಗಪ್ಪನವರು ೨ ಆ, ೧೩ ಸಂತ-ತುಕಾರಾಮ ೧ ರೂ, ೧೪ ಬೆಳದಡಿ ಬ್ರಹ್ಮಾನಂದರು ೨ ಆ, ೧೫ ಶ್ರೀ ಬ್ರಹ್ಮೇಂದ್ರಸ್ವಾಮಿ ೪ ಆ, ೧೬ ಮರಾಟರೂ-ಇಂಗ್ಲಿಷರೂ ೧ ರೂ, ೧೭. ಸ. ರಾಮದಾಸರು ೧-೨-೦ ರೂ, ೧೮ ರಾಘವೇಂದ್ರವಿಜಯ ೧|| ರೂ, ೧೯ ರಂಗನಾಥ ಸ್ವಾಮಿಗಳು ೫ ಆ, ೨೦ ಸ್ವಾಮಿ ಶ್ರದ್ಧಾನಂದ ೧೨ ಆ, ೨೧ ಶ್ರೀಪಾದರಾಜ ಕಥಾಮೃತ ೧೨ ಆ. ೨೨ ಶೇಷಾಚಲಸಾಧು (ಪದ್ಯ) ೧೦ ಆ, ೨೩ ಸಾ ಸದಾಶಿವ ಲೀಲೆ ೪ ಆ, ೨೪ ಸಮರ್ಥ ಪಂಚಾಯತನ ೨ ರೂ, ೨೫ ಸೌರಾಷ್ಟ್ರ ೫ ಆ, ೨೬ ಜ.ಸು. ಆಚಾರ್ಯರು ೧೨ ಆ, ೨೭ ಜ್ಞಾನೇಶ್ವರರು ೮ ಆ.

**ನಾಟಕಗಳು:**— ೧ ಆಚಾರ್ರ್ಯವರಗಳು ೪ ಅ, ೨ ಜಲಂಧರ ೮ ಆ, ೩ ದೇವ-ದಾನವರು ೧೨ ಆ, ೪ ನಿರ್ಭಾಗ್ಯ ಭಾರತಿ ೬ ಆ, ೫ ನಾರದಲೀಲಾ ೮ ಆ, ೬ ಪನ್ನೆ ೬ ಆ, ೭ ಪ್ರೇಮಲೀಲಾ ೧ ರೂ, ೮ ಮೋಜಿನ ಮರಣ ೮ ಆ.

**ಪಾರಮಾರ್ಥಿಕ-ಇತರ:**— ೧ ಆನಂದರಾಮಾಯಣ ೧॥ ರೂ, ೨ ಈಶಾವಾಸ್ಯೋಪನಿಷತ್ತು ೧೦ ಆ. ೩ ಏ. ಅವಧೂತಗೀತೆ ೧ ರೂ, ೪ ದಿನಕರರಾಮದಾಸ-ಏಲಗೀತೆ ೮ ಆ ೫ ಕರ್ನಾಟಕ ಕಥಾಸರಿತ್ಸಾಗರ ೨॥ ರೂ, ೬ ನಾಮಬೋಧ(ಸಿಲ್ಕು ಇಲ್ಲ) ೬ ರೂ, ೭ ಮಡಿ-ಮೈಲಿಗೆಗಳ ಗುಟ್ಟು ೪ ಆ, ೮ ಮಲ್ಹಾರಿ ಮಹಾತ್ಮ್ಯ ೮ ಆ, ೯ ರೇಣುಕಾ ಮಾಹಾತ್ಮ್ಯ ೪ ಆ, ೧೦ ವೇಂಕಟೇಶ ಮಾಹಾತ್ಮ್ಯ ೧ ರೂ, ೧೧ ಶೇಷಾಚಲ ಬೋಧಾಮೃತ ೧ ರೂ, ೧೨ ಹಂಸಗೀತೆ ೬ ಆ. ೧೩ ಕರ್ನಾಟಕಕ್ಕೆ ದೇವತೆಗಳು ೧೦ ಆ, ೧೪ ಜ್ವರ ಪ್ರಕರಣ ೧ ರೂ, ೧೫ ಧರ್ಮಸಿಂಧು ೧ ರೂ, ೧೬ ಪ್ರಗತಿ-ದಾಸ್ಯವಿಮೋಚನ ೬ ಆ, ೧೭ ಮಿತ್ರದುಃಖ ೪ ಆ.

**ಧಾರ್ಮಿಕ:**—೧ ಕಾಣ್ವತ್ರಿಕಾಲಸಂಧ್ಯಾ ೨ ಆ, ೨ ಕಾಣ್ವ ನಿತ್ಯವಿಧಿ ೮ ಆ ದೇವನಾಗರಿ ಲಿಪಿಯ ಕಾಣ್ವ ವೈದಿಕ ಪುಸ್ತಕಗಳು— ೧ ಶು. ಯ. ಕಾಣ್ವ ಸಂಹಿತೆ ೩ ರೂ, ೨ ಶಾಂತಿಮಾರ್ತಂಡ ೨ ರೂ, ೩ ಶ್ರಾದ್ಧ ಮಾರ್ತಂಡ ೧ ರೂ, ೪ ಸಂಸ್ಕಾರ ಮಾರ್ತಂಡ ೨ ರೂ, ೫ ನಿತ್ಯವಿಧಿ(ಆಚಾರಮಾರ್ತಂಡ) ೧ ರೂ. ೬ ಉತ್ಸರ್ಜನೋಪಾಕರಣ (ಶ್ರಾವಣಿ) ೮ ಆ, ೭ ಅಗ್ನಿಮುಖ ವಿಧಿಃ ೨ ಆ, ೮ ಋಗ್ವೇದೀಯ ತ್ರಿಕಾಲಸಂಧ್ಯಾ ೨ ಆ.

ವಿಳಾಸ— ಭಿ. ಪ. ಕಾಳೆ, ಪೋಸ್ಟ ಆನಂದವನ, ಜಿಲ್ಲಾ ಧಾರವಾಡ.

---

